# ಹೈದ್ರಾಬಾದ್ ಕರ್ನಾಟಕದ ಆಯ್ದ ಅಲೆಮಾರಿ ಸಮುದಾಯಗಳ ಸಂಗೀತ - ಒಂದು ಅಧ್ಯಯನ

ಸಂಗೀತಶಾಸ್ತ್ರ ವಿಷಯದಲ್ಲಿ ಪಿಹೆಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸಿದ ಮಹಾಪ್ರಬಂಧ

ಸಂಶೋಧಕ
ತಿಮ್ಮಣ್ಣ ಭೀಮರಾಯ

ಮಾರ್ಗದರ್ಶಕರು
ಡಾ. ಜ್ಯೋತಿಲಕ್ಷ್ಮಿ ಡಿ.ಪಿ.
ಮುಖ್ಯಸ್ಥರು, ಸಂಗೀತ ವಿಭಾಗ
ಎಸ್.ಜೆ.ಎಂ.ವಿ.ಎಸ್. ಕಲಾ ಹಾಗೂ ವಾಣಿಜ್ಯ
ಮಹಿಳಾ ಮಹಾವಿದ್ಯಾಲಯ, ಹುಬ್ಬಳ್ಳಿ

307.772
BHE

ಲಲಿತ ಕಲಾ ನಿಕಾಯ
ಸಂಗೀತ ಮತ್ತು ನೃತ್ಯ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೯-೨೦

# ಹೈದ್ರಾಬಾದ್ ಕರ್ನಾಟಕದ ಆಯ್ದ ಅಲೆಮಾರಿ ಸಮುದಾಯಗಳ ಸಂಗೀತ – ಒಂದು ಅಧ್ಯಯನ

ಸಂಗೀತಶಾಸ್ತ್ರ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ

ಸಂಶೋಧಕ
ತಿಮ್ಮಣ್ಣ ಭೀಮರಾಯ

ಮಾರ್ಗದರ್ಶಕರು
ಡಾ. ಜ್ಯೋತಿಲಕ್ಷ್ಮಿ ಡಿ.ಪಿ.
ಮುಖ್ಯಸ್ಥರು, ಸಂಗೀತ ವಿಭಾಗ
ಎಸ್.ಜೆ.ಎಮ್.ವಿ.ಎಸ್
ಕಲಾ ಮತ್ತು ವಾಣಿಜ್ಯ ಮಹಿಳಾ ಮಹಾವಿದ್ಯಾಲಯ, ಹುಬ್ಬಳ್ಳಿ

ಸಂಗೀತ ಮತ್ತು ನೃತ್ಯ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೯–೨೦

## ಮಾರ್ಗದರ್ಶಕರ ದೃಢೀಕರಣ ಪತ್ರ

**ತಿಮ್ಮಣ್ಣ ಭೀಮರಾಯ** ಅವರು **ಹೈದ್ರಾಬಾದ್ ಕರ್ನಾಟಕದ ಆಯ್ದ ಅಲೆಮಾರಿ ಸಮುದಾಯಗಳ ಸಂಗೀತ – ಒಂದು ಅಧ್ಯಯನ** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಸಂಗೀತಶಾಸ್ತ್ರ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಂಗೀತ ಮತ್ತು ನೃತ್ಯ ವಿಭಾಗಕ್ಕೆ ಸಲ್ಲಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ದಿನಾಂಕ : 29/11/2019

ಸ್ಥಳ : ವಿದ್ಯಾರಣ್ಯ

**(ಡಾ. ಜ್ಯೋತಿಲಕ್ಷ್ಮಿ ಡಿ.ಪಿ.)**

ಮುಖ್ಯಸ್ಥರು, ಸಂಗೀತ ವಿಭಾಗ

ಎಸ್.ಜೆ.ಎಮ್.ವಿ.ಎಸ್

ಕಲಾ ಮತ್ತು ವಾಣಿಜ್ಯ ಮಹಾವಿದ್ಯಾಲಯ

ಹುಬ್ಬಳ್ಳಿ

## ಪ್ರಮಾಣ ಪತ್ರ

**ಹೈದ್ರಾಬಾದ್ ಕರ್ನಾಟಕದ ಆಯ್ದ ಅಲೆಮಾರಿ ಸಮುದಾಯಗಳ ಸಂಗೀತ – ಒಂದು ಅಧ್ಯಯನ** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಸಂಗೀತಶಾಸ್ತ್ರ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಎಸ್.ಜೆ.ಎಮ್.ವಿ.ಎಸ್. ಕಲಾ ಮತ್ತು ವಾಣಿಜ್ಯ ಮಹಿಳಾ ಮಹಾವಿದ್ಯಾಲಯ, ಸಂಗೀತ ವಿಭಾಗದ ಮುಖ್ಯಸ್ಥರು ಮತ್ತು ಸಹಾಯಕ ಪ್ರಾಧ್ಯಾಪಕರಾದ **ಡಾ. ಜ್ಯೋತಿಲಕ್ಷ್ಮಿ ಡಿ.ಪಿ.** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿ ಇಲ್ಲವೇ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ದಿನಾಂಕ : 29/11/2019
ಸ್ಥಳ : ವಿದ್ಯಾರಣ್ಯ

**(ತಿಮ್ಮಣ್ಣ ಭೀಮರಾಯ)**
ಸಂಶೋಧಕರು
ಸಂಗೀತ ಮತ್ತು ನೃತ್ಯ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಪರಿವಿಡಿ

## ಅಧ್ಯಾಯ ಒಂದು

# ಪ್ರಸ್ತಾವನೆ

## ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ ಮತ್ತು ವಿಧಾನ

**ಪ್ರವೇಶ**

"ಗೀತಂ ವಾದ್ಯಂ ತಥಾ ನೃತ್ಯಂ ತ್ರಯಂ ಸಂಗೀತ ಮುಚ್ಯತೇ" ಗಾಯನ, ವಾದನ, ನರ್ತನ ಈ ಮೂರರ ತ್ರಿವೇಣಿ ಸಂಗಮವೇ ಸಂಗೀತ(ಸತ್ಯನಾರಾಯಣ, ಭಾರತೀಯ ಸಂಗೀತದಲ್ಲಿ ಪರಿಭಾಷಾ ಪ್ರಯೋಗ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ೧೯೮೬, ಪು.೭೬). ಸಂಗೀತ ಎಂಬುದು ಒಂದು ಅತಿ ಪುರಾತನವಾದಂತ ಕಲೆಯಾಗಿದೆ. ಅರವತ್ತುನಾಲ್ಕು ವಿದ್ಯೆಗಳಲ್ಲಿ ಈ ಸಂಗೀತವು ಒಂದು. ಪ್ರಾಣಿ ಹಾಗೂ ಮನುಷ್ಯ ಹುಟ್ಟುವ ಮೊದಲೇ ಆಕರ್ಷಕವಿಲ್ಲದ ರೀತಿಯಲ್ಲಿ ನಿರಂತರವಾಗಿ ನಿಸರ್ಗದಲ್ಲಿತ್ತು. ನಿಸರ್ಗದೊಡನೆ ಹುಟ್ಟಿ ನಿಸರ್ಗದಲ್ಲೇ ಬೆಳೆದು ನಿಸರ್ಗದಿಂದ ಸ್ಫೂರ್ತಿ ಪಡೆದು ಮನುಷ್ಯ ಹಾಡಲು ಪ್ರಾರಂಭಿಸಿದ. ಅಂದು ಪ್ರಾರಂಭಿಸಿದ ಕಾಲದಿಂದಲೂ ಪ್ರಸ್ತುತ ಕಾಲದವರೆಗೆ ತನ್ನ ವಿಕಾಸ ಹಂತದಲ್ಲಿ ಹಲವಾರು ಬದಲಾವಣೆಗಳನ್ನು ಮೈಗೂಡಿಸಿಕೊಂಡು ವೈವಿಧ್ಯಮಯವಾಗಿ ಬೆಳೆದುಬಂದ ಸಂಗೀತವು ಇವತ್ತಿನ ದಿವಸ ಆಗಾಧವಾದ, ಅಮೋಘವಾದ ದಟ್ಟ ಅರಣ್ಯವಾಗಿ ಬೆಳೆದು ನಿಂತಿದೆ. ಸಂಗೀತ ಕುರಿತಾಗಿ ಪ್ರಪ್ರಥಮ ಬಾರಿಗೆ ಲಿಖಿತ ಆಧಾರ ದೊರೆಯುವುದು ವೇದಗಳ ಕಾಲದಲ್ಲೇ ಆಗಿದೆ. ವೇದಗಳ ಕಾಲದ ಸಂಗೀತವನ್ನು ಗಮನಿಸುವಾಗ ಅಲ್ಲಿ ಪ್ರಮುಖವಾದ ಎರಡು ಸಂಗೀತ ಪ್ರಕಾರಗಳಿರುವುದು ಕಂಡುಬರುತ್ತದೆ. ಅವುಗಳೆಂದರೆ,

೧. ಅರಣ್ಯಗೇಯ ಕ್ರಮ  ೨. ಗ್ರಾಮಗೇಯ ಕ್ರಮ

ಅರಣ್ಯಗೇಯ ಎಂದರೆ ಮತನುಸಂಬಂಧವಾದ ಕರ್ಮವಿಧಿಗಳಿಗೆ ಸಂಬಂಧಿಸಿದ್ದು, ಗ್ರಾಮಗೇಯ ಸಂಗೀತವೆಂದರೆ ಕ್ಲಿಷ್ಟತೆಯನ್ನು ದೂರಸರಿಸಿ ಶ್ರೀಸಾಮಾನ್ಯರ ರಂಜನೆಗೆ ನಿಲುಕುವಂಥದ್ದು.(ನಾಗಪುಷ್ಪಲತಾ, ಕರ್ನಾಟಕ ಜನಪದ ರಂಗಕಲೆಗಳ ಕೋಶ, ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ, ೨೦೦೪, ಪು.೨) ಈ ಗ್ರಾಮಗೇಯ ಕ್ರಮವೇ ಪ್ರಸ್ತುತ ಜನಪದ ಸಂಗೀತ. ಜನಪದ ಸಂಗೀತವು ಯಾವುದೇ ಕಟ್ಟುಪಾಡುಗಳಿಗೆ ಒಳಪಡದೆ ಸರಳತೆಯನ್ನು ಮೈಗೂಡಿಸಿಕೊಂಡಿದ್ದರೆ ಶಿಷ್ಟ(ಶಾಸ್ತ್ರ) ಅಥವಾ ಪ್ರೌಢ ಸಂಗೀತವು ಶಾಸ್ತ್ರೀಯ ನಿಯಮಗಳನ್ನು ಒಳಗೊಂಡಿದೆ. ಈ ನಿಟ್ಟಿನಲ್ಲಿ ಎರಡು ಸಂಗೀತ ಪ್ರಕಾರಗಳು ತಮ್ಮದೇ ಆದ ವಿಶೇಷತೆಯನ್ನು ಕಾಪಾಡಿಕೊಂಡು ಬರುವಲ್ಲಿ ಯಶಸ್ವಿಯಾಗಿದೆ.

ಜನಪದ ಸಂಗೀತ ಜನಸಾಮಾನ್ಯರ ಸ್ವತ್ತು ಪ್ರಾರಂಭದಲ್ಲಿ ಒಬ್ಬ ಮನುಷ್ಯನಿಂದಲೇ ರಚಿಸಲ್ಪಟ್ಟ ಅಥವಾ ಹಾಡಲ್ಪಟ್ಟ ಹಾಡುಗಳು ನಂತರದಲ್ಲಿ ಒಬ್ಬರಿಂದ ಒಬ್ಬರಿಗೆ ಬಾಯಿಂದ ಬಾಯಿಗೆ ಹರಡಿ ಕೊನೆಗೆ ಅಲ್ಲಿನ ಮುದ್ರೆಯೊಡನೆ ಜೀವಂತಿಕೆಯನ್ನು ಪಡೆದುಕೊಳ್ಳುತ್ತದೆ. ಈ ಜನಪದ ಹಾಡಿನ ಸಾಹಿತ್ಯವನ್ನು ರಚಿಸುವ ಅಥವಾ ತಿದ್ದುವ, ಹಾಡುವ ಕಾರ್ಯವೆಲ್ಲವು ಜನಸಾಮಾನ್ಯರಗದ್ದೇ ಆಗಿರುತ್ತದೆ. ಆದ್ದರಿಂದ ಇಲ್ಲಿ ಯಾವುದೇ ಕವಿ ಅಥವಾ ಗಾಯಕನ ಹೆಸರು ಕಂಡುಬರುವುದಿಲ್ಲ. ಆದರೆ ಪ್ರೌಢ ಸಂಗೀತದಲ್ಲಿ ಆ ರೀತಿ ಇರುವುದಿಲ್ಲ. ಪ್ರೌಢ ಸಂಗೀತ ಶಾಸ್ತ್ರೀಯ ಕಟ್ಟುಪಾಡುಗಳನ್ನು ಒಳಗೊಂಡು ಸಂಪ್ರದಾಯ ಬದ್ಧವಾಗಿ ನಿರ್ಮಾಣಗೊಂಡ ಪರಿಶ್ರಮದಿಂದ ಅರ್ಜಿಸಲು ಸಾಧ್ಯವಾಗುವ ಸಂಗೀತವಾಗಿದೆ. ಇಲ್ಲಿ ಯಾವುದೇ ಹಾಡು, ಅದರ ರಚನಕಾರನ ಸಂಪೂರ್ಣ ಸ್ವತ್ತಾಗಿರುತ್ತದೆ. ಅದನ್ನು ತಿದ್ದುವ ಹಕ್ಕು ರಚನಕಾರನಿಗೆ ಮಾತ್ರ ಇರುತ್ತದೆ. ಜನಪದ ಸಂಗೀತವು ಜನಸಾಮಾನ್ಯ ಜನರಿಗೆ ಸರಳವಾಗಿ ನಿಲುಕುವಂತಹ ಸಂಗೀತವಾದರೆ, ಪ್ರೌಢ ಸಂಗೀತವು ವಿದ್ವಾಂಸರ ಪಾಂಡಿತ್ಯ ಪ್ರದರ್ಶನದ ಸಂಗೀತವಾಗಿದೆ.

ಪ್ರಸ್ತುತ ಕಾಲದಲ್ಲಿ ಜನರ ಮನೋಭಿಲಾಷೆಯ ಹಿನ್ನೆಲೆಯಲ್ಲಿ ಇದು ತುಂಬಾ ಸ್ವಾಗತಾರ್ಹ. ಜನಪದ ಸಂಗೀತ ಹಾಗೂ ಪ್ರೌಢ ಸಂಗೀತ ಅಥವಾ ಶಿಷ್ಟ ಸಂಗೀತಗಳಲ್ಲಿನ ಕೊಳ್ಳು-ಕೊಡಿಗೆ ಪ್ರಕ್ರಿಯೆ ನಿರಂತರ ಎಂಬ ಮಾತಿಗೆ ಅಲೆಮಾರಿ ಸಮುದಾಯ ಸಂಗೀತಗಳು ಹೊರತಲ್ಲ. ಅಲೆಮಾರಿಗಳ ಸಂಗೀತದ ಪ್ರಾರಂಭದಲ್ಲಿ ಅಪ್ಪಟ್ಟ ಜನಪದ ಶೈಲಿಯಲ್ಲಿ ಹಾಡಲ್ಪಡುತ್ತಿದ್ದ ಅಲೆಮಾರಿ ಸಂಗೀತ ಸಮುದಾಯವು ಪ್ರಸ್ತುತ ಶಿಷ್ಟ ಸಂಗೀತದೊಡನೆ ಬೆರೆತು ತಮ್ಮ ಕಲೆಯನ್ನು ಪ್ರದರ್ಶನ ಮಾಡುತ್ತಿದ್ದಾರೆ. ಅಲೆಮಾರಿ ಸಮುದಾಯಗಳ ಸಂಗೀತ ಪರಿಪೂರ್ಣವಾಗಿ ಜನಪದವೂ ಅಲ್ಲ ಶಿಷ್ಟ ಸಂಗೀತವೂ ಅಲ್ಲ ಪ್ರಸ್ತುತ ಕಾಲಕ್ಕೆ ತಕ್ಕಂತೆ ಜನಪದ ಮತ್ತು ಶಿಷ್ಟ ಸಂಗೀತ ಎರಡನ್ನು ಒಳಗೊಂಡು ತಮ್ಮ ಸಂಗೀತ ಕಲೆಯನ್ನು ಪ್ರದರ್ಶನ ನೀಡುತ್ತಿದ್ದಾರೆ. ಹೀಗಾಗಿ ಇವುಗಳ ಬಗೆಗಿನ ಅಧ್ಯಯನ ಸಂಗೀತ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಬಹಳ ಮುಖ್ಯವಾದದು ಎನಿಸುತ್ತದೆ.

ಹೈದಾರಾಬಾದ್ ಕರ್ನಾಟಕದಲ್ಲಿ ಅಲೆಮಾರಿ ಸಮುದಾಯಗಳ ಕುರಿತು ಬಹಳಷ್ಟು ಸಂಶೋಧನೆಗಳು ನಡೆದಿವೆ. ಆದರೆ ಸಂಗೀತಕ್ಕೆ ಸಂಬಂಧಿಸಿದಂತೆ ನಡೆದ ಸಂಶೋಧನೆ ಅಧ್ಯಯನ ಕಾರ್ಯಗಳು ಬಹಳ ಕಡಿಮೆ. ಅದರಲ್ಲಿ ಅಲೆಮಾರಿ ಸಮುದಾಯಗಳ ಸಂಗೀತ ಬಗೆಗಿನ ತಳಸ್ಪರ್ಶಿ ಅಧ್ಯಯನವಂತೂ ಬಹಳಷ್ಟು ಕಡಮೆಯೆಂದೇ ಹೇಳಬಹುದು. ಆದ್ದರಿಂದ ಈ ನಿಟ್ಟಿನಲ್ಲಿ ಅಲೆಮಾರಿ ಸಮುದಾಯಗಳ ಸಂಗೀತ ಕುರಿತು ಅಧ್ಯಯನ ಮಾಡಲು ನಾನು ಪ್ರಾರಂಭಿಸಿದೆ.

### ೧.೧. ಅಧ್ಯಯನದ ಉದ್ದೇಶ

ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಇಲ್ಲಿಯವರೆಗೆ ಬಂದಿರುವ ಪ್ರಾಥಮಿಕ, ಅನುಷಂಗಿಕ, ಜಾನಪದ, ಐತಿಹ್ಯ, ದಂತಕಥೆ, ಲಾವಣಿಗಳು, ಜಾನಪದ ಗೀತೆಗಳು ಹಾಗೂ ಮೌಖಿಕ ಆಕರಗಳನ್ನು ಗಂಭೀರವಾಗಿ ಈ ಸಂದರ್ಭದಲ್ಲಿ ಬಳಸಿಕೊಳ್ಳಲಾಗಿದೆ. ಏಕೆಂದರೆ ಈ ಅಧ್ಯಯನಕ್ಕೆ ಸಂಬಂಧಿಸಿದಂತೆ ಅಧ್ಯಯನಗಳು ನಡೆಯದೆ ಇರುವ ಹಿನ್ನೆಲೆಯಲ್ಲಿ ಲಿಖಿತ ಆಕರಗಳನ್ನು ಬಳಸಿಕೊಳ್ಳುವುದರ ಜೊತೆ

ಜೊತೆಗೆ ಮೌಖಿಕ ಆಕರಗಳನ್ನು ಪ್ರಮುಖವಾಗಿ ಬಳಸಿಕೊಂಡು ಅಧ್ಯಯನದ ವಿಧಾನವನ್ನು ರೂಪಿಸಿ ಕೊಳ್ಳಲಾಗಿದೆ.

ಅಲೆಮಾರಿ ಸಮುದಾಯಗಳ ಸಂಗೀತ ಉಗಮದ ಬಗ್ಗೆ ನಿಖರವಾಗಿ ಹೇಳಲು ಸಾಧ್ಯವಿಲ್ಲ. ಆದರೂ ಇದು ಮೊದಲು ಜನಪದ ಶೈಲಿಯಲ್ಲಿದ್ದು ತದನಂತರ ಶಾಸ್ತ್ರೀಯ ಮನೋಧರ್ಮವನ್ನು ಮೈಗೂಡಿಸಿಕೊಂಡು ಜನಪದ ಮತ್ತು ಪ್ರೌಢ ಸಂಗೀತ ಅಥವಾ ಶಿಷ್ಟ ಸಂಗೀತವನ್ನು ಒಳಗೊಂಡಿತ್ತು. ತನ್ನದೇ ಆದ ವಿಶಿಷ್ಟ ಶೈಲಿಯ ಹಿನ್ನೆಲೆಯಲ್ಲಿ ಸಾಗಿ ಬಂದಿದೆ. ಅಲೆಮಾರಿ ಸಮುದಾಯಗಳ ಸಂಗೀತದಲ್ಲಿ ಬರುವ ಗಾಯನದ ವಿವಿಧ ಶೈಲಿಗಳ ಬಗ್ಗೆ, ವಿವಿಧ ಪ್ರಕಾರದ ವಾದ್ಯಗಳ ಬಗ್ಗೆ ಹಾಗೂ ಅವುಗಳನ್ನು ನುಡಿಸುವ ಬಗ್ಗೆ, ವಾದ್ಯಗಳ ತಯಾರಿಕೆ, ಸಂಗೀತ ಉಗಮ ಮತ್ತು ವಿಕಾಸದ ಕುರಿತು ಸಂಕ್ಷಿಪ್ತವಾಗಿ ತಿಳಿದುಕೊಳ್ಳುವುದು. ಅಲೆಮಾರಿ ಸಮುದಾಯಗಳ ಸಂಗೀತ ಇತ್ತೀಚಿನ ದಿನಗಳಲ್ಲಿ ಮರೆಮಾಚಿ ಹೋಗುತ್ತಿದ್ದರಿಂದ ಇಂತಹ ಸಂಗೀತ ಗೀತೆಗಳಿಗೆ "ಸ್ವರ ಪ್ರಸ್ತಾರ" ಹಾಕುವ ಮೂಲಕವಾಗಿ ಸಮುದಾಯದ ಹಾಡುಗಳನ್ನು ರಾಗದ ಚೌಕಟ್ಟಿನಲ್ಲಿ ಹಿಡಿದಿಡುವ ಪ್ರಯತ್ನ ಮಾಡುವುದು ಈ ಅಧ್ಯಯನದ ಮಹತ್ವ ಉದ್ದೇಶವಾಗಿದೆ.

### ೧.೨. ಅಧ್ಯಯನದ ವ್ಯಾಪ್ತಿ

ಅಧ್ಯಯನಕ್ಕೆ ಒಂದು ಚೌಕಟ್ಟು ಬೇಕಾಗುವುದರಿಂದ ಮತ್ತು ಅಧ್ಯಯನದ ದೃಷ್ಟಿಯಿಂದ ಸಮಯವನ್ನು ಮುಖ್ಯವಾಗಿಟ್ಟುಕೊಂಡು ಕೆಲವು ಅಲೆಮಾರಿಗಳು ವಾಸಿಸುವ ಪ್ರದೇಶಗಳನ್ನು ಗುರುತಿಸಿಕೊಂಡು ಅಧ್ಯಯನ ಕೈಗೊಳ್ಳಲು ಹೈದರಾಬಾದ್ ಕರ್ನಾಟಕ ವ್ಯಾಪ್ತಿಯಲ್ಲಿ ಬರುವ ಜಿಲ್ಲೆಗಳನ್ನು ಆಯ್ಕೆ ಮಾಡಿಕೊಂಡಿದ್ದೇನೆ. ಜಿಲ್ಲೆಯಲ್ಲಿ ವಾಸಿಸುವ ಅಲೆಮಾರಿ ಸಮುದಾಯಗಳ ಸಂಗೀತ ಸ್ಥಿತಿಗತಿಗಳ ಬಗ್ಗೆ ಸವಿಸ್ತಾರವಾದ ರೀತಿಯಲ್ಲಿ ತಿಳಿಯಲು ಅನುಕೂಲವಾಗುವಂತೆ ವ್ಯಾಪ್ತಿಯನ್ನು ಜಿಲ್ಲೆಗಳಿಗೆ ಸೀಮಿತ ಗೊಳಿಸಿಕೊಂಡಿದ್ದೇನೆ.

ಹೈದರಾಬಾದ್ ಕರ್ನಾಟಕದ ವ್ಯಾಪ್ತಿಯಲ್ಲಿ ಬರುವ ಬೀದರ, ಕಲಬುರ್ಗಿ, ಯಾದಗಿರಿ, ರಾಯಚೂರು, ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲೆಗಳನ್ನು ಮಾತ್ರ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಈ ಹೈದರಾಬಾದ್ ಕರ್ನಾಟಕದಲ್ಲಿ ಹಲವಾರು ಸಮುದಾಯಗಳು ಕಂಡುಬರುತ್ತವೆ. ಆದರೆ ಇವೆಲ್ಲಾ ಸಮುದಾಯಗಳು ಅಧ್ಯಯನ ಮಾಡಲು ತುಂಬಾ ಕಷ್ಟಕರವಾಗಿರುವುದರಿಂದ ಕೊರಮ, ಹಂಡಿಜೋಗಿ, ಬುಡ್ಗಜಂಗಮ, ಚೆನ್ನದಾಸರ ಮತ್ತು ಗೊಂಧಳಿ ಸಮುದಾಯಗಳನ್ನು ಮಾತ್ರ ಅಧ್ಯಯನಕ್ಕೆ ಒಳಪಡಿಸಲಾಗಿದೆ.

### ೧.೩. ಅಧ್ಯಯನದ ಸ್ವರೂಪ

ಯಾವುದೇ ಒಂದು ಸಮುದಾಯದ ಅಧ್ಯಯನವೆಂದರೆ ಕೇವಲ ಅವರ ಮನೆ, ಆಚರಣೆ, ಸಂಪ್ರದಾಯ, ಆಚಾರ-ವಿಚಾರ ಮುಂತಾದವುಗಳ ಬಗ್ಗೆ ತಿಳಿಯದೆ ಹುಟ್ಟಿನಿಂದ ಸಾಯುವವರೆಗೆ ಸಂಭವಿಸಿದ ಎಲ್ಲಾ ಬಗೆಯ ಸನ್ನಿವೇಶಗಳನ್ನು ಅಧ್ಯಯನ ಮಾಡುವುದು ಅವಶ್ಯಕ.

ಇಂದಿನ ಆಧುನಿಕ ಸಮಾಜ ಅಲೆಮಾರಿಗಳನ್ನು ನಿರ್ಲಕ್ಷ್ಯ ಮಾಡುವುದರ ಮೂಲಕ ಪ್ರಾಚೀನ ಸಮಾಜದ ಪಾರಂಪರಿಕ ಜ್ಞಾನಶಾಖೆಯನ್ನು ಕಳೆದುಕೊಳ್ಳುತ್ತಿದೆ. ಈ ಅಲೆಮಾರಿಗಳು ನಾಗರಿಕ ಸಮಾಜಕ್ಕೆ ಬರುವ ನಿಟ್ಟಿನಲ್ಲಿ ಮತ್ತು ಅವರ ವೃತ್ತಿಸಂಗೀತ ಕುರಿತು ಈಗಾಗಲೇ ಅನೇಕ ಬಗೆಯ ಸಂಶೋಧನೆಗಳು ಕೇವಲ ಮೇಲ್ಪದರದಲ್ಲಿ ಚರ್ಚಿಸಲಾಗಿದೆ. ಹೀಗೆ ನಶಿಸುವ ಕಲೆಗಳ ಕುರಿತು, ತಲತಲಾಂತರಗಳಿಂದ ತಮ್ಮದೇ ಆದಂತ ಗಾಯನ, ವಾದನ, ನರ್ತನ ಮತ್ತು ವೇಷಭೂಷಣಗಳ ಅಸ್ಮಿತೆಯಿಂದ ಗುರುತಿಸಿಕೊಳ್ಳುವ ಅಲೆಮಾರಿಗಳು ತಾವು ಬಳಸುವಂತಹ ವಾದ್ಯಪರಿಕರಗಳು, ವಾದ್ಯಗಳ ತಯಾರಿಕ ಕ್ರಮ ಮತ್ತು ಹಾಡುವಂತಹ ಹಾಡುಗಳ ರಾಗ, ತಾಳ, ದಾಟಿ ಮತ್ತು ಶಾಸ್ತ್ರೀಯ ಚೌಕಟ್ಟನ್ನು ಕಾಯ್ದಿಟ್ಟುಕೊಳ್ಳುವ ಉದ್ದೇಶದಿಂದ ಅವರ ಹಾಡುಗಳಿಗೆ ಸ್ವರ ಪ್ರಸ್ತಾರವನ್ನಾಗಿ ಸ್ವರಲಿಪಿ ಪದ್ಧತಿಯಲ್ಲಿ ಬರೆದಿಡುವ ಪ್ರಯತ್ನದಿಂದ ಪಾರಂಪರಿಕ ಸಂಗೀತ ಜ್ಞಾನವನ್ನು ಉಳಿಸಿಕೊಳ್ಳುವ ಪ್ರಯತ್ನವೇ ಈ ಸಂಶೋಧನಾ ಪ್ರಬಂಧದ ಮೂಲ ಆಶಯವಾಗಿದೆ.

**ಅಧ್ಯಾಯ ಒಂದು:** ಪ್ರಸ್ತಾವನೆ ಆಗಿದ್ದು, ಪ್ರಸ್ತುತ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸಂಗೀತ ಸಮುದಾಯಗಳ ಕುರಿತು ಇಲ್ಲಿಯವರೆಗೂ ನಡೆದಿರುವ ಅಧ್ಯಯನಗಳು, ಅಧ್ಯಯನಕ್ಕಾಗಿ ಕೈಗೊಂಡ ವಿಧಾನಗಳು, ಅಧ್ಯಯನದ ರೂಪುರೇಷಗಳ ಕುರಿತು ಪರಿಶೋಧಿಸಲಾಗಿದೆ.

**ಅಧ್ಯಾಯ ಎರಡು:** ಹೈದ್ರಾಬಾದ್ ಕರ್ನಾಟಕದ ಪ್ರಾದೇಶಿಕ ಪಕ್ಷಿನೋಟ ಎಂಬ ಶೀರ್ಷಿಕೆಯಾಗಿದ್ದು, ಕರ್ನಾಟಕದ ಉತ್ತರ ತುದಿಯಲ್ಲಿರುವ ಹೈದ್ರಾಬಾದ್-ಕರ್ನಾಟಕ ಪ್ರದೇಶ ಬೀದರ, ಕಲಬುರ್ಗಿ, ರಾಯಚೂರು, ಕೊಪ್ಪಳ ಮತ್ತು ಬಳ್ಳಾರಿ ಜಿಲ್ಲೆಗಳನ್ನು ಒಳಗೊಂಡಿದೆ. ಸಾಂಸ್ಕೃತಿಕ ಚರಿತ್ರೆಯ ಏಳು-ಬೀಳುಗಳ ನಡುವೆ ಸ್ಥಳೀಯ ಸಮುದಾಯಗಳು ತಮ್ಮದೇ ಆದ ವಿಶಿಷ್ಟ ಸಂಸ್ಕೃತಿಯನ್ನು ಕಾಪಾಡಿಕೊಂಡು ಬಂದ ದುಡಿಯುವ ವರ್ಗಗಳ ಅಲೆಮಾರಿ ಸಮುದಾಯಗಳು ನಮ್ಮ ಸಾಂಸ್ಕೃತಿಕ ಚರಿತ್ರೆಯ ಪ್ರಮುಖ ಮೌಖಿಕ ಆಕಾರಗಳಂತೆ ಕಂಡುಬರುತ್ತದೆ.

ಇಲ್ಲಿಯೇ ಹಲವು ಅಲೆಮಾರಿ ಸಂಗೀತ ಸಮುದಾಯಗಳು ತಮ್ಮ ತಮ್ಮ ವೃತ್ತಿ ಕಲೆಗಳ ಮೂಲಕ ಸಮಾಜಕ್ಕೆ ವಿಶಿಷ್ಟವಾದ ಕೊಡುಗೆಗಳನ್ನು ಕೊಟ್ಟಿದೆ. ಹೈದ್ರಾಬಾದ್-ಕರ್ನಾಟಕ ಹಲವಾರು ಅಲೆಮಾರಿ ಸಂಗೀತ ಸಮುದಾಯಗಳನ್ನೊಳಗೊಂಡ ಒಂದು ವಿಶಿಷ್ಟ ಭೂಪ್ರದೇಶವಾಗಿದೆ. ಹಲವು ತಲ್ಲಣಗಳಿಗೆ ತನ್ನನ್ನು ಒಡ್ಡಿಕೊಂಡು ಅಭಿವೃದ್ಧಿ ಪಥದಲ್ಲಿ ಸಾಗುತ್ತಿರುವ ಈ ಪ್ರದೇಶದ ಸಾಂಸ್ಕೃತಿಕ ಬದುಕು ಮಾತ್ರ ಅತ್ಯಂತ ಶ್ರೀಮಂತವಾದದ್ದು. ಬಹುತೇಕ ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ ಮತ್ತು ಹಿಂದುಳಿದ ಅನೇಕ ಅಲೆಮಾರಿ ಸಂಗೀತ ಸಮುದಾಯಗಳ ಪ್ರಾತಿನಿಧಿಕ ರೂಪವಾಗಿ ಕಂಡುಬರುವ ಈ ಪ್ರದೇಶದ ಅಲೆಮಾರಿ ಸಂಗೀತ ಸಮುದಾಯಗಳು ಸಾಂಸ್ಕೃತಿಕ ಲೋಕಕ್ಕೆ ಕೊಟ್ಟ ಕೊಡುಗೆ ಅಪಾರ. ಅಂಥವುಗಳಲ್ಲಿ ಪ್ರಮುಖವಾಗಿರುವ ಹಂಡಿಜೋಗಿ, ಕೊರಮ, ಬುಡ್ಗಜಂಗಮ, ಗೊಂದಳಿ, ಚೆನ್ನದಾಸರ ಸಮುದಾಯಗಳು ಕುರಿತು ಅವಲೋಕಿಸಲಾಗಿದೆ.

**ಅಧ್ಯಾಯ ಮೂರು:** ಸಂಗೀತದ ಹುಟ್ಟು ಮತ್ತು ಬೆಳವಣಿಗೆ ಎಂಬ ಶೀರ್ಷಿಕೆಯಾಗಿದ್ದು, ಈ ಅಧ್ಯಾಯದಲ್ಲಿ ಸಂಗೀತದ ಉಗಮ ಮತ್ತು ವಿಕಾಸ ಹೇಗಾಯಿತು ಎಂಬುದರ ಕುರಿತು ಮಾಹಿತಿ ಸಂಗ್ರಹಿಸಲಾಗಿದೆ. ಸಂಗೀತ ಯಾವಾಗ? ಎಲ್ಲಿ? ಯಾರಿಂದ ಹುಟ್ಟಿತು? ಎಂದು ಪರಿಪೂರ್ಣವಾಗಿ ಹೇಳಲು ಸಾಧ್ಯವಿಲ್ಲ. ಏಕೆಂದರೆ ಸಂಗೀತದ ಹುಟ್ಟಿನ ಬಗೆಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿದ್ದು, ಸಂಗೀತದ ಉಗಮಕ್ಕೆ ಸಂಬಂಧಿಸಿದಂತೆ ಹಿಂದೂ ಧರ್ಮದ ಮೂಲ ಗ್ರಂಥಗಳಾದ ವೇದ ಮತ್ತು ಪುರಾಣಗಳನ್ನು ಆಧರಿಸಿದ ಹೇಳಿಕೆಗಳನ್ನು ಈ ಅಧ್ಯಯನದಲ್ಲಿ ಉಲ್ಲೇಖಿಸಲಾಗಿದೆ.

**ಅಧ್ಯಾಯ ನಾಲ್ಕು:** ಆಯ್ದ ಅಲೆಮಾರಿ ಸಮುದಾಯಗಳ ಹಿನ್ನೆಲೆ ಎಂಬ ಶೀರ್ಷಿಕೆಯಾಗಿದ್ದು, ಈ ಅಧ್ಯಾಯದಲ್ಲಿ ಹಂಡಿಜೋಗಿ, ಕೊರಮ, ಬುಡ್ಗಜಂಗಮ, ಗೊಂಧಳಿ, ಚೆನ್ನದಾಸ ಸಮುದಾಯ ಗಳನ್ನೊಳಗೊಂಡಂತೆ ಹೈದ್ರಾಬಾದ್ ಕರ್ನಾಟಕದ ಸಂಗೀತ ಸಮುದಾಯಗಳ ಹಿನ್ನೆಲೆಯನ್ನು ಶೋಧಿಸಲಾಗಿದೆ.

**ಅಧ್ಯಾಯ ಐದು:** ಅಲೆಮಾರಿ ಸಮುದಾಯದವರ ಸಂಗೀತ ಪ್ರಕಾರಗಳು ಎಂಬ ಶೀರ್ಷಿಕೆಯಾಗಿದ್ದು, ಹಂಡಿಜೋಗಿ, ಕೊರಮ, ಬುಡ್ಗಜಂಗಮ, ಗೊಂದಳಿ, ಚೆನ್ನದಾಸರ ಸಮುದಾಯಗಳ ಸಂಗೀತ ಕಲೆ, ವಾದ್ಯ ಪ್ರಕಾರಗಳು, ನರ್ತನ ಮತ್ತು ಹಾಡುಗಾರಿಕೆ ಪ್ರಕಾರಗಳು ಮತ್ತು ವೇಷಭೂಷಣ ಪ್ರಕಾರಗಳನ್ನು ಕುರಿತು ಅಧ್ಯಯನದ ಮುಖಾಂತರ ನಿರೂಪಿಸಲಾಗಿದೆ.

**ಅಧ್ಯಾಯ ಆರು:** ಗಾಯನ ಪ್ರಕಾರಗಳ ಸ್ವರಲಿಪಿ ಪದ್ಧತಿ ಎಂಬ ಶೀರ್ಷಿಕೆಯಾಗಿದ್ದು, ಆದಿ-ಅನಾದಿಕಾಲದಿಂದಲೂ ಹೈದ್ರಾಬಾದ್-ಕರ್ನಾಟಕದಲ್ಲಿ ಅಲೆಮಾರಿ ಸಮುದಾಯಗಳ ಸಂಗೀತ ಆಕರ್ಷಕ ದಾಟಿ, ಸರಳ ಭಾಷೆ, ತಾಳ ಲಯಕಾರಿಗಳನ್ನೊಳಗೊಂಡ ಸುಂದರ ಸರಳತೆಯೊಂದಿಗೆ ಅನೇಕ ನೀತಿ ಪ್ರಕಾರಗಳನ್ನು ನಮಗೆ ಕಟ್ಟಿಕೊಟ್ಟವೆ(ನಮ್ಮೊಂದಿಗಿವೆ).

ಹಂಡಿಜೋಗಿ, ಕೊರಮ, ಬುಡ್ಗಜಂಗಮ, ಗೊಂದಳಿ, ಚೆನ್ನದಾಸರ ಸಮುದಾಯಗಳ ಕಲಾವಿದರು ಹಾಡುವ ಹಾಡುಗಳನ್ನು ಸಂಗ್ರಹಿಸಿಕೊಳ್ಳಲಾಗಿದೆ. ಆ ಹಾಡುಗಳಿಗೆ ಸ್ವರ ಪ್ರಸ್ತಾರವನ್ನಾಗಿ ಸ್ವರಲಿಪಿ ಪದ್ಧತಿಯಲ್ಲಿ ಬರೆದಿಡುವ ಪ್ರಯತ್ನವನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ. ಅಲೆಮಾರಿ ಸಮುದಾಯಗಳ ಸಂಗೀತದಲ್ಲಿ ಹಿಂದೂಸ್ತಾನಿ ಸಂಗೀತದ ರಾಗಗಳ ಬಳಕೆ ಇರುವುದು ತಿಳಿದುಬರುತ್ತದೆ. ಈ ರಾಗಗಳ ಸ್ವರಲಿಪಿಯಲ್ಲಿ ಬಳಸಿದ ಈ ರಾಗಗಳು ಅಲೆಮಾರಿ ಸಂಗೀತದಲ್ಲಿ ತಲೆಮಾರಿನ ಮೂಲ ದಾಟಿಗಳನ್ನೊಳಗೊಂಡಂತಹ ರಾಗಗಳಾಗಿವೆ. ಅಲೆಮಾರಿ ಸಮುದಾಯದ ಕಲಾವಿದರಿಗೆ ತಮ್ಮ ಹಾಡುಗಾರಿಕೆಯಲ್ಲಿ ರಾಗಗಳು ಶಾಸ್ತ್ರೀಯ ಸಂಗೀತದ ರಾಗಗಳು ಎಂದು ತಿಳಿದಿರುವುದಿಲ್ಲ. ಸಂಗೀತ ಬಲ್ಲವರಿಗೆ ಮಾತ್ರ ಈ ರಾಗಗಳ ಹೆಸರು ಗೊತ್ತಾಗುತ್ತದೆ. ಆ ನಿಟ್ಟಿನಲ್ಲಿ ಒಬ್ಬ ಕಲಾವಿದ ಈ ರಾಗವನ್ನು ಕಲಿತರೆ ಈ ದಾಟಿಯನ್ನು ಅನುಸರಿಸಿಕೊಂಡು ಹಾಡಲು ಈ ಸ್ವರಲಿಪಿ ಪದ್ಧತಿಯು ತುಂಬ ಸರಳವಾಗುತ್ತದೆ. ಆ ಕಾರಣಕ್ಕಾಗಿಯೇ ರಾಗ-ತಾಳಗಳ ನಿದರ್ಶನವನ್ನು ಪ್ರಸ್ತುತ ಅಧ್ಯಯನವು ಸವಿಸ್ತಾರವಾಗಿ ವಿಶ್ಲೇಷಿಸಲಾಗಿದೆ.

ಅಧ್ಯಾಯ ಏಳು ಸಮಾರೋಪ ಶೀರ್ಷಿಕೆಯಾಗಿದ್ದು, ಈ ಅಧ್ಯಯನದಿಂದ ಮೂಡಿಬಂದ ಫಲಿತಗಳು ಹಾಗೂ ಕಲೆಯನ್ನು ಕಾಯ್ದುಕೊಳ್ಳುವ ಪರಿಹಾರೋಪಾಯಗಳ ಕುರಿತು ಚರ್ಚಿಸಲಾಗಿದೆ. ಹಾಗೆಯೇ ಅನುಬಂಧದಲ್ಲಿ ಆಯ್ದ ಸಮುದಾಯಗಳ ವಕ್ತೃಮಾಹಿತಿದಾರರ ವಿವರ, ಛಾಯಾಚಿತ್ರಗಳು ಮತ್ತು ಕೊನೆಯದಾಗಿ ಅಧ್ಯಯನಕ್ಕೆ ಪೂರಕ ಮಾಹಿತಿಗಳನ್ನು ಒದಗಿಸಿದ ಪರಾಮರ್ಶನ ಗ್ರಂಥಗಳ ವಿವರಗಳನ್ನು ನೀಡಲಾಗಿದೆ.

## ೧.೪. ಅಧ್ಯಯನದ ವಿನ್ಯಾಸ ಮತ್ತು ವಿಧಾನ

ಸಂಗೀತ ಸಂಶೋಧನೆಯು ಹಲವಾರು ರೂಪಗಳಲ್ಲಿ ನಡೆಯುವಂತಹದ್ದು. ಪ್ರಸ್ತುತ ಕೈಗೊಂಡಿರುವ ಅಧ್ಯಯನದ ವಿಷಯವು 'ಹೈದ್ರಾಬಾದ್-ಕರ್ನಾಟಕದ ಆಯ್ದ ಅಲೆಮಾರಿ ಸಮುದಾಯಗಳ ಸಂಗೀತ'.

ಹೈದ್ರಾಬಾದ್ ಕರ್ನಾಟಕದಲ್ಲಿ ಹಲವಾರು ಅಲೆಮಾರಿ ಸಮುದಾಯಗಳುಂಟು. ಆದರೆ ಇಲ್ಲಿ ಪ್ರಸ್ತುತ ಕೆಲವು ಅಲೆಮಾರಿ ಸಮುದಾಯಗಳ ಸಂಗೀತ ಎಂಬ ವಿಷಯವನ್ನು ಸಂಶೋಧನೆಗೆ ಆಯ್ಕೆ ಮಾಡಿಕೊಂಡಿದ್ದೇನೆ. ಅವುಗಳೆಂದರೆ ಕೊರಮ ಸಮುದಾಯ, ಹಂಡಿಜೋಗಿ, ಬುಡ್ಗಜಂಗಮ, ಗೊಂಧಳಿ ಮತ್ತು ಚೆನ್ನದಾಸರ ಸಮುದಾಯಗಳು.

ಪ್ರಸ್ತುತ ಅಧ್ಯಯನದಲ್ಲಿ ಅಲೆಮಾರಿ ಸಮುದಾಯ ಸಂಗೀತ ಕುರಿತಾಗಿ ಬಂದಿರುವ ಕೃತಿಗಳು, ಪತ್ರಿಕೆಗಳು, ಲೇಖನಗಳು, ಮಹಾಪ್ರಬಂಧಗಳು, ಜನಗಣತಿ ವರದಿಗಳು ಮತ್ತು ಇತರ ವರದಿಗಳಿಂದ ಮಾಹಿತಿಗಳನ್ನು ಪಡೆಯಲಾಗಿದೆ. ಹಾಗೆಯೇ ಪ್ರತಿ ನೆಲೆಗಳಿಗೆ ನೇರವಾಗಿ ಹೋಗಿ ಸಮೀಕ್ಷೆ ಹಾಗೂ ಸಂದರ್ಶನ ಮಾಡುವುದರ ಮೂಲಕವೂ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ಮಾಹಿತಿಯನ್ನು ಪಡೆಯಲು ಕ್ಷೇತ್ರಕಾರ್ಯದಲ್ಲಿ ಎರಡು ವಿಧಾನಗಳನ್ನು ಅನುಸರಿಸಲಾಗಿದೆ. ಮೊದಲನೆಯದಾಗಿ ಆಯ್ದ ಅಲೆಮಾರಿ ಸಮುದಾಯಗಳ ಸಂಗೀತವನ್ನು ಮೈಗೂಡಿಸಿಕೊಂಡಿರುವ ವ್ಯಕ್ತಿಗಳ ಸಮೀಕ್ಷೆಯನ್ನು ನಡೆಸಲಾಗಿದೆ. ಎರಡನೆಯದಾಗಿ ಪೂರ್ವಿಕರ ಮಾಹಿತಿಯನ್ನು ಪಡೆಯುವ ಉದ್ದೇಶದಿಂದ ವ್ಯಕ್ತಿಗಳ ಸಂದರ್ಶನವನ್ನು ಕೈಗೊಳ್ಳಲಾಗಿದೆ. ಅವರು ವಾಸಿಸುವ ಪ್ರತಿಯೊಂದು ನೆಲೆಗಳಲ್ಲಿ ಸಮುದಾಯದ ಐದು ಜನ ಪುರುಷರು ಮತ್ತು ಐದು ಜನ ಮಹಿಳೆಯರ ಸಂದರ್ಶನದ ಮಾದರಿ ಸಮೀಕ್ಷೆಗಾಗಿ ಆಯ್ಕೆ ಮಾಡಿಕೊಂಡು ಮಾಹಿತಿಯನ್ನು ಪಡೆಯಲಾಗಿದೆ. ಅಲೆಮಾರಿ ಸಮುದಾಯದವರ ಮಕ್ಕಳ ಶೈಕ್ಷಣಿಕ ಪ್ರಗತಿಯನ್ನು ತಿಳಿದುಕೊಳ್ಳುವುದು ಮತ್ತು ಆಯಾ ಸಮುದಾಯಗಳಲ್ಲಿರುವ ಸಂಗೀತದ ಬಗ್ಗೆ ತಿಳಿದುಕೊಳ್ಳಲಾಗಿದೆ. ಈ ರೀತಿ ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಮಾಹಿತಿಗಳನ್ನು ಕ್ರೋಢಿಕರಿಸಿ ಅವುಗಳಿಂದ ಬಂದ ಅಂಶಗಳನ್ನು ವಿವರಣಾತ್ಮಕವಾಗಿ ಈ ಅಧ್ಯಯನದಲ್ಲಿ ವಿಶ್ಲೇಷಿಸಲಾಗಿದೆ.

ಮುಖ್ಯವಾಗಿ ಈ ಅಧ್ಯಯನ ಪೂರ್ಣಗೊಳಿಸಲು ಚಾರಿತ್ರಿಕ ವಿಧಾನ, ಸಂದರ್ಶನ, ಸಮೀಕ್ಷೆ ಹಾಗೂ ಸಹಭಾಗಿತ್ವ ವಿಧಾನ ಮತ್ತು ಪ್ರಶ್ನಾವಳಿಯ ವಿಧಾನಗಳನ್ನು ಅನುಸರಿಸಲಾಗಿದೆ. ಹಾಗೆಯೇ ಛಾಯಾಚಿತ್ರಗಳು, ರೇಖಾಚಿತ್ರಗಳು, ಮುಂತಾದವುಗಳನ್ನು ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಳ್ಳಲಾಗಿದೆ.

**೧.೫. ಅಧ್ಯಯನದ ಪ್ರಮೇಯಗಳು**

೧. ಅಲೆಮಾರಿ ಸಮುದಾಯಗಳ ಸಂಗೀತ ಮತ್ತು ಕಲೆಗಳು ಅತಂತ್ರ ಸ್ಥಿತಿಯಲ್ಲಿವೆ

೨. ಆ ಸಮುದಾಯಗಳು ಮುಖ್ಯವಾಹಿನಿಗೆ ಬರಲು ಪ್ರಯತ್ನಿಸುತ್ತಿವೆ.

**೧.೬. ಇದುವರೆಗೆ ನಡೆದಿರುವ ಅಧ್ಯಯನಗಳು**

**ಗಂಗಾಧರ ದೈವಜ್ಞ** ಅವರ ಕನ್ನಡ ವಿಶ್ವವಿದ್ಯಾಲಯ, ಪ್ರಸಾರಾಂಗ ಪ್ರಕಟಿತ **ಗೊಂದಲಿಗರು** ಸಮುದಾಯದ ಒಂದು ಅಧ್ಯಯನದಲ್ಲಿ ಗೊಂದಲಿಗರು ವಾಸಮಾಡುವ ನೆಲೆಗಳು, ಸಮುದಾಯದ ಆಚಾರ, ವಿಚಾರ, ನಂಬಿಕೆ, ಪದ್ಧತಿ, ಅವರು ಬದುಕುವ ರೀತಿ–ನೀತಿ, ಕಲೆಗಳ ಬಗೆಗೆ ಉಪಯುಕ್ತತೆ ಮಾಹಿತಿಗಳನ್ನೊಳಗೊಂಡಿದ್ದಾಗಿರುವುದು ಈ ಕೃತಿಯಿಂದ ತಿಳಿದುಬರುತ್ತದೆ.

**ಡಾ. ಬಿ.ಪಿ. ರಾಮಯ್ಯ** ಅವರ **ದಕ್ಷಿಣ ಕರ್ನಾಟಕದ ಕೊರವರ ಸಾಂಸ್ಕೃತಿಕ ಅಧ್ಯಯನ**: ಕರ್ನಾಟಕ ಸಾಹಿತ್ಯ ಆಕಾಡೆಮಿಯವರು ಕೊರವರ ಸಂಸ್ಕೃತಿ ಮತ್ತು ಈರಣ್ಣ ಕೋಸಗಿಯವರ ಕೊರವರು, ಹಾಗೆ ೨೦೦೮ರಲ್ಲಿ ಕನ್ನಡ ಪುಸ್ತಕ ಪ್ರಾಧಿಕಾರ ಪ್ರಕಟಿಸಿದ ಅಲೆಮಾರಿ ಬುಡಕಟ್ಟು ಮಾಲೆಯ ಕೃತಿಗಳು ಅಲೆಮಾರಿ ಕುರಿತು ಮಾಹಿತಿ ಒದಗಿಸುತ್ತವೆ. ಆದರೆ ಹೈದ್ರಾಬಾದ್ ಕರ್ನಾಟಕ ನೆಲೆಗಳಲ್ಲಿ ವಾಸಿಸುವ ಜಾನಪದ ಸಂಗೀತ ಸಮುದಾಯಗಳ ಕುರಿತು ಅಂತಹ ಮಹತ್ತರವಾದ ಅಧ್ಯಯನಗಳು ನಡೆದಿಲ್ಲವೆಂದೇ ಹೇಳಬಹುದಾಗಿದೆ. ಆದಕಾರಣ ಹೈದ್ರಾಬಾದ್ ಕರ್ನಾಟಕ ನೆಲೆಗಳಲ್ಲಿ ವಾಸಿಸುವ ಜಾನಪದ ಸಂಗೀತ ಸಮುದಾಯಗಳ ಅಧ್ಯಯನವನ್ನು ಕೈಗೊಂಡಿದ್ದು ಅವರ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಅಂಶಗಳ ಮೇಲೆ ಬೆಳಕು ಚೆಲ್ಲುವ ಪ್ರಯತ್ನ ಇಲ್ಲಿ ಮಾಡಲಾಗಿದೆ.

**ಚಂದ್ರಪ್ಪ ಎಂ. ದುಷ್ಯಂತ** ಅವರು ೨೦೦೮ರಲ್ಲಿ ಕನ್ನಡ ಪುಸ್ತಕ ಪ್ರಾಧಿಕಾರ ಪ್ರಕಟಿಸಿದ ಅಲೆಮಾರಿ ಅಧ್ಯಯನ ಮಾಲೆಯ **ಹಂಡಿಜೋಗಿ** ಎಂಬ ಕೃತಿಯಲ್ಲಿ ಹಂಡಿಜೋಗಿಯವರ ಪೌರಾಣಿಕ, ಐತಿಹಾಸಿಕ ಮತ್ತು ಸಾಮಾಜಿಕ ಹಿನ್ನೆಲೆ, ಮೂಲಸ್ಥಾನ, ವಲಸೆ ಮಾರ್ಗ ಹಾಗೂ ಹಂಡಿಜೋಗಿಯವರ ಜನಪದ ನಂಬಿಕೆಗಳು, ಆಚಾರ–ವಿಚಾರಗಳು ಮತ್ತು ಹಂಡಿಜೋಗಿಯವರ ಪ್ರದರ್ಶನ ಕಲೆಗಳ ಕುರಿತು ಹಾಡುಗಾರಿಕೆ, ವಾದ್ಯಗಾರಿಕೆ, ನೃತ್ಯ ಮತ್ತು ವೇಷಭೂಷಣದ ಕುರಿತು ಮಾಹಿತಿ ದೊರೆಯುತ್ತದೆ. ಪುಟ ೪೭ರಲ್ಲಿ ಸಾಹಿತ್ಯ ಹಾಗೂ ಭಾಷೆ ಕುರಿತು, ಪುಟ ೭೭ರಲ್ಲಿ ಜೋಗಿಯವರ ಸಂಗೀತದ ಕುರಿತು ಲೇಖಕರು ಸಂಕ್ಷಿಪ್ತವಾಗಿ ತಿಳಿಸಿದ್ದಾರೆ.

ಭಿಕ್ಷಾಟನೆಗೆ ಹೋದಾಗ ತಮ್ಮ ಕಿನ್ನರಿ ವಾದ್ಯವನ್ನು ನುಡಿಸುತ್ತಾ ಅರ್ಜುನಜೋಗಿ ಹಾಡು, ಪಾಂಡವರ ಕಥೆಗಳನ್ನು ಹಾಡುವ ಮೂಲಕ ಕೇಳುಗರನ್ನು ಮಂತ್ರಮುಗ್ಧರನ್ನಾಗಿಸುತ್ತಾರೆ. ಇವರು ಹೊಟ್ಟೆಪಾಡಿಗಾಗಿ ಹಾಡಿದರು ಕೂಡ ಇವರ ಹಾಡುಗಳು ಜನಪದ ಲೋಕಕ್ಕೆ ಒಂದು ಕೊಡುಗೆ ಎಂದು ಲೇಖಕರ ಅಭಿಪ್ರಾಯವಾಗಿದೆ. ಹಂಡಿಜೋಗಿಯವರು ಮನೆ ಮನೆಗೆ ಹೋಗಿ ಭಿಕ್ಷಾಟನೆ ಮಾಡುವಾಗ ಹಾಡುತ್ತಾರೆ. ಹಾಡುವಾಗ ನರ್ತಿಸುತ್ತಾರೆ. ಇವರು ತಮ್ಮ ಹಾಡುಗಾರಿಕೆಗೆ ಪಕ್ಕವಾದ್ಯಕ್ಕಾಗಿ

ಕಿನ್ನರಿ, ಚಿಟಿಕೆ, ತಾಳ, ಗೆಜ್ಜೆ ಬಳಕೆ ಕುರಿತು ವಿವರಣೆಗಳಿವೆ ಆದರೆ, ಹಾಡುಗಳ ರಾಗ, ತಾಳಗಳ ಕುರಿತು ಯಾವುದೇ ಮಾಹಿತಿಗಳನ್ನು ನೀಡಿರುವುದಿಲ್ಲ.

**ಶಿವಾನಂದ ಲ ಪಾಚಂಗಿ** ಅವರು ೨೦೦೮ರಲ್ಲಿ ಕನ್ನಡ ಪುಸ್ತಕ ಪ್ರಾಧಿಕಾರ ಪ್ರಕಟಿಸಿದ ಅಲೆಮಾರಿ ಅಧ್ಯಯನ ಮಾಲೆಯ **ಗೊಂಧಳಿ** ಎಂಬ ಕೃತಿಯಲ್ಲಿ ಗೊಂಧಳಿ ಸಮುದಾಯದ ಹಿನ್ನೆಲೆ ಆ ಸಮುದಾಯದಲ್ಲಿರುವ ನಂಬಿಕೆ, ಆಚರಣೆ, ಆರಾಧನೆ ಹಾಗೂ ಸಮುದಾಯದ ಪ್ರದರ್ಶನ ಕಲೆಗಳ ಬಗ್ಗೆಯು ಹಾಡುಗಾರಿಕೆ, ವಾದ್ಯಗಾರಿಕೆ, ನೃತ್ಯ ಮತ್ತು ವೇಷಭೂಷಣದ ಕುರಿತು ಸಂಕ್ಷಿಪ್ತವಾಗಿ ತಿಳಿಸಿದ್ದಾರೆ. ಪುಟ ೫೯ರಲ್ಲಿ ಸಾಹಿತ್ಯ ಹಾಗೂ ಭಾಷೆ ಕುರಿತು, ಪುಟ ೯೧ರಲ್ಲಿ ಪ್ರದರ್ಶಕ ಕಲೆಗಳ ಕುರಿತು ಲೇಖಕರು ಸಂಕ್ಷಿಪ್ತವಾಗಿ ತಿಳಿಸಿದ್ದಾರೆ.

ಪುಟ ೫೯ರಲ್ಲಿ ಗೊಂಧಳಿ ಸಮುದಾಯದ ಕಲಾವಿದರು ಹಾಡುವಂತ ಹಾಡುಗಳಾದ ಅಂಬಭವಾನಿ ಕುರಿತು ತತ್ವಪದಗಳು ಬರೆದಿದ್ದಾರೆ. ಗೋಂಧಳಿ ಕಲಾವಿದರು ವೃತ್ತಿಗಾಯಕರಾಗಿದ್ದು ಸಂಬಾಳ, ಚೌಡಿಕೆ, ತಾಳ ಇವುಗಳ ಸಮ್ಮಿಲನ ವಾದ್ಯಗಳಿಂದ ತಮ್ಮ ವೃತ್ತಿ ಕುಲಕಸುಬಿನ ಮುಖಾಂತರ ಜನಪ್ರಿಯವಾಗಿ ಗೊಂದಲಿಗರೆಂದೆ ಕರೆಯಲ್ಪಡುತ್ತಾರೆ. ಮುಖ್ಯವಾಗಿ ಮದುವೆ, ಮುಂಜಿ, ದೇವಿ ಆಚರಣೆಗಳಲ್ಲಿ ಈ ಗೊಂದಲಿಗರ ಗೊಂಧಳ ಕಥೆಯನ್ನು ಹೇಳಿಸುತ್ತಾರೆಂದು ಲೇಖಕರು ತಿಳಿಸಿದ್ದಾರೆ. ಆದರೆ ಉದಾಹರಣೆಯಾಗಿ ಯಾವ ಕಥೆಗಳು ನೀಡಿರುವುದಿಲ್ಲ ಹಾಗೂ ಹಾಡಿನ ರಾಗ, ತಾಳ ಕುರಿತು ಯಾವುದೇ ಮಾಹಿತಿಗಳಿಲ್ಲದಿರುವುದು ಕಂಡುಬರುತ್ತದೆ.

**ಮಲ್ಲಿಕಾರ್ಜುನ ಬಿ. ಮಾನ್ಪಡೆ** ಅವರ ೨೦೦೮ರಲ್ಲಿ ಕನ್ನಡ ಪುಸ್ತಕ ಪ್ರಾಧಿಕಾರ ಪ್ರಕಟಿಸಿದ ಅಲೆಮಾರಿ ಅಧ್ಯಯನ ಮಾಲೆಯ **ಕೊರಮ** ಎಂಬ ಗ್ರಂಥದಲ್ಲಿ ಕೊರಮ ಸಮುದಾಯದ ಹಿನ್ನೆಲೆ ಆ ಸಮುದಾಯದಲ್ಲಿರುವ ನಂಬಿಕೆ, ಆಚರಣೆ, ಆರಾಧನೆ ಹಾಗೂ ಸಮುದಾಯದ ವಾದ್ಯಗಾರಿಕೆ, ನೃತ್ಯ ಕುರಿತು ಸಂಕ್ಷಿಪ್ತವಾಗಿ ತಿಳಿಸಲಾಗಿದೆ. ಕೊರಮ ಎನ್ನುವುದು ಜಾತಿ ಸೂಚಕವಾದ ಪದವಾಗಿದೆ. ಕರ್ನಾಟಕದಲ್ಲಿ ಕೊರವರನ್ನು ಕೊರಮ ಕೊರಮಶೆಟ್ಟಿ, ಕೋತಿ ಕೊರಮರು, ಭಜಂತ್ರಿ, ವಾಜಂತ್ರಿ ಎಂದೆಲ್ಲ ಗುರುತಿಸಿದರೆ. ಹೆಣ್ಣುಮಕ್ಕಳನ್ನು ಕೊರವಿ, ಕೊರಮಿ, ಕೊರವಂಜಿ ಎಂದು ಗುರುತಿಸುತ್ತಾರೆ. ಕೋತಿ ಆಡಿಸುವವರನ್ನು ಕೋತಿ ಕೊರಮರು, ಶಹನಾಯಿ ನುಡಿಸುವವರನ್ನು ಭಜಂತ್ರಿ, ವಾಜಂತ್ರಿ ಎಂದು ಲೇಖಕರು ಉಲ್ಲೇಖಿಸಿದ್ದಾರೆ. ಕೊರವಂಜಿ ಹಾಡು ಮತ್ತು ಹಚ್ಚೆ ಹಾಡುಗಳ ಕುರಿತಾಗಿದೆ. ಆದರೆ ಈ ಕೃತಿಯಲ್ಲಿ ಹಾಡಿನ ರಾಗ ಮತ್ತು ತಾಳ ಕುರಿತಾಗಿ ಯಾವುದೇ ಮಾಹಿತಿ ವಿಶ್ಲೇಷಣೆ ಇರುವುದಿಲ್ಲ.

**ಬಾಲಗುರುಮೂರ್ತಿ, ಪ್ರತಾಪ ರಾ ಬಹುರೂಪಿ** ಅವರು ಕನ್ನಡ ಪುಸ್ತಕಪ್ರಾಧಿಕಾರ, ಬೆಂಗಳೂರು ೨೦೦೮ರಲ್ಲಿ ಪ್ರಕಟಿಸಿದ ಅಲೆಮಾರಿ ಅಧ್ಯಯನ ಮಾಲೆಯ **ಬುಡ್ಗಜಂಗಮ** ಎಂಬ ಗ್ರಂಥದಲ್ಲಿ ಸಮುದಾಯದ ಹಿನ್ನೆಲೆ ಆ ಸಮುದಾಯದಲ್ಲಿರುವ ನಂಬಿಕೆ, ಆಚರಣೆ, ಆರಾಧನೆ ಹಾಗೂ ಸಮುದಾಯದ

ಪ್ರದರ್ಶನ ಕಲೆಗಳ ಬಗ್ಗೆಯು ಹಾಡುಗಾರಿಕೆ, ವಾದ್ಯಗಾರಿಕೆ, ನೃತ್ಯ ಮತ್ತು ವೇಷಭೂಷಣದ ಕುರಿತು ಸವಿಸ್ತಾರವಾಗಿ ವಿವರಿಸಲಾಗಿದೆ.

**ಡಾ. ಯಲ್ಲಪ್ಪ ಬಿ. ಹಿಮ್ಮಡಿ** ಅವರು ಕನ್ನಡ ಪುಸ್ತಕಪ್ರಾಧಿಕಾರ, ಬೆಂಗಳೂರು ೨೦೦೮ರಲ್ಲಿ ಪ್ರಕಟಿಸಿದ ಕರ್ನಾಟಕ ಅಲೆಮಾರಿ ಸಮುದಾಯಗಳ ಅಧ್ಯಯನ ಮಾಲೆಯಲ್ಲಿ **ಚೆನ್ನದಾಸರ** ಎಂಬ ಕೃತಿಯಲ್ಲಿ ಚನ್ನದಾಸರ ಸಮುದಾಯಕ್ಕೆ ಪ್ರಾದೇಶಿಕವಾಗಿ ಕರ್ನಾಟಕದಲ್ಲಿ ಬೇರೆ, ಬೇರೆ ಉಪನಾಮಗಳಿದ್ದರೂ ಈ ಸಮುದಾಯ ಒಂದೇ ಎಂಬುದಾಗಿ ಗುರುತಿಸಿಕೊಂಡಿದೆ ಎಂದು ಲೇಖಕರು ಉಲ್ಲೇಖಿಸಿದ್ದಾರೆ. ಚನ್ನದಾಸರ ಸಮುದಾಯದ ಪದದ ವಿವೇಚನೆ ಮಾಡಿ ಪರ್ಯಾಯ ನಾಮಗಳ ಹಿನ್ನೆಲೆಯನ್ನು ದಾಸ ಪದದ ಅರ್ಥ ವಿವರಣೆಯ ಮೂಲಕ ಪರಿಶೀಲಿಸಲಾಗಿದೆ.

'ಚೆನ್ನ' ಎನ್ನುವ ವಾದ್ಯ ನುಡಿಸುವವರು ಚನ್ನದಾಸರು ಎಂದಿದ್ದಾರೆ. ಈ ದಾಸರು ಚೆನ್ನ ಎನ್ನುವ ವಾದ್ಯವನ್ನು ಭಿಕ್ಷೆಗೆ ಹೋದಾಗ ಮತ್ತು ಹನುಮಂತ ದೇವರ ಪೂಜೆಯ ಸಂದರ್ಭದಲ್ಲಿ ಬಳಕೆ ಮಾಡುತ್ತಿರುವುದಾಗಿ ಲೇಖಕರು ತಿಳಿಸಿದ್ದಾರೆ. ಇವರ ಮೂಲಕ ಪ್ರಸಾರ, ಸ್ಥಳಾವರಣ ಮತ್ತು ಬ್ರಹ್ಮಾಂಡದ ಪರಿಕಲ್ಪನೆ, ಬಂಧುತ್ವ, ವಿವಾಹ, ಆರಾಧನೆ ಆಚರಣೆ, ನಂಬಿಕೆಗಳು ಹೀಗೆ ವಿಷಯಗಳ ಕುರಿತು ವಿವರಿಸುತ್ತಾ ಪು.೧೨೭ರಲ್ಲಿ ಸಾಹಿತ್ಯ ಮತ್ತು ಭಾಷೆ ಕುರಿತು ಚನ್ನದಾಸರು ತಾವೇ ಸ್ವತಃ ಸಾಹಿತ್ಯ ಸೃಷ್ಟಿ ಮಾಡದಿದ್ದರೂ ಮಾನವೀಯ ಮೌಲ್ಯದ ತತ್ವಪದಗಳನ್ನು ಚಾರಿತ್ರಿಕ ಹಾಗೂ ಸಾಮಾಜಿಕ ಮೌಲ್ಯದ ಲಾವಣಿಗಳು ಪುರಾಣದ ಹಲವಾರು ಪ್ರಸಂಗಗಳು ಈ ಸಮುದಾಯದ ಬಯಲಾಟಗಳಲ್ಲಿ ಹಾಡುಗಳಲ್ಲಿ ಕಂಡುಬರುತ್ತವೆ ಎಂದು ಹೇಳಿದ್ದಾರೆ. ಈ ನಾಟಕಗಳಲ್ಲಿ ಸತ್ಯಹರಿಶ್ಚಂದ್ರ, ಶ್ರವಣಕುಮಾರ, ನಳದಮಯಂತಿ, ಸತ್ಯವ್ರತ, ಗಂಗೆ-ಗೌರಿ, ರಾಜಾವಿಕ್ರಮ, ಶನಿಕಥೆ, ಕುರುಕ್ಷೇತ್ರ, ಭಕ್ತಪ್ರಹ್ಲಾದ, ಮಾರುತಿ ಕಣ, ರೇಣುಕಾ ಯಲ್ಲಮ್ಮ ಮುಂತಾದ ಕಥೆಗಳನ್ನು ಹಾಡುತ್ತಾರೆಂದು ಉಲ್ಲೇಖಿಸಲಾಗಿದೆ. ಆದರೆ ಉದಾಹರಣೆಯಾಗಿ ಹಾಡುಗಳು, ನಾಟಕದ ಸಾಹಿತ್ಯ ಕುರಿತು ಮಾಹಿತಿ ನೀಡಿರುವುದಿಲ್ಲ. ನಾಟಕದಲ್ಲಿ ಬಳಸುವ ಸಾಹಿತ್ಯ, ಸಾಹಿತ್ಯಕ್ಕೆ ತಕ್ಕ ಸಂಗೀತ ಮುಮ್ಮೇಳ-ಹಿಮ್ಮೇಳ ಕುರಿತು ಮಾಹಿತಿ ಇಲ್ಲದಾಗಿದೆ. ಪು. ೧೪೫ರಲ್ಲಿ ಚನ್ನದಾಸರ ಪ್ರದರ್ಶಕ ಕಲೆಗಳ ಕುರಿತು ಹೇಳಿದ್ದಾರೆ. ಈ ಮೊದಲು ಸಮುದಾಯದವರಲ್ಲಿ ಹೆಂಗಸರ ನೃತ್ಯಗಳೇ ಹೆಚ್ಚಾಗಿದ್ದವು. ಇಂದು ನಾಗರಿಕತೆಯ ಗಾಢ ಪ್ರಭಾವಕ್ಕೆ ಈ ಸಮುದಾಯ ಒಳಗಾಗಿರುವುದರಿಂದ ಅಂತಹ ನೃತ್ಯಗಳು ಪ್ರಸ್ತುತ ದಿನಮಾನಗಳಲ್ಲಿ ಕಂಡುಬರುವುದಿಲ್ಲ ವೆಂದು ಹೇಳಿದ್ದಾರೆ. ಮೇಳ, ಬಯಲಾಟ, ರಂಗಭೂಮಿ ವಾದ್ಯಗಳ ಕುರಿತಾಗಿ ಈ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ.

**ಡಾ. ವಡ್ಡಗೆರೆ ನಾಗರಾಜಯ್ಯ** ಅವರು ಡಾ. ಬಿ.ಆರ್. ಅಂಬೇಡ್ಕರ್ ಸಂಶೋಧನಾ ಸಂಸ್ಥೆ, ಬೆಂಗಳೂರು ೨೦೧೬ರಲ್ಲಿ ಪ್ರಕಟವಾದ ಪರಿಶಿಷ್ಟ ಜಾತಿವರ್ಗದ ಅಲೆಮಾರಿ, ಅರೆಅಲೆಮಾರಿ ಸೂಕ್ಷ್ಮ ಮತ್ತು ಅರೆ ಸಮುದಾಯಗಳ ಅಧ್ಯಯನ **ಬುಡ್ಗಜಂಗಮ ಸಮುದಾಯ** ಎಂಬ ಕೃತಿಯು ಎಂಟು ಅಧ್ಯಾಯಗಳನ್ನೊಳಗೊಂಡಿದ್ದು, ಮುಖ್ಯವಾಗಿ ಅಧ್ಯಾಯ ೫ರಲ್ಲಿ ಬುಡ್ಗಜಂಗಮರ ಭಾಷೆ ಮತ್ತು ಸಾಹಿತ್ಯ, ಬುಡ್ಗಜಂಗಮರ ಕಥನ ಪರಂಪರೆ ಕುರಿತು ಈ ಕೃತಿಯಲ್ಲಿ ಲೇಖಕರು ಉಲ್ಲೇಖಿಸಿದ್ದಾರೆ.

ಬುಡ್ಗಜಂಗಮರಲ್ಲಿ ಗಂಗೆ-ಗೌರಿ ಸಂವಾದ ಕುರಿತು ಭಕ್ತಿ ಪ್ರಧಾನ ಜಾನಪದ ಗಾಯನ ಕಾವ್ಯವು ಅತ್ಯಂತ ಜನಪ್ರಿಯವಾದದ್ದು, ಭಿಕ್ಷಾಟನೆಗಾಗಿ ಊರು-ಕೇರಿಗಳಿಗೆ ಹೋದಾಗ ಬುಡ್ಗಜಂಗಮರ ಹೆಣ್ಣುಮಕ್ಕಳು ಪ್ರತಿ ಮನೆಬಾಗಿಲಿಗೆ ಹೋಗಿ ಗಂಗೆ-ಗೌರಿ ಕಥನಕಾವ್ಯಗಳನ್ನು ಹಾಡಿ ಭಿಕ್ಷೆ ಬೇಡುತ್ತಾರೆ. ಈ ಕುರಿತು ಕಥೆಗಳನ್ನು ಬರೆದಿದ್ದಾರೆ. ಆದರೆ ಈ ಹಾಡಿನ ದಾಟಿ, ಮುಮ್ಮೇಳ, ಹಿಮ್ಮೇಳ, ರಾಗ-ತಾಳದ ಬಗ್ಗೆ ಯಾವುದೇ ರೀತಿಯ ಸಂಗೀತದ ಮಾಹಿತಿಯ ವಿವರಣೆಗಳಿರುವುದಿಲ್ಲ. ಅಧ್ಯಾಯ ೬ರಲ್ಲಿ ಬುಡ್ಗಜಂಗಮ ಸಮುದಾಯದ ಕಲಾರೂಪಗಳು ಮತ್ತು ವೇಷಗಳ ಕುರಿತು ಲೇಖಕರು ಉಲ್ಲೇಖಿಸಿದ್ದಾರೆ. ಆಂಧ್ರಪ್ರದೇಶದಲ್ಲಿ ತೆಲುಗು ಭಾಷಿಕರಿಗೆ ತುಂಬಾ ಪರಿಚಿತವಾಗಿರುವ ಕಲಾರೂಪ ಬುರ್ರಕಥೆ ಇದನ್ನು ಪ್ರದರ್ಶಿಸಲು ಮೂವರು ಮುಖ್ಯ ಕಲಾವಿದರು ಇರುತ್ತಾರೆ. ಮಧ್ಯದಲ್ಲಿರುವ ಪ್ರಧಾನ ವ್ಯಕ್ತಿಯು ತಂಬೂರಿಯನ್ನು ಭುಜದ ಮೇಲೆತ್ತಿಕೊಂಡು ತಂತಿ ಮೀಟುತ್ತಾ ಕಥೆಯನ್ನು ಸಾದರಪಡಿಸುತ್ತಿದ್ದಾರೆ. ಇನ್ನುಳಿದ ಇಬ್ಬರು ಕಲಾವಿದರು ತಂದಾನ ತಾನ ತಾನ ತಂದಾನ ಎಂದು ಶೃತಿ ಕೊಡುತ್ತಾ ಪ್ರಶ್ನೆಗಳನ್ನು ಕೇಳುತ್ತಲೇ ಹೂಂಗುಡುತ್ತಾರೆ. ಹೀಗೆ ಪ್ರದರ್ಶನ ನೀಡುವ ಬಗ್ಗೆ ಉಲ್ಲೇಖಿಸಲಾಗಿದೆಯಾದರೂ ಯಾವುದೇ ಕಥೆಯನ್ನು ಉದಾಹರಣೆಯಾಗಿ ನೀಡಿರುವುದಿಲ್ಲ.

ಈ ಕೃತಿಯಲ್ಲಿ ಸಂಗೀತಕ್ಕೆ ಸಂಬಂಧಿಸಿದಂತೆ ಮೇಲ್ಪದರ ಮಾಹಿತಿಯನ್ನು ಒದಗಿಸಿದ್ದಾರೆ ಹೊರತು ಪರಿಪೂರ್ಣ ಮಾಹಿತಿ ನೀಡಿಲ್ಲ. ಬುಡ್ಗಜಂಗಮರು ಹಾಡುವ ಹಾಡುಗಳಲ್ಲಿ ಗಂಗೆ-ಗೌರಿ, ಜಾಗೃತಿಹಾಡು, ಮಕರಗುಡಿಸಿ ಹಾಡು, ಹಚ್ಚೆ ಹಾಡು, ಚಾಪೆ ಹೆಣೆಯುವ ಈಚಲ ಮರದವ್ವನ ಹಾಡು ಮತ್ತು ರಾಮಶಾಸ್ತ್ರಿ(ಕೊಂಡಮಾಮ) ವೇಷದ ಹಾಡುಗಳನ್ನು ಒದಗಿಸಿದ್ದಾರೆ. ಆದರೆ ಆ ಹಾಡಿಗೆ ಇರುವ ದಾಟಿ, ರಾಗ, ತಾಳಗಳ ಕುರಿತು ಪ್ರಸ್ತಾಪಿಸಿರುವುದಿಲ್ಲ.

**ಡಾ. ಚಕ್ಕೆರೆ ಶಿವಶಂಕರ** ಅವರ **ಜನಪದ ಕಲಾ ಪ್ರವೇಶ**ದಲ್ಲಿ ಕರ್ನಾಟಕದ ಎಲ್ಲಾ ಜಾನಪದ ಕಲೆಗಳ ಸಂಕ್ಷಿಪ್ತ ಮಾಹಿತಿ ಕೊಡುವುದರೊಂದಿಗೆ, ಜಾನಪದ ಕಲೆಗಳ ಛಾಯಾಚಿತ್ರಗಳನ್ನು ಸಹ ಕೊಟ್ಟಿದ್ದಾರೆ.

**ಪ್ರೊ. ಅಂಬಳಿಕೆ ಹಿರಿಯಣ್ಣ (ಪ್ರಸಂ.)** ಅವರ **ಕರ್ನಾಟಕ ಸಂಶೋಧನಾ ಜಾನಪದ** ಎಂಬ ಗ್ರಂಥದಲ್ಲಿ ಜನಪದ ಪ್ರದರ್ಶಕ ಕಲೆಗಳು ಮತ್ತು ಜಾಗತೀಕರಣ, ಬಯಲಾಟಗಳ ಸಂಗೀತ, ತೊಗಲು ಗೊಂಬೆಯಾಟ, ಪ್ರದರ್ಶನ ಕಲೆಗಳು ಅಂದು-ಇಂದು, ಜಾನಪದ ಪ್ರದರ್ಶಕ ಕಲೆಗಳ ಸಾಂಸ್ಕೃತಿಕ ಸಂದರ್ಭ, ಜನಪದ ಸಂಗೀತ ಇತ್ಯಾದಿ ವಿಷಯಗಳ ಕುರಿತು ಮಾಹಿತಿ ಒದಗಿಸುತ್ತದೆ.

**ಜೀ.ಶಂ. ಪರಮಶಿವಯ್ಯ** ಅವರ **ಜನಪದ ಕಾವ್ಯ ಕಥೆಗಳು ಮತ್ತು ಗೀತಮೇಳಗಳು**, ಜನಪದ ಬರಹ ಸಂಪುಟ-೩ರಲ್ಲಿ ಕರಪಾಲದ ಕಥೆಗಳು, ಕಂಸಾಳೆ ಕಥೆಗಳು, ಮಂಟೇಸ್ವಾಮಿ ಕಥೆಗಳು, ಗುಡ್ಡರ ಕಥೆಗಳು, ನೀಲಗಾರರ ಕಥೆಗಳು, ಜುಂಜಪ್ಪನ ಕಥೆಗಳು ಹಾಗೂ ಹೆಂಗಸರ ಹಾಡ್ಗತೆಗಳು ಕುರಿತು ಹಾಗೂ ದಕ್ಷಿಣ ಕರ್ನಾಟಕದ ಹೆಂಗಸರ ಮತ್ತು ಗಂಡಸರ ಜನಪದ ಗೀತೆಗಳು, ದೊಂಬಿದಾಸರ ಹಾಗೂ ಕಿನ್ನರಿ ಜೋಗಿಗಳ ಹಾಡುಗಾರಿಕೆ, ವಾದ್ಯಗಾರಿಕೆ ಮತ್ತು ಅವರ ಜೀವನಾಧಾರಿತ ಇತಿಹಾಸವನ್ನು ಕುರಿತು ಕಟ್ಟಿಕೊಟ್ಟಿದ್ದಾರೆ.

**ಜೀ.ಶಂ. ಪರಮಶಿವಯ್ಯ** ಅವರ **ಕನ್ನಡ ವೃತ್ತಿಗಾಯಕ ಕಾವ್ಯಗಳು** ಎಂಬ ಗ್ರಂಥದಲ್ಲಿ ತಂಬೂರಿ ಕಾವ್ಯಗಳು, ತೆಲುಗು ಜಂಗಮರ ಕಾವ್ಯಗಳು, ಕಂಸಾಳೆ ಕಾವ್ಯಗಳು, ಸ್ತ್ರೀ ಸಂಪ್ರದಾಯದ ಕಾವ್ಯಗಳು ಹಾಗೂ ನೀಲಗಾರರ ಕಾವ್ಯಗಳಲ್ಲಿ ಜೋಗಿಯ ಹಾಡು ಕುರಿತು ಸಂಕ್ಷಿಪ್ತವಾಗಿ ವಿವರಿಸಿದ್ದಾರೆ.

**ಪ್ರೊ. ಹಿ.ಶಿ. ರಾಮಚಂದ್ರೇಗೌಡ, ಡಾ. ಚಕ್ಕರೆ ಶಿವಶಂಕರ್** ಅವರ ಸಂಪಾದಕತ್ವದಲ್ಲಿ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯಿಂದ ಪ್ರಕಟಿಸಿದ **ಜಾನಪದ ತಲೆಮಾರು-೨** ಎಂಬ ಕೃತಿಯಲ್ಲಿ ೧೯೫೦ರಿಂದ ೧೯೭೦ರವರೆಗೆ ನಮ್ಮ ಹಾಡು-ಪಾಡನ್ನು ಕುರಿತು ಚಿಂತಿಸಿದ ಜಾನಪದ ತಜ್ಞರನ್ನು ಪರಿಚಯಿಸಿ ಅವರ ಜಾನಪದ ಕ್ಷೇತ್ರ ಸಾಧನೆಯ ಕುರಿತು ಜನಪದ ಮತ್ತು ಅದರ ಸಂಸ್ಕೃತಿಯನ್ನು ಉಳಿಸಲು ಅಹರ್ನಿಶಿಗಳಾಗಿ ದುಡಿದವರು ಹಾಗೂ ವಿಜ್ಞಾನದೊಳಗಿನ ಅಜ್ಞಾನವನ್ನು ತೊಡೆಯಲು ಶ್ರಮಿಸಿದ ವಿದ್ವಾಂಸರಗಳ ಸವಿಸ್ತಾರ ವಿಶ್ಲೇಷಣೆಯೊಂದಿಗೆ ಕಟ್ಟಿಕೊಟ್ಟಿದ್ದಾರೆ.

**ಡಾ. ಎಚ್.ಟಿ. ಪೋತೆ** ಅವರ **ಜಾನಪದ ಸಿಂಗಾರ** ಎಂಬ ಕೃತಿಯಲ್ಲಿ ಜನಪದ ಪ್ರದರ್ಶನ ಕಲೆಗಳ ಸಾಂಸ್ಕೃತಿಕ ಹಿನ್ನೆಲೆ, ಜನಪದ ವಾದ್ಯಗಳ ಕಲ್ಪನೆ, ಆಧುನಿಕ ಬದುಕಿನಲ್ಲಿ ಜನಪದ ಪ್ರದರ್ಶನ ಕಲೆಗಳು, ಜನಪದ ಪ್ರದರ್ಶನ ಕಲೆಗಳ ಅಳಿವು-ಉಳಿವು ಕುರಿತಂತೆ ವಿವರಣಾತ್ಮಕ ಮಾಹಿತಿ ಒದಗಿಸುತ್ತದೆ.

**ಶ್ರೀಮತಿ ಗಿರಿಜಾ ಕರ್ಪೂರ** ಅವರ **ಗುಲಬರ್ಗಾ ಜಿಲ್ಲೆಯ ಜನಪದ ಕಲಾವಿದರು** ಕುರಿತಂತೆ ಈ ಕೃತಿ ಮಾಹಿತಿಗಳ ತವರೂರು ಆಗಿದೆ. ಕನ್ನಡ ಸಂಸ್ಕೃತಿ ಪರಂಪರೆಯನ್ನು ಪೀಳಿಗೆಯಿಂದ ಪೀಳಿಗೆಗೆ ದಾಟಿಸುತ್ತಿರುವ ಈ ಅಪೂರ್ವ ಕಲಾವಿದರ ಮಾಹಿತಿ ನೀಡುವ ಈ ಕೃತಿ ಕರ್ನಾಟಕ ಜಾನಪದ ಅಕಾಡೆಮಿಯ ಉತ್ತಮ ಪ್ರಕಟಣೆಯಾಗಿದೆ.

**ಎಸ್. ಕಾರ್ತಿಕ್** ಅವರ **ಸಂಗೀತ ಶಾಸ್ತ್ರಗ್ರಂಥ ಚಂದ್ರಿಕೆ** (ಭಾರತೀಯ ಸಂಗೀತದ ಶಾಸ್ತ್ರಕಾರರು ಮತ್ತು ಶಾಸ್ತ್ರಕೃತಿಗಳು) ಎಂಬ ಪುಸ್ತಕದಲ್ಲಿ ಸಂಗೀತದಂತಹ ಅಮೂರ್ತ ಭಾಷೆಯನ್ನು ಲಿಪಿಗೆ ಇಳಿಸಿದಾಗ ಬರುವ ಸಾವಿರಾರು ತೊಡಕುಗಳಿಂದ ಲಕ್ಷ್ಯ-ಲಕ್ಷಣಗಳೊಳಗೆ ಭಾರೀ ವ್ಯಾತ್ಯಾಸ ಬಂದುಬಿಟ್ಟಿದೆ. ಸಂಗೀತಗಾರರು ಲಕ್ಷಣವನ್ನು ಬಿಟ್ಟು ಸ್ವೇಚ್ಛೆಯಿಂದ ವಿಹರಿಸುವಂತಿಲ್ಲ. ಲಕ್ಷಣ ಗ್ರಂಥಗಳು ಈ ನಿಟ್ಟಿನಲ್ಲಿ ಲಕ್ಷ್ಯಕಾರನಿಗೆ ಬೆನ್ನೆಲುಬಾಗಿ ನಿಲ್ಲಬೇಕು. ಇಂತಹ ಲಕ್ಷಣ ಗ್ರಂಥಗಳ ಅವಲೋಕನವನ್ನು ಸಂಶೋಧನಾತ್ಮಕ ಬರವಣಿಗೆ ಸಂಗೀತಗಾರರೆಲ್ಲರಿಗೂ ಈ ಕೃತಿಯು ಸಂಕ್ಷಿಪ್ತವಾಗಿ ವಿಶ್ಲೇಷಿದ್ದಾರೆ.

**ಡಾ. ಚಲುವರಾಜು** ಅವರ ಸಂಪಾಕತ್ವದಲ್ಲಿ **ಬಲಿಚಕ್ರವರ್ತಿ** ಕೃತಿಯು ನಾಡೋಜ ಶ್ರೀಮತಿ ದರೋಜಿ ಈರಮ್ಮ ಹಾಡಿದ ಬಲಿಚಕ್ರವರ್ತಿ ಮೌಖಿಕ ಕಾವ್ಯವು ಅಲೆಮಾರಿ ಸಮುದಾಯಗಳ ಮೌಖಿಕ ಕಾವ್ಯಪರಂಪರೆಯ ಅದರಲ್ಲೂ ಸಾಮಾಜಿಕ ಕಥನಪರಂಪರೆಯ ಬಹುಮುಖ್ಯ ಕಾವ್ಯವಾಗಿರುವುದು ಈ ಕೃತಿಯ ಕಾವ್ಯದಲ್ಲಿ ಕಾವ್ಯನಿರೂಪಣಾ ಶೈಲಿಗೆ ಹಿಡಿದ ಕನ್ನಡಿಯಂತಿದೆ. ಇತ್ತೀಚಿನ ದಿನಮಾನಗಳಲ್ಲಿ ಕಣ್ಮರೆಯಾಗುತ್ತಿರುವ ಮೌಖಿಕ ಪರಂಪರೆಯ ಕಾವ್ಯ ಸಂಪ್ರದಾಯ, ಸಮುದಾಯ ಹಾಗೂ ಸಮಾಜದಿಂದ ದೂರ ಸರಿಯುವ ಮುನ್ನವೇ ಇಂತಹ ಮೌಖಿಕ ಕಾವ್ಯಗಳನ್ನು ಸಂಗ್ರಹಿಸಬೇಕಾದ ಅನಿವಾರ್ಯತೆ

ಬಗ್ಗೆ ವಿವೇಚಿಸುವಂತೆ ಮಾಡುವಲ್ಲಿ ಸಂಪಾದಕರು ಮೌಖಿಕ ಕಾವ್ಯಸಂಪಾದನೆ, ಸಂಗ್ರಹ ಹಾಗೂ ಕಾವ್ಯಪರಂಪರೆಯ ಬಗೆಗೆ ಹೊಂದಿರುವ ತಿಳುವಳಿಕೆಯ ಬಗ್ಗೆ ಬಲಿಚಕ್ರವರ್ತಿ ಕಾವ್ಯ ಕಥೆಯಲ್ಲಿ ಕಾಣಬಹುದು.

**ಮುದೇನೂರು ಸಂಗಣ್ಣ** ಅವರ **ಗೊಂದಲಿಗರ ದೇವೇಂದ್ರಪ್ಪನವರ ಆಟಗಳು** ಎಂಬ ಈ ಸಂಪಾದಕ ಕೃತಿಯು ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯದಿಂದ ಪ್ರಕಟಣೆಗೊಂಡಿದೆ. ಮುದೇನೂರು ಸಂಗಣ್ಣ ಅವರು ಬಹುದೊಡ್ಡ ಜಾನಪದತಜ್ಞರು. ಕನ್ನಡ ಜಾನಪದ ಬದುಕಿನ ಹಲವು ಮಗ್ಗಲುಗಳ ಕುರಿತು ಅವರಿಗಿದ್ದ ಜ್ಞಾನ, ತಿಳುವಳಿಕೆ ಅಪರೂಪದ್ದಾಗಿತ್ತು. ಜಾನಪದ ಲೋಕದಲ್ಲಿ ಇದೊಂದು ಅಧ್ಯಯನಯೋಗ್ಯ ಕೃತಿಯೆಂದು ಗುರುತಿಸಲ್ಪಟ್ಟಿದೆ. ಗೊಂದಲಿಗ ಕಲಾವಿದರ ಆಟಗಳ ಕುರಿತು ಈ ಕೃತಿಯಲ್ಲಿ ಸಂಕ್ಷಿಪ್ತವಾಗಿ ವಿಶ್ಲೇಷಿಸಿದ್ದಾರೆ.

**ಸುಮಿತ್ರ ಎಲ್.ಜಿ.** ಅವರು ೧೯೭೮ರಲ್ಲಿ ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ **ಕರ್ನಾಟಕದ ಜನಪದ ಗೀತೆಗಳ ಸಂಗೀತ ಹಾಗೂ ಸಾಹಿತ್ಯ ಮೌಲ್ಯಗಳ ಒಂದು ಅಧ್ಯಯನ** ಈ ಮಹಾಪ್ರಬಂಧದಲ್ಲಿ ಒಟ್ಟು ಹನ್ನೊಂದು ಅಧ್ಯಾಯಗಳಿವೆ. ಜನಪದ ಗೀತೆ ಅಥವಾ ಹಳ್ಳಿಯ ಹಾಡು ಹಾಗೂ ಸಂಗೀತವನ್ನು ಕುರಿತಂತೆ ನಾಲ್ಕು ಅಧ್ಯಾಯಗಳಲ್ಲೂ, ಸಾಹಿತ್ಯಕ್ಕೆ ಸಂಬಂಧಿಸಿದ ಅಧ್ಯಯನವನ್ನು ಕುರಿತಂತೆ ಮೂರು ಅಧ್ಯಾಯಗಳಲ್ಲೂ ವಿಸ್ತಾರವಾದ ವಿವರಣೆ ಇದೆ. ಇಲ್ಲಿ ಮುಖ್ಯವಾಗಿ ಜನಪದ ಬಿಡಿಗೀತೆಗಳ ಸಂಗೀತವನ್ನು ಕುರಿತು ಅಧ್ಯಯನ ನಡೆದಿದೆ. ಐದನೆಯ ಅಧ್ಯಾಯವಾದ ಸಂಗೀತ, ರಾಗ, ತಾಳ, ಒಂದು ಪರಿಚಯದಲ್ಲಿ ಕಂಡುಬರುವ ಸಾಹಿತ್ಯ, ಸಂಗೀತಗಳು ಜನ ಜೀವನ ಅವಲಂಬಿಸಿರುವ ಕಲೆಗಳು. ಜೀವನದ ಮೌಲ್ಯಗಳು ಬದಲಾದಂತೆಲ್ಲಾ ಸಾಹಿತ್ಯ ಸಂಗೀತಗಳ ಮೌಲ್ಯಗಳೂ ಬದಲಾಗುವುದು ಸಹಜವೇ (ಪು. ೩೩) ಎಂಬ ಹೇಳಿಕೆಯು ಸಂಗೀತವು ನಿಂತ ನೀರಲ್ಲ ಹರಿಯುವ ನೀರು ಎಂಬ ಮಾತನ್ನು ಪುಷ್ಟೀಕರಿಸುತ್ತದೆ.

ಈ ಮಹಾಪ್ರಬಂಧದಲ್ಲಿ ಜನಪದ ಗೀತೆಗಳಿಗೆ ಸ್ವರ ಪ್ರಸ್ತಾರವನ್ನು ಹಾಕಲಾಗಿದೆ. ಸುಮಾರು ಮೂರು ದಶಕಗಳ ಹಿಂದೆಯೇ ಜನಪದ ಸಂಗೀತದ ಅಧ್ಯಯನ ಬಗೆಗೆ ಗೀತೆಗಳನ್ನು ರಾಗ, ಸ್ವರ, ತಾಳ ಛಾಯೆಗಳೊಡನೆ ಹಿಡಿದಿಡುವ ಮೂಲಕ ಇಷ್ಟೊಂದು ಕಾಳಜಿ ವಹಿಸಿರುವುದು ನಿಜಕ್ಕೂ ಅಭಿನಂದನೀಯ. ಜನಪದ ಸಂಗೀತ ಅಧ್ಯಯನಕಾರರಿಗೆ ಇದೊಂದು ಉತ್ತಮ ಮಾರ್ಗದರ್ಶಿ ಗ್ರಂಥವಾಗಿದೆ.

**ಎಂ. ಸುಬ್ಬಲಕ್ಷ್ಮಮ್ಮ** ಅವರು ೧೯೮೩ರಲ್ಲಿ ಮೈಸೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ **ಕರ್ನಾಟಕ ಜಾನಪದ ವಾದ್ಯಗಳು** ಮಹಾಪ್ರಬಂಧವು ಒಟ್ಟು ಏಳು ಅಧ್ಯಾಯಗಳನ್ನೊಳಗೊಂಡಿದ್ದು, ಜಾನಪದ ವಾದ್ಯಗಳ ಉಗಮ ಹಾಗೂ ಪ್ರಾಚೀನತೆಯನ್ನು ಕನ್ನಡದ ಪ್ರಾಚೀನ ಸಾಹಿತ್ಯ ಮತ್ತು ಶಿಲ್ಪಕಲೆಯ ಹಿನ್ನೆಲೆಯಲ್ಲಿ ಗುರುತಿಸಿದ್ದಾರೆ. ವಾದ್ಯಗಳ ವರ್ಗೀಕರಣ(ತತ ಸುಶಿರ ಅವನದ್ದ ಮತ್ತು ಘನಗಳೆಂಬಂತೆ) ತಯಾರಿಕೆ, ನುಡಿಸುವಿಕೆ ಅಥವಾ ಬಾರಿಸುವಿಕೆಯ ಬಗೆಗಿನ ವಿವರಗಳು ಇಲ್ಲಿವೆ.

ಪ್ರತಿಯೊಂದು ಜಾನಪದ ಕಲೆಗಳಲ್ಲಿ ಬಳಸುವ ವಾದ್ಯಗಳನ್ನು ಅಂದರೆ ೧. ತಂತಿ ವಾದ್ಯಗಳು: ಏಕತಾರಿ, ಕಿನ್ನರಿವಾದ್ಯ ಮುಂತಾದವುಗಳು, ೨. ಸುಶಿರ ವಾದ್ಯಗಳು: ಕೊಳಲು, ಶಂಖು, ಶ್ರುತಿ, ಶಹನಾಹಾ ಮತ್ತು ಪುಂಗಿ ವಾದ್ಯಗಳು, ೩. ಅವನದ್ಧ ವಾದ್ಯಗಳು: ತಪಡಿ, ದಂಮಡಿ, ದಿಮ್ಮಿ, ಸಂಬಾಳ ಮುಂತಾದವುಗಳು.

ಘನವಾದ್ಯಗಳು: ಗಂಟೆ, ಜಾಗಟೆ ಕರತಾಳ ಮುಂತಾದ ವಾದ್ಯಗಳ ಕೊಡುಗೆಗಳು ನಿರಂತರವಾಗಿ ನಡೆಯುತ್ತಲೆ ಬಂದಿದೆ.

ಇವರು ಪ್ರಸ್ತುತದಲ್ಲಿ ಮನೋಭಿಲಾಷೆಯ ಹಿನ್ನೆಲೆಯಲ್ಲಿ ಇದು ತುಂಬಾ ಸ್ವಾಗತಾರ್ಹ. ಇವರು ಪ್ರತಿಯೊಂದು ಜಾನಪದ ಸಂಗೀತದಲ್ಲಿ ಬಳಸುವ ವಾದ್ಯಗಳನ್ನು ಪ್ರತ್ಯೇಕವಾಗಿ ತಿಳಿಸಿದ್ದಾರೆ. ಒಟ್ಟಾರೆಯಾಗಿ ವಾದ್ಯಗಳ ಬಗೆಗೆ ಅಧ್ಯಯನ ಮಾಡುವವರಿಗೆ ಈ ಕೃತಿ ಮಹತ್ವದ ಮಾಹಿತಿ ಒದಗಿಸುತ್ತದೆ.

**ಹನುಮಣ್ಣನಾಯಕ ದೊರೆ** ಅವರು ೨೦೦೨ರಲ್ಲಿ ಸಂಗೀತ ಮತ್ತು ನೃತ್ಯ ವಿಭಾಗ, ಧಾರವಾಡ ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ **'ಹೈದ್ರಾಬಾದ್ ಕರ್ನಾಟಕದ ಜನಪದ ಸಂಗೀತ'** ಪಿಎಚ್.ಡಿ. ಮಹಾಪ್ರಬಂಧದಲ್ಲಿ ಒಟ್ಟು ಆರು ಅಧ್ಯಾಯಗಳು ಬರುತ್ತವೆ. ಈ ಪ್ರಬಂಧದಲ್ಲಿ ಜನಪದ ಸಂಗೀತದ ಉಗಮ, ವಿಕಾಸ, ಶಾಸ್ತ್ರೀಯ ಸಂಗೀತದ ಕೊಡುಗೆ ಏನೆಂಬುದನ್ನು ಸಂಪೂರ್ಣವಾಗಿ ವಿಶ್ಲೇಷಿಸಲಾಗಿದೆ. ಅಷ್ಟೇ ಅಲ್ಲದೆ ಶಾಸ್ತ್ರೀಯ ಚೌಕಟ್ಟಿಲ್ಲದ ಜಾನಪದ ಸಂಗೀತಕ್ಕೆ ಅಂದರೆ ಕುಟ್ಟುವ ಪದ, ಬೀಸುವ ಪದ, ಗೀಗೀ ಪದ, ಲಾವಣಿಪದ, ಮೊಹರಂ ಪದ, ಜೋಗುಳದ ಪದ, ಹಂತಿಯ ಪದ, ಚೌಡಿಕೆ ಪದ, ಗೊಂದಳಿಗರ ಪದ, ಸೋಬಾನಪದ, ಭಜನೆ ಪದ ಮತ್ತು ಬುರ್ರಕಥಾ ಸಂಗೀತ ಗೀತೆಗಳಿಗೆ "ಸ್ವರ ಪ್ರಸ್ತಾರ" ಹಾಕುವ ಮೂಲಕವಾಗಿ ಜನಪದ ಹಾಡುಗಳನ್ನು ಸಂಗೀತ(ರಾಗದ) ಚೌಕಟ್ಟಿನಲ್ಲಿ ಹಿಡಿದಿಡುವ ಕಾರ್ಯ ಮಾಡಿದ್ದಾರೆ. ಜನಪದ ಸಂಗೀತ, ಶಿಷ್ಟ ಸಂಗೀತದ ಬಗೆಗೆ ಅಧ್ಯಯನ ನಡೆಸುವವರಿಗೆ ಇದೊಂದು ಒಳ್ಳೆಯ ಮಾರ್ಗದರ್ಶಿ ಗ್ರಂಥವಾಗಿದೆ.

**ನಾಗಪುಷ್ಪಲತಾ** ಅವರು ೨೦೦೪ರಲ್ಲಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ **ಕರ್ನಾಟಕ ರಂಗಕಲೆಗಳ ಕೋಶ** ಎಂಬ ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧದಲ್ಲಿ ಸಂಗೀತ ಹುಟ್ಟು ಮತ್ತು ಬೆಳವಣಿಗೆ ಕುರಿತು ಹಾಗೂ ಜನಪದ ಸಂಗೀತ, ದೊಡ್ಡಾಟ, ಸಣ್ಣಾಟ, ಯಕ್ಷಗಾನ, ತೆಂಕುತಿಟ್ಟು ಬಡಗತಿಟ್ಟು, ಕೃಷ್ಣಪಾರಿಜಾತ ಎಂಬ ಕಲೆಗಳಲ್ಲಿ ಬರುವ ಹಾಡುಗಾರಿಕೆ, ವಾದ್ಯಗಳ ಬಳಕೆ, ನೃತ್ಯ, ವೇಷಭೂಷಣ ಕುರಿತಾಗಿ ಸವಿಸ್ತಾರವಾಗಿ ವಿಶ್ಲೇಷಿಸಿದ್ದಾರೆ.

ಜನಪದ ಸಂಗೀತ ಕುರಿತು ಹೇಳುವಾಗ ಶಾಸ್ತ್ರೀಯ ಸಂಗೀತಕ್ಕೆ ತಾಯಿ ಬೇರು ಜನಪದ ಸಂಗೀತ ಎಂದು ಹೇಳಿದ್ದಾರೆ. ಜನಪದ ರಂಗದಲ್ಲಿ ಸಂಗೀತ ಯಾವ ರೀತಿಯಾಗಿ ತನ್ನ ಕಾರ್ಯವನ್ನು ಮಾಡುತ್ತಾ ರಾಗ, ರಸ, ತಾಳ ಮತ್ತು ವಾದ್ಯಗಳು ಪ್ರಮುಖ ಪಾತ್ರವಹಿಸುತ್ತವೆ ಎಂಬುದರ ಕುರಿತು ಸ್ಪಷ್ಟ ವಿವರಣೆ ನೀಡಿದ್ದಾರೆ.

ಗೊಂಬೆಯಾಟ, ಸೂತ್ರದ ಗೊಂಬೆಯಾಟ, ಬಯಲಾಟ, ಮೂಡಲಪಾಯ, ಬಡಗುತಿಟ್ಟು, ಕೃಷ್ಣಪರಿಜಾತ ಮತ್ತು ಬದಲಾವಣೆಯ ಪಥದಲ್ಲಿ ಜನಪದ ರಂಗಕಲೆಗಳಲ್ಲಿ ಗಾಯನ, ವಾದನ ಮತ್ತು ನರ್ತನಗಳ ಬಳಕೆ ಕುರಿತು ಸಂಪೂರ್ಣವಿವರಣೆ ನೀಡಿದ್ದಾರೆ. ಪ್ರತಿಯೊಂದು ರಂಗ ಸಂಗೀತದಲ್ಲಿ ಬೇರೆ ಬೇರೆ ವಾದ್ಯಗಳನ್ನು ಬಳಸುತ್ತಾರೆಂಬುದು ತಿಳಿಸಲಾಗಿದೆ. ವಾದ್ಯಗಳ ವಿವರಣೆ ಹಾಗೂ ರಚನೆ ಕುರಿತು ವಿಶ್ಲೇಷಿಸಿದ್ದಾರೆ. ಅಷ್ಟೆ ಅಲ್ಲದೇ ಹಲವಾರು ನಾಟಕಗಳಲ್ಲಿ ಬರುವ ಹಾಡುಗಳನ್ನು ಬರೆದಿದ್ದಾರೆ. ರಂಗ ಸಂಗೀತದಲ್ಲಿ ಕಂಡುಬರುವ ರಾಗ-ತಾಳಗಳ ಪರಿಚಯವನ್ನು ಉಲ್ಲೇಖಿಸಿದ್ದಾರೆ. ಇದೊಂದು ಉತ್ತಮವಾದ ಮಹಾಪ್ರಬಂಧವಾಗಿದ್ದು, ಶಾಸ್ತ್ರೀಯ ಸಂಗೀತ ಮತ್ತು ಜನಪದ ಸಂಗೀತದ ಬಗೆಗೆ ಅಧ್ಯಯನ ಮಾಡುವವರಿಗೆ ಒಳ್ಳೆಯ ಮಾರ್ಗಸೂಚಿಯಾಗಿದೆ.

## ಅಧ್ಯಾಯ ಎರಡು

# ಹೈದ್ರಾಬಾದ್ ಕರ್ನಾಟಕ ಪ್ರದೇಶದ ಭೌಗೋಳಿಕ ಹಿನ್ನೆಲೆ

ಒಂದು ಪ್ರದೇಶದ ಪರಿಚಯವನ್ನು ಕಂಡುಕೊಳ್ಳಬೇಕಾದರೆ ನಾವು ಮೊದಲಿಗೆ ಪರಿಗಣಿಸುವುದು ಪ್ರವೇಶಿಸುವುದು ಅಲ್ಲಿನ ಭೌಗೋಳಿಕ ಪರಿಸರವನ್ನು ಕುರಿತು ಪ್ರಬಂಧದ ಮೊದಲ ಅಧ್ಯಯನದಲ್ಲಿ ಅಧ್ಯಯನದ ಉದ್ದೇಶಕ್ಕೆ ಅನುಗುಣವಾಗಿ ಸಮುದಾಯಗಳ ನೆಲೆಗಳ ಸಮೀಕ್ಷೆಯನ್ನ ಕೈಗೊಂಡು ವಿವಿಧ ಅಧ್ಯಯನಗಳಿಗೆ ಬೇಕಾದ ಮಾಹಿತಿಯನ್ನ ದ್ವಿತೀಯ ಮೂಲಗಳಿಂದ ಪಡೆದುಕೊಂಡು ಅಧ್ಯಯನವನ್ನು ವಿವರಣೆಗೆ ಒಳಪಡಿಸಲಾಗಿದೆ. ಅಧ್ಯಯನ ಕ್ಷೇತ್ರ ಪರಿಚಯವನ್ನು ಮಾಡಿಸುವ ಉದ್ದೇಶವಿಟ್ಟುಕೊಂಡಿರುವ ಪ್ರಸ್ತುತ ಅಧ್ಯಾಯದಲ್ಲಿ ಅಧ್ಯಯನ ಕ್ಷೇತ್ರದ ಜಿಲ್ಲೆ, ತಾಲೂಕುಗಳ ಮತ್ತು ಗ್ರಾಮೀಣ ಪ್ರದೇಶಗಳ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ವಿವರಗಳನ್ನು ಸಂಕ್ಷಿಪ್ತವಾಗಿ ಕೊಡಲಾಗಿದೆ. ಪ್ರಸ್ತುತ ಅಧ್ಯಾಯವು ಅಧ್ಯಯನ ಕ್ಷೇತ್ರದ ಒಟ್ಟು ಚಿತ್ರಣವನ್ನು ಕೊಡುತ್ತದೆ.

### ಹೈದ್ರಾಬಾದ್ ಕರ್ನಾಟಕದ ಪ್ರಾದೇಶಿಕ ಪಕ್ಷಿನೋಟ

ಕರ್ನಾಟಕದ ಉತ್ತರದಲ್ಲಿರುವ ಹೈದ್ರಾಬಾದ್ ಕರ್ನಾಟಕ ಪ್ರದೇಶ ಬೀದರ, ಕಲಬುರ್ಗಿ, ರಾಯಚೂರು, ಕೊಪ್ಪಳ ಮತ್ತು ಬಳ್ಳಾರಿ ಜಿಲ್ಲೆಗಳನ್ನು ಒಳಗೊಂಡಿದೆ. ಸ್ವಾತಂತ್ರ್ಯ ಪೂರ್ವದಲ್ಲಿ ಹೈದ್ರಾಬಾದ್ ನಿಜಾಮನ ಆಳ್ವಿಕೆಗೆ ಒಳಪಟ್ಟಿದ್ದ ಈ ಪ್ರದೇಶ ರಾಜಕೀಯವಾಗಿ ಮತ್ತು ಸಾಂಸ್ಕೃತಿಕವಾಗಿ ವಿಶಿಷ್ಟತೆಯನ್ನು ಪಡೆದುಕೊಂಡಿದೆ. ರಾಜಕೀಯವಾಗಿ ಇದು ನಿಜಾಮನ ಆಡಳಿತಕ್ಕೆ ಒಳಪಟ್ಟಿತ್ತಾದ್ದರಿಂದ ಉರ್ದು ಭಾಷೆಯ ಪ್ರಭಾವ ಸಾಕಷ್ಟಾಗಿದೆ. ಆದ್ದರಿಂದಲೇ ಬಹುತೇಕ ಕನ್ನಡ ಮತ್ತು ಉರ್ದುಗಳ ದ್ವಿಭಾಷಾ ಪ್ರದೇಶ ಇದಾಗಿದೆ.

ಪೂರ್ವಕ್ಕೆ ಆಂಧ್ರಪ್ರದೇಶ, ಉತ್ತರಕ್ಕೆ ಮಹಾರಾಷ್ಟ್ರವನ್ನೊಳಗೊಂಡ ಭೂಪ್ರದೇಶ ಇದಾಗಿದ್ದರಿಂದ ತೆಲುಗು, ಮರಾಠಿಯ ಪ್ರಭಾವವು ಇಲ್ಲಿ ಆಗಿದೆ. ಗುಲಬರ್ಗಾ ಮತ್ತು ಬೀದರ ಪ್ರದೇಶಗಳನ್ನು ಸಗರನಾಡು, ಶರಣರ ಬೀಡು ಎಂದು ಕರೆಯಲಾಗುತ್ತದೆ. ಇಲ್ಲಿ ಸಮಾಜದ ಅನಿಷ್ಟ ಪದ್ಧತಿಗಳ, ಮೌಢ್ಯತೆಗಳ ವಿರುದ್ಧ ಮತ್ತು ಅತ್ಯಂತ ಶೋಷಣೆಗೆ ಒಳಪಟ್ಟ ಜನಸಾಮಾನ್ಯರ ಪರವಾಗಿ ಸ್ತ್ರೀ ಸಮಾನತೆಯ ಪರವಾಗಿ, ಕನ್ನಡ ಸಾಂಸ್ಕೃತಿಕ ಮತ್ತು ರಾಜಕೀಯ ಇತಿಹಾಸದಲ್ಲಿ ಅತ್ಯಂತ ಪ್ರಭಾವಯುತ ಚಳುವಳಿಗಳಾಗಿವೆ. ಇಲ್ಲಿ ಅನೇಕ ಸಾಮಾಜಿಕ ವಿಪ್ಲವಗಳಿಗೆ ಕಾರಣವಾದ ವಚನ ಚಳವಳಿ ನಡೆದದ್ದು

ಈ ನಾಡಿನಲ್ಲಿಯೆ ಬಸವೇಶ್ವರ, ಅಲ್ಲಮ, ಸಿದ್ಧರಾಮ ಮತ್ತು ಅಕ್ಕಮಹಾದೇವಿ, ಕೊಡೇಕಲ್ ಬಸವೇಶ್ವರ, ಕಲಬುರ್ಗಿ ಶರಣಬಸವ ಹಾಗೂ ಖ್ವಾಜಾಬಂದೇನವಾಜಿ, ಕಡಕೋಳ ಮಡಿವಾಳೇಶ್ವರ, ತಿಂಥಣಿ ಮೌನೇಶ್ವರಂತಹವರು ಮಾಡಿದ ಕ್ರಾಂತಿ ಅದ್ಭುತವಾಗಿದೆ. ಎಲ್ಲ ಧರ್ಮದ ಎಲ್ಲಾ ಜಾತಿಗಳ ಜನರನ್ನು ಒಗ್ಗೂಡಿಸುವಲ್ಲಿ ಅವರ ಪಾತ್ರ ಶ್ಲಾಘನೀಯವಾಗಿದೆ. ಇಂತಹ ಸಾಂಸ್ಕೃತಿಕ ವ್ಯಕ್ತಿಗಳು ಬೀರಿದ ಪ್ರಭಾವ ಇನ್ನೂ ದಟ್ಟವಾಗಿಯೇ ಇವೆ.

ಅನಂತರದ ದಿನಗಳಲ್ಲಿ ಉಂಟಾದ ರಾಜಕೀಯ ವಿಪ್ಲವಗಳು ಕೂಡ ಅಷ್ಟೇ ಪ್ರಮುಖ ವೃತ್ತಾಂತಗಳಾಗಿವೆ. ಈ ಪ್ರದೇಶದಲ್ಲಿ ಆಳಿದ ಬಹಮನಿ ಮತ್ತು ಘಾಹಿರಾಜ ಮನೆತನಗಳು ಬೀರಿದ ಪ್ರಭಾವವು ಅತ್ಯಂತ ಮುಖ್ಯವಾದವು. ವಿಜಯನಗರದ ಪತನದ ನಂತರ ಹುಟ್ಟಿಕೊಂಡ ನೂರಾರು ಪಾಳೆಗಾರರು ಹಾಗೂ ಈ ಹಂತದಲ್ಲಿಯೇ ಹಿಂದೂ ಮತ್ತು ಮುಸ್ಲಿಂ ಧರ್ಮಗಳ ನಡುವಿನ ಸಾಮರಸ್ಯವನ್ನು ಸಾರುವ ಸೂಫಿಪಂಥಗಳು ಇವೆಲ್ಲವೂ ಹೈದ್ರಾಬಾದ್‌ಕರ್ನಾಟಕ ಪ್ರದೇಶದ ಸಾಂಸ್ಕೃತಿಕ ಮತ್ತು ರಾಜಕೀಯ ಜೀವನವನ್ನು ವಿಶದವಾಗಿ ನೋಡಲು ಅನುವು ಮಾಡಿಕೊಡುತ್ತದೆ.

ಇಷ್ಟೆಲ್ಲಾ ರಾಜಕೀಯ ಹಾಗೂ ಸಾಂಸ್ಕೃತಿಕ ಚರಿತ್ರೆಯ ಏಳು-ಬೀಳುಗಳ ನಡುವೆ ಸ್ಥಳೀಯ ಸಮುದಾಯಗಳು ತಮ್ಮದೇ ಆದ ವಿಶಿಷ್ಟ ಸಂಸ್ಕೃತಿಯನ್ನು ಕಾಪಾಡಿಕೊಂಡು ಬಂದಂತಹ ದುಡಿಯುವ ವರ್ಗಗಳ ಜಾನಪದ ಸಮುದಾಯಗಳು ನಮ್ಮ ಸಾಂಸ್ಕೃತಿಕ ಚರಿತ್ರೆಯ ಪ್ರಮುಖ ಮೌಖಿಕ ಆಕರಗಳಂತೆ ಕಂಡುಬರುತ್ತದೆ. ಇಲ್ಲಿಯೇ ಹಲವು ಜಾನಪದ ಸಂಗೀತ ಸಮುದಾಯಗಳು ತಮ್ಮ ತಮ್ಮ ವೃತ್ತಿ ಕಲೆಗಳ ಮೂಲಕ ಸಮಾಜಕ್ಕೆ ವಿಶಿಷ್ಟವಾದ ಕೊಡುಗೆಗಳನ್ನು ಕೊಟ್ಟಿದೆ. ಹೈದ್ರಾಬಾದ್ ಕರ್ನಾಟಕ ಹಲವಾರು ಜಾನಪದ ಸಂಗೀತ ಸಮುದಾಯಗಳನ್ನೊಳಗೊಂಡ ಒಂದು ವಿಶಿಷ್ಟ ಭೂಪ್ರದೇಶವಾಗಿ ಹಲವು ತಲ್ಲಣಗಳಿಗೆ ತನ್ನನ್ನು ಒಡ್ಡಿಕೊಂಡು ನಿಧಾನ ಅಭಿವೃದ್ಧಿ ಪಥದಲ್ಲಿ ಸಾಗುತ್ತಿರುವ ಈ ಪ್ರದೇಶದ ಸಾಂಸ್ಕೃತಿಕ ಬದುಕು ಮಾತ್ರ ಅತ್ಯಂತ ಶ್ರೀಮಂತವಾದದ್ದು. ಬಹುತೇಕ ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ ಮತ್ತು ಹಿಂದುಳಿದ ಅನೇಕ ಜಾನಪದ ಸಂಗೀತ ಸಮುದಾಯಗಳ ಪ್ರಾತಿನಿಧಿಕ ರೂಪವಾಗಿ ಕಂಡುಬರುವ ಈ ಪ್ರದೇಶದ ಜಾನಪದ ಸಂಗೀತ ಸಮುದಾಯಗಳು ಸಾಂಸ್ಕೃತಿಕ ಲೋಕಕ್ಕೆ ಕೊಟ್ಟ ಕೊಡುಗೆ ಅಪಾರ. ಅಂಥವುಗಳಲ್ಲಿ ಕೊರಮ, ಹಂಡಿಜೋಗಿ, ಬುಡ್ಗಜಂಗಮ, ಗೊಂದಳಿ, ಚೆನ್ನದಾಸರ ಸಮುದಾಯಗಳು ಅತ್ಯಂತ ಪ್ರಮುಖವಾಗಿವೆ.

## ಆಯ್ದ ಜಿಲ್ಲೆಗಳ ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ

### ಕಲಬುರ್ಗಿ-ಬೀದರ ಜಿಲ್ಲಾ

ಸ್ವಾತಂತ್ರ್ಯ ಪೂರ್ವದಲ್ಲಿ ಹೈದ್ರಾಬಾದ್ ನಿಜಾಮನ ಆಳ್ವಿಕೆಗೆ ಒಳಪಟ್ಟಿದ್ದ ಈ ಪ್ರದೇಶ ರಾಜಕೀಯವಾಗಿ ಮತ್ತು ಸಾಂಸ್ಕೃತಿಕವಾಗಿ ವಿಶಿಷ್ಟತೆಯನ್ನು ಪಡೆದುಕೊಂಡಿದೆ. ರಾಜಕೀಯವಾಗಿ ಇದು ನಿಜಾಮನ ಆಡಳಿತಕ್ಕೆ ಒಳಪಟ್ಟಿತ್ತಾದ್ದರಿಂದ ಉರ್ದು ಭಾಷೆಯ ಪ್ರಭಾವ ಸಾಕಷ್ಟಾಗಿದೆ. ಆದ್ದರಿಂದಲೇ ಬಹುತೇಕ ಕನ್ನಡ ಮತ್ತು ಉರ್ದುಗಳ ದ್ವಿಭಾಷ ಪ್ರದೇಶ ಇದಾಗಿದೆ.

ಪೂರ್ವಕ್ಕೆ ಆಂಧ್ರಪ್ರದೇಶ, ಉತ್ತರಕ್ಕೆ ಮಹಾರಾಷ್ಟ್ರವನ್ನೊಳಗೊಂಡ ಭೂಪ್ರದೇಶ ಇದಾಗಿದ್ದರಿಂದ ತೆಲುಗು, ಮರಾಠಿಯ ಪ್ರಭಾವವು ಇಲ್ಲಿ ಹೆಚ್ಚಾಗಿ ಕಂಡುಬಂದಿದೆ. ಗುಲಬರ್ಗಾ ಮತ್ತು ಬೀದರ ಪ್ರದೇಶಗಳನ್ನು ಸಗರನಾಡು, ಶರಣರ ಬೀಡು ಎಂದು ಕರೆಯಲಾಗುತ್ತದೆ. ಸಮಾಜದ ಅನಿಷ್ಟ ಪದ್ಧತಿಗಳ, ಮೌಢ್ಯತೆಗಳ ವಿರುದ್ಧ ಮತ್ತು ಅತ್ಯಂತ ಶೋಷಣೆಗೆ ಒಳಪಟ್ಟ ಜನಸಾಮಾನ್ಯರ ಪರವಾಗಿ ಸ್ತ್ರೀ ಸಮಾನತೆಯ ಪರವಾಗಿ, ಕನ್ನಡ ಸಾಂಸ್ಕೃತಿಕ ಮತ್ತು ರಾಜಕೀಯ ಇತಿಹಾಸದಲ್ಲಿ ಅತ್ಯಂತ ಪ್ರಭಾವಯುತ ಚಳುವಳಿಗಳಾಗಿವೆ. ಅನೇಕ ಸಾಮಾಜಿಕ ವಿಪ್ಲವಗಳಿಗೆ. ಕಾರಣವಾದ ವಚನ ಚಳುವಳಿ ನಡೆದದ್ದು ಈ ನಾಡಿನಲ್ಲಿಯೇ ಬಸವೇಶ್ವರ, ಅಲ್ಲಮ, ಸಿದ್ಧರಾಮ ಮತ್ತು ಅಕ್ಕಮಹಾದೇವಿ, ಕೊಡೆಕಲ್ ಬಸವೇಶ್ವರ, ಕಲಬುರ್ಗಿ ಶರಣಬಸವ ಹಾಗೂ ಖ್ವಾಜಾಬಂದೇನವಾಜ್, ಕಡಕೋಳ ಮಡಿವಾಳೇಶ್ವರ, ತಿಂಥಣಿ ಮೌನೇಶ್ವರರಂತಹವರು ಮಾಡಿದ ಕ್ರಾಂತಿ ಅದ್ಭುತವಾಗಿದೆ. ಎಲ್ಲ ಧರ್ಮದ ಎಲಾ ಜಾತಿಗಳ ಜನರನ್ನು ಒಗ್ಗೂಡಿಸುವಲ್ಲಿ ಅವರ ಪಾತ್ರ ಶ್ಲಾಘನೀಯವಾಗಿದೆ. ಇಂತಹ ಸಾಂಸ್ಕೃತಿಕ ವ್ಯಕ್ತಿಗಳು ಬೀರಿದ ಪ್ರಭಾವ ಇನ್ನು ದಟ್ಟವಾಗಿಯೇ ಇವೆ.

ಅನಂತರದ ದಿನಗಳಲ್ಲಿ ಉಂಟಾದ ರಾಜಕೀಯ ವಿಪ್ಲವಗಳು ಕೂಡ ಅಷ್ಟೇ ಪ್ರಮುಖ ವೃತ್ತಾಂತಗಳಾಗಿವೆ. ಈ ಪ್ರದೇಶದಲ್ಲಿ ಆಳಿದ ಬಹಮನಿ ಮತ್ತು ಷಾಹಿರಾಜ ಮನೆತನಗಳು ಬೀರಿದ ಪ್ರಭಾವವು ಅತ್ಯಂತ ಮುಖ್ಯವಾದವು. ವಿಜಯನಗರದ ಪತನದ ನಂತರ ಹುಟ್ಟಿಕೊಂಡ ನೂರಾರು ಪಾಳೆಗಾರರು ಹಾಗೂ ಈ ಹಂತದಲ್ಲಿಯೇ ಹಿಂದೂ ಮತ್ತು ಮುಸ್ಲಿಂ ಧರ್ಮಗಳ ನಡುವಿನ ಸಾಮರಸ್ಯವನ್ನು ಸಾರುವ ಸೂಫಿಪಂಥಗಳು ಇವೆಲ್ಲವೂ ಹೈದ್ರಾಬಾದ್ ಕರ್ನಾಟಕ ಪ್ರದೇಶದ ಸಾಂಸ್ಕೃತಿಕ ಮತ್ತು ರಾಜಕೀಯ ಜೀವನವನ್ನು ವಿಷಾದವಾಗಿ ನೋಡಲು ಅನುವು ಮಾಡಿಕೊಡುತ್ತದೆ.

ಇಷ್ಟೇಲ್ಲಾ ರಾಜಕೀಯ ಹಾಗೂ ಸಾಂಸ್ಕೃತಿಕ ಚರಿತ್ರೆಯ ಏಳುಬೀಳುಗಳ ನಡುವೆ ಸ್ಥಳೀಯ ಅಲೆಮಾರಿ ಸಮುದಾಯಗಳು ತಮ್ಮದೇ ಆದ ವಿಶಿಷ್ಟ ಸಾಂಸ್ಕೃತಿಯನ್ನು ಕಾಪಾಡಿಕೊಂಡು ಬಂದಂತಹ ಮತ್ತು ದುಡಿಯುವ ವರ್ಗಗಳ ಜಾನಪದ ಸಮುದಾಯಗಳು ನಮ್ಮ ಸಾಂಸ್ಕೃತಿಕ ಚರಿತ್ರೆಯ ಪ್ರಮುಖ ಮೌಖಿಕ ಆಕರಗಳಂತೆ ಕಂಡುಬರುತ್ತದೆ. ಇಲ್ಲಿಯೇ ಹಲವು ಜಾನಪದ ಸಂಗೀತ ಸಮುದಾಯಗಳು ತಮ್ಮ ತಮ್ಮ ವೃತ್ತಿ ಕಲೆಗ ಮೂಲಕ ಸಮಾಜಕ್ಕೆ ವಿಶಿಷ್ಟವಾದ ಕೊಡುಗೆಗಳನ್ನು ಕೊಟ್ಟಿದೆ. ಹೈದ್ರಾಬಾದ್ ಕರ್ನಾಟಕ ಹಲವಾರು ಅಲೆಮಾರಿ ಸಮುದಾಯಗಳನ್ನೊಳಗೊಂಡ ಒಂದು ವಿಶಿಷ್ಟ ಭೂ ಪ್ರದೇಶವಾಗಿ ಹಲವು ತಲ್ಲಣಗಳಿಗೆ ತನನ್ನು ಒಡ್ಡಿಕೊಂಡು ನಿಧಾನ ಅಭಿವೃದ್ಧಿ ಪಥದಲ್ಲಿ ಸಾಗುತ್ತಿರುವ ಈ ಪ್ರದೇಶದ ಸಾಂಸ್ಕೃತಿಕ ಬದುಕು ಮಾತ್ರ ಅತ್ಯಂತ ಶ್ರೀಮಂತವಾದದ್ದು, ಬಹುತೇಕ ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ ಮತ್ತು ಹಿಂದುಳಿದ ಅನೇಕ ಅಲೆಮಾರಿ ಸಮುದಾಯಗಳ ಪ್ರಾತಿನಿಧಿಕ ರೂಪವಾಗಿ ಕಂಡುಬರುವ ಈ ಪ್ರದೇಶದ ಜನಪದ ಸಂಗೀತ ಸಮುದಾಯಗಳು ಸಾಂಸ್ಕೃತಿಕ ಲೋಕಕ್ಕೆ ಕೊಟ್ಟ ಕೊಡುಗೆ ಅಪಾರ ಅಂಥವುಗಳಲ್ಲಿ ಕೊರಮ, ಹಂಡಿಜೋಗಿ, ಬುಡ್ಗಜಂಗಮ, ಗೊಂಧಳಿ, ಚೆನ್ನದಾಸರ ಅಲೆಮಾರಿ ಸಮುದಾಯಗಳು ಪ್ರಮುಖವಾಗಿವೆ.

## ಯಾದಗಿರಿ ಜಿಲ್ಲಾ

ಕರ್ನಾಟಕ ಘನ ಸರ್ಕಾರವು ಯಾದಗಿರಿ ಜಿಲ್ಲೆಯನ್ನು ರಾಜ್ಯದ ೩೦ನೇ ಜಿಲ್ಲೆಯಾಗಿ ೨೦೦೯ರ ಡಿಸೆಂಬರ್ ೩೦ರಂದು ಗುಲಬರ್ಗಾ ಜಿಲ್ಲೆಯಿಂದ ಬೇರ್ಪಡಿಸಿತು. ಗುಲಬರ್ಗಾ ಜಿಲ್ಲೆಯ ತಾಲೂಕು ಕೇಂದ್ರವಾಗಿದ್ದ ಯಾದಗಿರಿ, ಸುರುಪುರ ಮತ್ತು ಶಹಾಪುರ ಈ ಮೂರು ತಾಲೂಕುಗಳನ್ನೊಳಗೊಂಡ ಯಾದಗಿರಿ ಜಿಲ್ಲಾ ಕೇಂದ್ರವಾಗಿದೆ.

ಜಿಲ್ಲೆಯಲ್ಲಿ ಭೀಮಾ ಮತ್ತು ಕೃಷ್ಣಾ ನದಿಗಳು ಹರಿಯುತ್ತಿದ್ದರೂ ಜಿಲ್ಲೆಯ ಕೆಲವು ಮತ ಕ್ಷೇತ್ರದ ಭಾಗಗಳಿಗೆ ನೀರಾವರಿ ಸೌಲಭ್ಯ ಇಲ್ಲದಿರುವುದನ್ನು ಕಾಣಬಹುದು. ಯಾದಗಿರಿ ಜಿಲ್ಲೆಯಲ್ಲಿ ಹಲವಾರು ಕೆರೆಗಳು ಇರುವುದರಿಂದ ಈ ಭಾಗದ ಕೆಲವು ರೈತರಿಗೆ ಈ ಕೆರೆಗಳೇ ನೀರಾವರಿ ಕೃಷಿಗೆ ಆಧಾರವಾಗಿದೆ. ಕೆರೆಗಳಲ್ಲಿನ ನೀರು ಖಾಲಿಯಾದರೆ ರೈತರಿಗೆ ದಿಕ್ಕು ತೋಚದಂತಹ ಪರಿಸ್ಥಿತಿ ಉಂಟಾಗುತ್ತಿತ್ತು. ಪಕ್ಕದಲ್ಲಿಯೇ ಹರಿಯುವ ಭೀಮಾನದಿಯಿಂದ ಈ ಕೆರೆಗಳಿಗೆ ನೀರು ತುಂಬಿಸುವ ಯೋಜನೆ ಅನುಷ್ಠಾನಗೊಳಿಸುವಂತೆ ಹಲವಾರು ಬಾರಿ ಒತ್ತಾಯಿಸಿದರೂ ಅದು ಪ್ರಯೋಜನವಾಗಿರಲ್ಲಿಲ್ಲ. ಹಲವು ಕ್ಷೇತ್ರಗಳಲ್ಲಿ ಅಭಿವೃದ್ಧಿ ಹೊಂದಬೇಕಾದ ಅವಶ್ಯಕತೆ ಇದ್ದು ನಾಗರಿಕರು, ಜನಪ್ರತಿನಿಧಿಗಳು ಹೆಚ್ಚಿನ ಮುತುವರ್ಜಿ ವಹಿಸಬೇಕಾದ ಅವಶ್ಯಕತೆ ಇದೆ.

ರಾಜ್ಯದ ಉತ್ತರ ಭಾಗದಲ್ಲಿರುವ ಯಾದಗಿರಿ ಜಿಲ್ಲೆಯ ಸುರಪುರ, ಶಹಾಪುರ, ಯಾದಗಿರಿ ತಾಲೂಕಗಳನ್ನು ಒಳಗೊಂಡಿದೆ. ಈ ಪ್ರದೇಶವು ಒಣಹವೆಯಿಂದ ಕೂಡಿದ್ದು, ಹೆಚ್ಚಾಗಿ ಮರಳು ಮಿಶ್ರಿತ ಜೇಡಿಮಣ್ಣು ಮತ್ತು ಕಪುïŒಮಣ್ಣಿನಿಂದ ಕೂಡಿದ ಬಹು ವಿಶಾಲವಾದ ಬಯಲು ನಾಡಾಗಿದೆ. ಒಣ ಬೇಸಾಯ, ಬರಗಾಲದ ನೆರಳಿನಲ್ಲಿ ಅರೆ ಕೃಷಿ ಕಾರ್ಮಿಕರು ಈ ಪ್ರದೇಶದಲ್ಲಿ ಹೆಚ್ಚು ಕಂಡುಬರುವರು. ಐಷಾರಾಮದ ವೈಭವಯುತ ಜೀವನವಿಲ್ಲದ, ಅಪಾರ ದೈವಭಕ್ತಿಯೊಂದಿಗೆ ಸಂಬಂಧಗಳನ್ನು ಹೆಣೆದುಕೊಂಡು ಸಂಗೀತ, ಪ್ರದರ್ಶನ ಕಲೆಗಳಿಗೆ ಗೌರವ ಕೊಡುವವರಾಗಿದ್ದಾರೆ. ತಳ ಸಮುದಾಯಗಳು ಉತ್ಪಾದಿಸುವ ಕರಕುಶಲ ವಸ್ತುಗಳು ಈ ಭಾಗದ ಜನತೆಗೆ ಬಹು ಇಷ್ಟವಾಗುವುದರಿಂದ ಅಲೆಮಾರಿ ಸಮುದಾಯಗಳು ಈ ಜಿಲ್ಲೆಯನ್ನು ವಾಸದ ನೆಲೆಯಾಗಿ ಆಶ್ರಯಿಸಿರುವುದು ಕಂಡುಬರುತ್ತದೆ.

೧೯೫೬ರಲ್ಲಿ ಭಾರತದ ರಾಜ್ಯಗಳ ಮರುವಿಂಗಡಣೆಯಾದಾಗ ಹೈದ್ರಾಬಾದ್ ಕರ್ನಾಟಕದ ಪ್ರದೇಶದಿಂದ ಅಂದಿನ ಮೈಸೂರು ರಾಜ್ಯಗಳಿಗೆ ಸೇರಿದ ಮೂರು ಜಿಲ್ಲೆಗಳಲ್ಲಿ ಗುಲ್ಬರ್ಗಾ ಜಿಲ್ಲೆಯು ಒಂದು. ಈ ಜಿಲ್ಲೆಯಲ್ಲಿ ಯಾದಗಿರಿ ತಾಲೂಕು ಕೂಡ ಸೇರಿತ್ತು. ಆಡಳಿತದ ಹಿತದೃಷ್ಟಿಯಿಂದ ಗುಲ್ಬರ್ಗಾ ಜಿಲ್ಲೆಯನ್ನು ವಿಭಜನೆ ಮಾಡಿ ನೂತನ ಯಾದಗಿರಿ ಜಿಲ್ಲೆಯನ್ನು ಕರ್ನಾಟಕ ರಾಜ್ಯದ ಮೂವತ್ತನೇ ಜಿಲ್ಲೆಯೆಂದು ಗುಲ್ಬರ್ಗಾದಲ್ಲಿ ನಡೆದ ಅಧಿವೇಶನದಲ್ಲಿ ಮಾನ್ಯ ಮುಖ್ಯ ಮಂತ್ರಿಗಳಾದ ಬಿ.ಎಸ್. ಯಡಿಯೂರಪ್ಪನವರು ಆದೇಶ ಹೊರಡಿಸಿದರು. ಅಧಿಕೃತವಾಗಿ ಯಾದಗಿರಿ ತಾಲೂಕನ್ನು ದಿನಾಂಕ ೩೦.೧೨.೨೦೦೯ರಂದು ಜಿಲ್ಲೆಯೆಂದು ಘೋಷಿಸಲಾಯಿತು. ನಂತರ ಮಾನ್ಯ ಮುಖ್ಯಮಂತ್ರಿಗಳೇ ನೂತನ ಜಿಲ್ಲೆಯನ್ನು

ಉದ್ಘಾಟನೆ ಮಾಡಿದರು. ಈಗ ಯಾದಗಿರಿಯು ಅನೇಕ ಹೊಸ ಕಛೇರಿಗಳನ್ನು ಒಳಗೊಳ್ಳುವುದರ ಮೂಲಕ ಹೊಸ ರೂಪ ಪಡೆದುಕೊಂಡು ಕಾರ್ಯ ನಿರ್ವಹಿಸುತ್ತಿದೆ. ಯಾದಗಿರಿ ಜಿಲ್ಲೆಯು ಸಮುದ್ರ ಮಟ್ಟದಿಂದ ಸುಮಾರು ೪೦೦ರಿಂದ ೫೦೦ ಮೀಟರ್ ಉತ್ತರದಲ್ಲಿದೆ. ಯಾದಗಿರಿ ಜಿಲ್ಲೆ ಪ್ರಮುಖವಾಗಿ ಕೃಷ್ಣಾ ಮತ್ತು ಭೀಮಾ ನದಿಗಳು ಹರಿಯುತ್ತವೆ. ಸುರುಪುರ ತಾಲ್ಲೂಕಿನ ನಾರಾಯಣಪುರದಲ್ಲಿ ಕೃಷ್ಣಾ ನದಿಗೆ ಬಸವನಗರ ಅಣೆಕಟ್ಟನ್ನು ಕಟ್ಟಲಾಗಿದೆ. ಯಾದಗಿರಿ ಜಿಲ್ಲೆಯು ಪ್ರಮುಖವಾಗಿ ಅಂತರ ರಾಜ್ಯ ಕಲ್ಪಿಸುವ ರೈಲ್ವೆ ಸಂಪ್ರರ್ಕವನ್ನು ಪಡೆದಿದೆ. ಇದು ನೆರೆ ರಾಜ್ಯಗಳಾದ ಆಂಧ್ರಪ್ರದೇಶ, ಮಹಾರಾಷ್ಟ್ರ, ತಮಿಳುನಾಡಿಗೆ ಸಂಪರ್ಕ ಕಲ್ಪಿಸಿಕೊಡುತ್ತದೆ. ಯಾದಗಿರಿ ಜಿಲ್ಲೆಗೆ ಯಾದಗಿರಿ ತಾಲೂಕು, ಸುರುಪುರ ಮತ್ತು ಶಹಾಪುರ ಈ ಮೂರು ತಾಲೂಕುಗಳು ಮಾತ್ರ ಸೇರ್ಪಡೆಯಾಗಿದೆ. ಇನ್ನೂ ಮೂರು ತಾಲೂಕುಗಳು ಸೇರ್ಪಡೆಯಾಗಬೇಕಿದೆ.

ಯಾದಗಿರಿ ಪ್ರಾಚೀನ ಕಾಲದಲ್ಲಿ ಯೋಗಗಿರಿ, ಯಾತಾಗಿರಿ, ಯಾದವಗಿರಿ, ಎತ್ತಿನಗಿರಿ ಎಂದು ಪ್ರಖ್ಯಾತಿಯನ್ನು ಪಡೆದುಕೊಂಡಿದೆ. ಯಾದಗಿರಿ ಜಿಲ್ಲೆಯು ಪರಿವರ್ತನೆಗೆ ಒಳಪಡುತ್ತಿರುವ ಜಿಲ್ಲೆಯಾಗಿದ್ದು ಇದು ಅನೇಕ ವಲಸಿಗರಿಗೆ ಅಲೆಮಾರಿಗಳಿಗೆ ಆಶ್ರಯತಾಣವಾಗಿದೆ. ಇತ್ತೀಚಿನ ದಿನಗಳಲ್ಲಿ ಹಳ್ಳಿಗಳಲ್ಲಿ ವಾಸ ಮಾಡುತ್ತಿರುವ ಕುಟುಂಬಗಳು ಕೃಷಿಕ್ಷೇತ್ರವನ್ನು ತೊರೆದು ಉದ್ಯೋಗವನ್ನಾಧರಿಸಿ ವೈಭವದ ಜೀವನವನ್ನು ಸಾಗಿಸುವುದಕ್ಕೆ ಪ್ರಾರಂಭಿಸಿರುವುದರಿಂದ ಜನಸಂಖ್ಯೆ ಬೆಳೆಯುತ್ತಿದೆ.

ಯಾದಗಿರಿ ಜಿಲ್ಲೆಯ ಪೂರ್ವಭಾಗಕ್ಕೆ ನೆರೆರಾಜ್ಯ ಆಂಧ್ರಪ್ರದೇಶವನ್ನು ಹೊಂದಿದ್ದು ಪಶ್ಚಿಮಕ್ಕೆ ಬಿಜಾಪುರ ಜಿಲ್ಲೆ, ದಕ್ಷಿಣಕ್ಕೆ ರಾಯಚೂರು ಜಿಲ್ಲೆ ಮತ್ತು ಉತ್ತರಕ್ಕೆ ಗುಲ್ಬರ್ಗಾ ಜಿಲ್ಲೆಯನ್ನು ಹೊಂದಿದೆ. ಈ ಜಿಲ್ಲೆಯು ಶೈಕ್ಷಣಿಕವಾಗಿ ಪ್ರಗತಿ ಪಡೆಯುತ್ತಾ ಸಾಗುತ್ತಿದೆ. ಆದರೂ ಸಾಕಷ್ಟು ಪ್ರಮಾಣದಲ್ಲಿ ಶೈಕ್ಷಣಿಕ ವಲಯದಲ್ಲಿ ಪ್ರಗತಿ ಕಂಡುಕೊಳ್ಳಬೇಕಾದ ಅವಶ್ಯಕತೆ ಇದೆ. ಹೀಗಾಗಿ ಯಾದಗಿರಿಯನ್ನು ಶೈಕ್ಷಣಿಕ ಜಿಲ್ಲೆಯನ್ನಾಗಿ ಮಾಡಲಾಗಿದೆ.

**ರಾಯಚೂರು ಜಿಲ್ಲಾ**

ರಾಯಚೂರು ಜಿಲ್ಲೆಯನ್ನು ಅಧ್ಯಯನಕ್ಕೆ ಒಳಪಡಿಸಿಕೊಂಡ ಹಿನ್ನೆಲೆಯಲ್ಲಿ, ಇದು ರಾಜ್ಯದಲ್ಲಿರುವ ಹಿಂದುಳಿದ ಜಿಲ್ಲೆಗಳಲ್ಲಿ ಒಂದು. ಈ ಅಂಶದ ಪರಿಣಾಮವಾಗಿ ಮಾನವ ಅಭಿವೃದ್ಧಿಯಲ್ಲಿ ಈ ಜಿಲ್ಲೆಯು ಕೆಳಸ್ಥಾನದಲ್ಲಿರುವುದನ್ನ ಕಾಣಬಹುದಾಗಿದೆ.

ಹೈದರಾಬಾದ್ ಕರ್ನಾಟಕ ಪ್ರದೇಶದ ಭಾಗವಾದ ರಾಯಚೂರು ಜಿಲ್ಲೆಯಲ್ಲಿ ಅಪೌಷ್ಟಿಕತೆ ತೀವ್ರವಾಗಿರುವುದನ್ನು ಕಾಣಲಾಗಿದೆ. ಅಪೌಷ್ಟಿಕತೆಯು ಜಿಲ್ಲೆಯ ಸಾಕ್ಷರತೆ ಕನಿಷ್ಠವಾಗಿರುವಂತೆ ಆರೋಗ್ಯ ಸೌಲಭ್ಯಗಳು ಕನಿಷ್ಠವಾಗಿರುವುದನ್ನು ಕಾಣಬಹುದು. ರಾಯಚೂರು ಜಿಲ್ಲೆಯ ಪ್ರದೇಶದಲ್ಲಿ ಕೃಷಿ ಕೂಲಿ ಕಾರ್ಮಿಕರು ಹೆಚ್ಚಾಗಿದ್ದಾರೆ. ಕೃಷಿ ಕೂಲಿ ಕಾರ್ಮಿಕರ ಬುದುಕು ದುಸ್ಥಿತಿಯಲ್ಲಿದ್ದು, ಇವರಲ್ಲಿ ಸಾಕ್ಷರತೆ ಪ್ರಮಾಣ ಹಾಗೂ ಆದಾಯ ಕಡಿಮೆ ಇದ್ದು ಅಪೌಷ್ಟಿಕತೆ ಮತ್ತು ಬಡತನ ಹೆಚ್ಚಾಗಿದೆ. ಹೀಗೆ

ಜಿಲ್ಲೆಯಲ್ಲಿರುವ ಗ್ರಾಮೀಣ ಪ್ರದೇಶಗಳು ಬಡತನ, ಹಸಿವು, ಅನಕ್ಷರತೆ, ಅಪೌಷ್ಠಿಕತೆ, ವಲಸೆ ಎಂಬಿತ್ಯಾದಿ ಸವಾಲುಗಳನ್ನ ಎದರಿಸುತ್ತಿರುವುದನ್ನು ಅಧ್ಯಯನದ ಸಂದರ್ಭದಲ್ಲಿ ಕಾಣಲಾಗುತ್ತದೆ. ಇಂತಹ ಹಲವಾರು ಸಮಸ್ಯೆಗಳು ಜಿಲ್ಲೆಯ ಸಾಮಾಜಿಕ ಆರ್ಥಿಕ ಸ್ಥಿತಿಗತಿ ಎದರು ನೋಡುತ್ತಿದೆ.

ರಾಯಚೂರು ಜಿಲ್ಲೆಯು ರಾಜ್ಯದ ಈಶಾನ್ಯ ಭಾಗದಲ್ಲಿದೆ. ಉತ್ತರಕ್ಕೆ ಯಾದಗಿರಿ ಜಿಲ್ಲೆ, ವಾಯುವ್ಯಕ್ಕೆ ಬಿಜಾಪುರ, ಬಾಗಲಕೋಟೆ ಜಿಲ್ಲೆಗಳು, ಪಶ್ಚಿಮಕ್ಕೆ ಕೊಪ್ಪಳ, ದಕ್ಷಿಣಕ್ಕೆ ಬಳ್ಳಾರಿ ಪೂರ್ವಕ್ಕೆ ಆಂಧ್ರಪ್ರದೇಶದ ಮೆಹಬೂಬ್ ನಗರ ಮತ್ತು ಕರ್ನೂಲ್ ಜಿಲ್ಲೆಗಳನ್ನು ಒಳಗೊಂಡಿದೆ. ೧೪,೦೧೩ ಚ.ಕಿ.ಮೀ.ನಷ್ಟು ಭೌಗೋಳಿಕ ಪ್ರದೇಶ ಹೊಂದಿದೆ. ಇದು ವಿಸ್ತೀರ್ಣದಲ್ಲಿ ರಾಜ್ಯದ ಎರಡನೇ ದೊಡ್ಡ ಜಿಲ್ಲೆ. ಈ ಜಿಲ್ಲೆಯು ಐದು ತಾಲೂಕುಗಳನ್ನು ಒಳಗೊಂಡಿದೆ. ದೇವದುರ್ಗ, ಮಾನ್ವಿ, ಸಿಂಧನೂರು, ಲಿಂಗಸೂರು ಹಾಗೂ ರಾಯಚೂರು ತಾಲ್ಲೂಕುಗಳಾಗಿವೆ. ಜಿಲ್ಲೆಯ ಐದು ತಾಲೂಕುಗಳಲ್ಲಿರುವ ಗ್ರಾಮೀಣ ಪ್ರದೇಶಗಳು ತುಂಗಭದ್ರ ಹಾಗೂ ಕೃಷ್ಣಾ ನದಿಯ ಮೂಲಕ ನೀರಿನ ವ್ಯವಸ್ಥೆಯನ್ನು ಪಡೆಯುತ್ತಿದೆ. ಈ ಜಿಲ್ಲೆಯಾದದ್ಯಾಂತ ಕೃಷಿಯನ್ನ ಹೆಚ್ಚಿನ ಪ್ರಮಾಣದಲ್ಲಿ ಅವಲಂಬಿಸಿದ್ದು ಅದರಲ್ಲಿ ಭತ್ತವನ್ನ ಯೆಥೇಚ್ಛವಾಗಿ ಬೆಳೆಯುತ್ತಾರೆ. ರಾಯಚೂರನ್ನು ಕರ್ನಾಟಕದ 'ಭತ್ತದ ಕಣಜ' ಎನ್ನಲಾಗುತ್ತದೆ. ಭಾರತದಲ್ಲೇ ಚಿನ್ನದ ಖನಿಜ ಸಂಪತ್ತನ್ನು ಹೊಂದಿರುವ ಕೆಲವೇ ಸ್ಥಳಗಳಲ್ಲಿ ರಾಯಚೂರು ಒಂದು.

**ಭೌಗೋಳಿಕ ಹಿನ್ನೆಲೆ:** ಜಿಲ್ಲೆಯು ವರ್ಷದ ಹೆಚ್ಚಿನ ಅವಧಿಯು ಹವಾಮಾನದಿಂದ ಕೂಡಿದ್ದು, ಬೇಸಿಗೆಯಲ್ಲಿ ಉಷ್ಣಾಂಶ ಅಧಿಕವಾಗಿರುತ್ತದೆ. ಹಾಗೆಯೇ ಮಳೆ ಪ್ರಮಾಣ ತುಂಬಾ ಏರಿಳಿತದಿಂದ ಕೂಡಿದ್ದು ರಾಯಚೂರು ಬರಪೀಡಿತ ಪ್ರದೇಶವಾಗಿದೆ.

## ಬಳ್ಳಾರಿ ಜಿಲ್ಲಾ

ಬಳ್ಳಾರಿ ಜಿಲ್ಲೆಯು ನೈರುತ್ಯ ಮತ್ತು ಈಶಾನ್ಯ ದಿಕ್ಕುಗಳ ನಡುವೆ ಚಾಚಿಕೊಂಡಿದೆ. ಇದು ಸರಿಯಾಗಿ ಕರ್ನಾಟಕದ ಮಧ್ಯಭಾಗದಲ್ಲಿದೆ. ಪ್ರಸ್ತುತ ಬಳ್ಳಾರಿ ಜಿಲ್ಲೆಯ ವ್ಯಾಪ್ತಿಯನ್ನು ಗಮನಿಸಿದಾಗ ನೈರುತ್ಯ ದಿಕ್ಕಿನ ಹಗರಿಬೊಮ್ಮನಹಳ್ಳಿ ತಾಲೂಕು ಕಲ್ಲಹಳ್ಳಿ ಎಂಬ ಗ್ರಾಮದಿಂದ ಈಶಾನ್ಯ ದಿಕ್ಕಿನ ಸಿರುಗುಪ್ಪ ತಾಲೂಕಿನ ಸಲ್ಲಕುದಲೂರು ಎಂಬ ಗ್ರಾಮದವರೆಗೆ ೧೮೭ ಕಿ.ಮೀ. ಉದ್ದವಾಗಿ, ಪೂರ್ವ ಪಶ್ಚಿಮವಾಗಿ ಬಳ್ಳಾರಿ ತಾಲೂಕಿನ ಕಾರೇಕಲ್ಲು ವೀರಾಪುರದಿಂದ ಹಡಗಲಿ ತಾಲೂಕಿನ ಹಿರೇಬನ್ನಿ ಹಟ್ಟಿಯವರಿಗೆ ೧೬೧ ಕಿ.ಮೀ. ಅಗಲವಾಗಿ ಹರಡಿಕೊಂಡಿದೆ. ಈ ಜಿಲ್ಲೆಯು ಬ್ರಿಟೀಷರ ಆಳ್ವಿಕೆಯ ಕಾಲದಲ್ಲಿ ಮದ್ರಾಸ್ ಪ್ರಾಂತ್ಯದ ಬಹುದೊಡ್ಡ ಜಿಲ್ಲೆಯಾಗಿತ್ತು.

೧೯೫೩ಕ್ಕೆ ಮೊದಲು ಜಿಲ್ಲೆಯು ೧೨ ತಾಲೂಕುಗಳನ್ನು ಹೊಂದಿತ್ತು. ಅವುಗಳಲ್ಲಿ ಬಳ್ಳಾರಿ, ಸಿರುಗುಪ್ಪ, ಸಂಡೂರು, ಹೊಸಪೇಟೆ, ಹರಪನಹಳ್ಳಿ, ಹೂವಿನ ಹಡಗಲಿ, ಕೂಡ್ಲಿಗಿ, ಮಲ್ಲಾಪುರ ಮತ್ತು ಈಗಿನ ಆಂಧ್ರಪ್ರದೇಶದ ಆಲೂರು, ಆದೋನಿ, ರಾಯದುರ್ಗ ತಾಲೂಕುಗಳನ್ನು ಹೊಂದಿತ್ತು.

೧೯೫೬ರ ರಾಜ್ಯ ಪುನರ್‌ವಿಂಗಡಣೆ ಸಂದರ್ಭದಲ್ಲಿ ಪ್ರಾಂತ್ಯವಾಗಿ ಪ್ರತ್ಯೇಕಗೊಂಡಾಗ ಬಳ್ಳಾರಿ ಜಿಲ್ಲೆಗೆ ಸೇರಿದ್ದ ಆಲೂರು, ಆದೋನಿ ಮತ್ತು ರಾಯದುರ್ಗ ತಾಲೂಕುಗಳು ಆಂಧ್ರಪ್ರದೇಶ ರಾಜ್ಯಕ್ಕೆ ಸೇರಿಸಲಾಯಿತು. ಕರ್ನಾಟಕದಲ್ಲಿ ೧೯೯೭ರಲ್ಲಿ ಹೊಸ ಜಿಲ್ಲೆಗಳ ರಚನೆಯ ಸಂದರ್ಭದಲ್ಲಿ ಜಿಲ್ಲೆಗೆ ಸೇರಿದ್ದ ಮತ್ತೊಂದು ತಾಲೂಕು ಹರಪನಹಳ್ಳಿಯನ್ನು ದಾವಣಗೆರೆ ಜಿಲ್ಲೆಗೆ ಸೇರಿಸಲಾಯಿತು. ಹಾಗಾಗಿ ಪ್ರಸ್ತುತ ಬಳ್ಳಾರಿ ಜಿಲ್ಲೆಯು ೭ ತಾಲೂಕುಗಳನ್ನು ಹೊಂದಿದೆ. ಜಿಲ್ಲೆಯ ಭೌಗೋಳಿಕ ವಿಸ್ತೀರ್ಣ ೮೪೫೦ ಚ.ಕಿ.ಮೀ. ಇದ್ದು, ರಾಜ್ಯದ ವಿಸ್ತೀರ್ಣದಲ್ಲಿ ಶೇ. ೪.೪೦ರಷ್ಟು ಪಾಲನ್ನು ಹೊಂದಿದೆ. ಇದು ವಿಸ್ತೀರ್ಣದಲ್ಲಿ ರಾಜ್ಯದಲ್ಲಿ ೮ನೇ ಸ್ಥಾನದಲ್ಲಿದೆ. ಜಿಲ್ಲೆಯ ಉತ್ತರಕ್ಕೆ ಕೊಪ್ಪಳ, ದಕ್ಷಿಣಕ್ಕೆ ಚಿತ್ರದುರ್ಗ, ಪಶ್ಚಿಮಕ್ಕೆ ಧಾರವಾಡ ಜಿಲ್ಲೆ ಮತ್ತು ಪೂರ್ವಕ್ಕೆ ಆಂಧ್ರಪ್ರದೇಶ ರಾಜ್ಯವಿದೆ. ಜಿಲ್ಲೆಯ ಪೂರ್ವಭಾಗವು ಸಮತಟ್ಟಾದ ಭೂಮಿಯನ್ನು ಹೊಂದಿದ್ದು ಕೃಷಿಗೆ ಅನುಕೂಲವಾಗಿದೆ. ಜಿಲ್ಲೆಯು ಹವಾಮಾನ ದೃಷ್ಟಿಯಿಂದ ಅತಿ ಉಷ್ಣವಲಯವಾಗಿದೆ. ಮಳೆಯ ಪ್ರಮಾಣವು ತೀರಾ ಕಡಿಮೆ, ಶುಷ್ಕ ವಾತಾವರಣದಿಂದ ಕೂಡಿದ ಪೂರ್ವಭಾಗದಲ್ಲಿ ಹೆಚ್ಚು ಅರಣ್ಯ ಪ್ರದೇಶವಿದೆ. ಈ ಭಾಗದಲ್ಲಿ ತುಂಗಭದ್ರಾ ನದಿ ಇರುವುದರಿಂದ ಪೂರ್ವ ತಾಲೂಕುಗಳಿಗೆ ಪ್ರಮುಖ ನೀರಾವರಿಯ ಮೂಲವಾಗಿದೆ. ಈ ನದಿಯು ಜಿಲ್ಲೆಯಲ್ಲಿ ೩೨೦ ಕಿ.ಮೀ.ನಷ್ಟು ದೂರ ಹರಿಯುತ್ತದೆ. ನೀರಾವರಿ ಕೃಷಿ ಅಭಿವೃದ್ಧಿಗೆ ಈ ನದಿಯು ಬೆನ್ನೆಲುಬಾಗಿದೆ. ಈ ನದಿಯನ್ನು ಬಿಟ್ಟರೆ ಜಿಲ್ಲೆಯ ಪಶ್ಚಿಮ ಭಾಗದಲ್ಲಿ ಕೆಲವು ಸಣ್ಣ ಪುಟ್ಟ ಜಲಾಶಯ, ಕೆರೆ ಮತ್ತು ಕಟ್ಟೆಗಳಿವೆ.

**ಕೊಪ್ಪಳ ಜಿಲ್ಲಾ**

ಬಳ್ಳಾರಿ ಮತ್ತು ರಾಯಚೂರು ಜಿಲ್ಲೆಯ ಜೊತೆಗೆ ಕೊಪ್ಪಳ ಜಿಲ್ಲೆಯನ್ನು ಸಹ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿದ್ದು, ಇದು ರಾಜ್ಯದ ಹಿಂದುಳಿದ ಜಿಲ್ಲೆಗಳಲ್ಲಿ ಒಂದಾಗಿದೆ.

ಕೊಪ್ಪಳವು ಹೈದರಾಬಾದ್ ಕರ್ನಾಟಕದ ಭಾಗವಾಗಿದೆ. ಭಾರತ ದೇಶವು ೧೯೪೭ರಲ್ಲಿ ಸ್ವಾತಂತ್ರ್ಯ ಹೊಂದಿದರೂ ಕೊಪ್ಪಳ ಅಥವಾ ಹೈದರಾಬಾದ್ ಕರ್ನಾಟಕ ಇನ್ನೂ ನಿಜಾಮನ ಅಧೀನದಲ್ಲಿತ್ತು. ೧೮ ಸೆಪ್ಟಂಬರ್ ೧೯೪೮ರಲ್ಲಿ ಈ ಭಾಗವು ಸ್ವಾತಂತ್ರ್ಯವನ್ನು ಹೊಂದಿತು. ಕೊಪ್ಪಳವು ಜಿಲ್ಲೆಯಾಗುವುದಕ್ಕಿಂತ ಪೂರ್ವದಲ್ಲಿ ರಾಯಚೂರು ಜಿಲ್ಲೆಯ ತಾಲೂಕಾಗಿತ್ತು. ಜೆ.ಎಚ್ ಪಟೇಲ್ ಸರ್ಕಾರವು ಕೊಪ್ಪಳವನ್ನು ೧೯೯೭ರಲ್ಲಿ ಜಿಲ್ಲಾ ಕೇಂದ್ರವೆಂದು ಘೋಷಿಸಿತು. ೧.೪.೧೯೯೮ರಂದು ಕೊಪ್ಪಳವು ಕರ್ನಾಟಕದ ಒಂದು ಸ್ವತಂತ್ರ ಹೊಸ ಜಿಲ್ಲೆಯಾಗಿ ರಚನೆಗೊಂಡಿತು.

ಕೊಪ್ಪಳವು ಪುರಾಣ ಪ್ರಸಿದ್ಧ ಸ್ಥಳವೂ ಹೌದು ಮತ್ತು ಇತಿಹಾಸ ಪ್ರಸಿದ್ಧ ಸ್ಥಳವೂ ಹೌದು. ಕೊಪ್ಪಳವು ಪುರಾಣ ಪ್ರಸಿದ್ಧ ಸ್ಥಳವೆನ್ನುವುದಕ್ಕಿಂತ ಅದು ಇತಿಹಾಸ ಪ್ರಸಿದ್ಧ ಸ್ಥಳವೆಂದು ಹೇಳುವುದೇ ಹೆಚ್ಚು ಸೂಕ್ತ. ಈ ಪ್ರದೇಶದ ಚರಿತ್ರೆಯನ್ನು ಕ್ರಿಸ್ತ ಪೂರ್ವ ಕಾಲಕ್ಕೆ ಒಯ್ಯಬಹುದಾಗಿದೆ, ಭಾರತದ ಪ್ರಸಿದ್ಧ ಚಕ್ರವರ್ತಿ ಅಶೋಕನಿಗೆ (ಕ್ರಿ.ಪೂ.೨೭೩–೨೩೬) ಸಂಬಂಧಿಸಿದ ಎರಡು ಅಮೂಲ್ಯ ಶಾಸನಗಳು

ಕೊಪ್ಪಳದಲ್ಲಿ ಸಿಕ್ಕಿವೆ. ಈ ಶಾಸನಗಳು ಐತಿಹಾಸಿಕವಾಗಿ ತುಂಬಾ ಮಹತ್ವ ಪಡೆದಿವೆ. ಆ ಕಾಲದಲ್ಲಿ ಕೊಪ್ಪಳವು ಪಡೆದಿದ್ದ ಪ್ರಸಿದ್ಧಿ ಇದರಿಂದ ತಿಳಿದುಬರುತ್ತದೆ. ಈ ಪ್ರದೇಶದಲ್ಲಿ ಆಳ್ವಿಕೆ ನಡೆಸಿದ ಪ್ರಥಮ ಚಕ್ರವರ್ತಿ ಅಶೋಕ ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. ಮೌರ್ಯರು, ಶಾತವಾಹನರು, ಕದಂಬರು, ಚಾಲುಕ್ಯರು, ಗಂಗರು, ರಾಷ್ಟ್ರಕೂಟರು, ಹೊಯ್ಸಳರು, ವಿಜಯನಗರ ಅರಸರು ಮುಂತಾದ ಅರಸುಮನೆತನ-ಚಕ್ರಾಧಿಪತ್ಯಗಳೊಂದಿಗೆ ಈ ಪ್ರದೇಶವು ಒಂದಲ್ಲ ಒಂದು ಬಗೆಯ ಸಂಬಂಧ-ಸಂಪರ್ಕ ಪಡೆದಿದ್ದು ಚರಿತ್ರೆಯಿಂದ ತಿಳಿದುಬರುತ್ತದೆ. ಅನೇಕ ಅರಸುಮನೆತನಗಳಿಗೆ, ಚಕ್ರಾಧಿಪತಿಗಳಿಗೆ ಸೇರಿದ ಶಾಸನಗಳಲ್ಲಿ ಸಾಹಿತ್ಯ ಕೃತಿಗಳಲ್ಲಿ, ತಾಮ್ರ ಪತ್ರಗಳಲ್ಲಿ ಕೊಪ್ಪಳದ ಉಲ್ಲೇಖ ಸಿಗುತ್ತದೆ.(ಚಂದ್ರಶೇಖರ ಟಿ.ಆರ್, ೧೯೯೯)

ಕೊಪ್ಪಳ ಜಿಲ್ಲೆಯು ರಾಜ್ಯದ ನೈರುತ್ಯ ಭಾಗದಲ್ಲಿದೆ. ಪೂರ್ವಕ್ಕೆ ಬಳ್ಳಾರಿ ಜಿಲ್ಲೆ, ಉತ್ತರಕ್ಕೆ ಕುಷ್ಠಗಿ, ಬಾಗಲಕೋಟೆ ಜಿಲ್ಲೆ, ಪಶ್ಚಿಮಕ್ಕೆ ಗದಗ, ದಕ್ಷಿಣಕ್ಕೆ ದಾವಣಗೆರೆ ಜಿಲ್ಲೆಗಳನ್ನು ಒಳಗೊಂಡಿದೆ. ೫೫೭೦ ಚ.ಕಿ.ಮೀ.ನಷ್ಟು ಭೌಗೋಳಿಕ ಪ್ರದೇಶ ಹೊಂದಿದೆ. ಇದು ವಿಸ್ತೀರ್ಣದಲ್ಲಿ ರಾಜ್ಯದ ಆರನೇ ದೊಡ್ಡ ಜಿಲ್ಲೆಯಾಗಿದೆ. ಈ ಜಿಲ್ಲೆಯು ನಾಲ್ಕು ತಾಲ್ಲೂಕುಗಳನ್ನು ಒಳಗೊಂಡಿದೆ. ಗಂಗಾವತಿ, ಕೊಪ್ಪಳ, ಕುಷ್ಠಗಿ, ಹಾಗೂ ಯಲಬುರ್ಗಾ ತಾಲ್ಲೂಕುಗಳಾಗಿವೆ. ಜಿಲ್ಲೆಯ ನಾಲ್ಕು ತಾಲೂಕುಗಳಲ್ಲಿರುವ ಗ್ರಾಮೀಣ ಪ್ರದೇಶಗಳು ಕೊಳವೆ ಬಾವಿಗಳ ಮೂಲಕ ನೀರಿನ ವ್ಯವಸ್ಥೆಯನ್ನು ಪಡೆಯುತ್ತಿವೆ. ಈ ಜಿಲ್ಲೆಯಾದ್ಯಂತ ಕೃಷಿಯನ್ನು ತಕ್ಕಮಟ್ಟಿಗೆ ಅವಲಂಬಿಸಿದ್ದು ಅದರಲ್ಲಿ ತೋಟಗಾರಿಕೆ ಬೆಳೆಗಳನ್ನು ಮತ್ತು ಕೃಷಿ ಬೆಳೆಗಳನ್ನು ಬೆಳೆಯುತ್ತಾರೆ. ಕೊಪ್ಪಳವನ್ನು ಕರ್ನಾಟಕದ ಧಾರ್ಮಿಕ ನೆಲೆಯನ್ನು ಹೊಂದಿರುವ ಒಂದು ಪುಣ್ಯ ಕ್ಷೇತ್ರ ಎಂದು ಕರೆಯಲಾಗುತ್ತದೆ. ಇಂತಹ ವಿಶೇಷತೆಗಳನ್ನು ಹೊಂದಿರುವ ಜಿಲ್ಲೆಯಲ್ಲಿ ನೀರಾವರಿ ಪ್ರದೇಶಗಳು ತಕ್ಕಮಟ್ಟಿಗೆ ಇದ್ದು, ನದಿ, ಅಣೆಕಟ್ಟು, ಕಾಲುವೆಗಳಲ್ಲಿನ ಒಳಹರಿವು, ಕುಡಿಯುವ ಮತ್ತು ನೀರಾವರಿಯ ಸೌಲಭ್ಯವನ್ನು ಒದಗಿಸಿದೆ. ಈ ಜಿಲ್ಲೆಯ ದಕ್ಷಿಣ ಗಡಿಯಲ್ಲಿ ಹರಿಯುವ ತುಂಗಭದ್ರಾ ನದಿ ಇಲ್ಲಿನ ಜೀವನದಿಯಾಗಿದೆ. ತುಂಗಭದ್ರಾ ನದಿಗೆ ಕಟ್ಟಿದ ಅಣೆಕಟ್ಟು ಮತ್ತು ಅಣೆಕಟ್ಟಿನ ಎಡದಂಡೆ ಕಾಲುವೆ ಕೊಪ್ಪಳ ಹಾಗೂ ಗಂಗಾವತಿ ತಾಲೂಕುಗಳಿಗೆ ವರದಾನವಾಗಿದೆ.

**ಭೌಗೋಳಿಕ ಹಿನ್ನೆಲೆ** ಒಂದು ಪ್ರದೇಶದ ಗುಣಲಕ್ಷಣಗಳನ್ನು ಅರಿಯಬೇಕಾದರೆ ಅಲ್ಲಿನ ಭೌಗೋಳಿಕ ಪರಿಸರವನ್ನು ಗಮನಿಸುವುದು ಅತಿ ಮುಖ್ಯವಾಗುತ್ತದೆ. ಈ ಭೌಗೋಳಿಕ ಅಂಶಗಳ ಮೇಲೆಯೇ ಅಲ್ಲಿಯ ಜನರ ಆಗುಹೋಗುಗಳು ಅವಲಂಬಿತವಾಗಿರುತ್ತವೆ. ಇಲ್ಲಿ ಭೌಗೋಳಿಕ ಅಂಶಗಳೆಂದರೆ ನೈಸರ್ಗಿಕ ಸಂಪತ್ತು, ಹವಾಗುಣ, ಪ್ರಾದೇಶಿಕ ಮೇರೆಗಳು ಅಲ್ಲಿನ ವೃತ್ತಿ, ಜನಸಾಂದ್ರತೆ, ಸಾರಿಗೆ, ಸಂಪರ್ಕ, ಔದ್ಯೋಗಿಕತೆ ಮೊದಲಾದವುಗಳು. ಇವು ಈ ಪ್ರದೇಶದ ಜನರ ಸಂಸ್ಕೃತಿ, ಭಾಷೆ ಮತ್ತು ಜನರ ಜೀವನದ ಮೇಲೆ ಪ್ರಭಾವ ಬೀರುತ್ತವೆ. ಕರ್ನಾಟಕದ ಒಟ್ಟು ಭೌಗೋಳಿಕ ವಿಸ್ತೀರ್ಣತೆಯಲ್ಲಿ ಕೊಪ್ಪಳ ಜಿಲ್ಲೆಯ ವಿಸ್ತೀರ್ಣವು ಶೇ. ೨.೯೦ರಷ್ಟಿದೆ, ರಾಜ್ಯದ ಜನಸಂಖ್ಯೆಯಲ್ಲಿ ಕೊಪ್ಪಳ ಜಿಲ್ಲೆಯ

ಪಾಲು ಶೇ. ೨.೧೩ಿರಷ್ಟಿದೆ, ಭೌಗೋಳಿಕ ವಿಸ್ತೀರ್ಣದಲ್ಲಿ ಕೊಪ್ಪಳವು ರಾಜ್ಯದ ೧೮ನೆಯ ಸ್ಥಾನದಲ್ಲಿದೆ. ಜನಸಂಖ್ಯೆಯ ದೃಷ್ಟಿಯಿಂದ ಕೊಪ್ಪಳ ಜಿಲ್ಲೆಯು ರಾಜ್ಯದಲ್ಲಿ ನಾಲ್ಕನೆಯ ಪುಟ್ಟ ಜಿಲ್ಲೆಯಾಗಿದೆ. ಕ್ರಮವಾಗಿ ಬೆಂಗಳೂರು ನಗರ, ಉಡುಪಿ, ಕೊಡಗುಗಳ ನಂತರ ಕೊಪ್ಪಳ ಜಿಲ್ಲೆ ಬರುತ್ತದೆ.

ಮೇಲಿನ ಅಂಶವನ್ನು ಪರಿಗಣಿಸುತ್ತಾ ಈ ಜಿಲ್ಲೆಯಲ್ಲಿಯೂ ಸಹ ವರ್ಷದ ಹೆಚ್ಚಿನ ಅವಧಿಯು ಹವಾಮಾನದಿಂದ ಕೂಡಿದ್ದು, ಬೇಸಿಗೆಯಲ್ಲಿ ತಕ್ಕಮಟ್ಟಿನ ಉಷ್ಣಾಂಶ ಹೊಂದಿರುವುದನ್ನು ಕಾಣಲಾಗಿದೆ. ಹಾಗೆಯೇ ಮಳೆ ಪ್ರಮಾಣ ಹೆಚ್ಚಾಗಿ ಆಗುತ್ತಿದ್ದರೂ ಬೇಸಿಗೆ ಕಾಲದಲ್ಲಿ ಬರದ ಪರಿಣಾಮವನ್ನು ಎದರಿಸುವಂತಹ ಸಂದರ್ಭವನ್ನು ಕಾಣಲಾಗಿದೆ.

## ಅಧ್ಯಾಯ ಮೂರು

# ಸಂಗೀತದ ಹುಟ್ಟು ಮತ್ತು ಬೆಳವಣಿಗೆ

### ಭಾರತೀಯ ಸಂಗೀತದ ಇತಿಹಾಸ

ಸಂಗೀತದ ಉಗಮ ಮತ್ತು ವಿಕಾಸ ಹೇಗಾಯಿತು, ಯಾರಿಂದಾಯಿತು ಎಂದು ಪರಿಪೂರ್ಣವಾಗಿ ಹೇಳಲು ಸಾಧ್ಯವಿಲ್ಲ. ಏಕೆಂದರೆ ಸಂಗೀತದ ಹುಟ್ಟಿನ ಬಗೆಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ.

ಶ್ರೀ ಟಿ.ವಿ.ಸುಬ್ಬರಾವ್ ಇವರು ತಮ್ಮ 'ಸ್ಟಡೀಸ್ ಇನ್ ಇಂಡಿಯನ್ ಮ್ಯೂಸಿಕ್' ಎಂಬ ಪುಸ್ತಕದಲ್ಲಿ ಆದಿಮಾನವರ ಮನೋಭಾವಗಳು ನೈಸರ್ಗಿಕ, ಸುಖಪೂರ್ಣ ಹಾಗೂ ದುಃಖ ಪೂರ್ಣ ಅನುಭವದ ಅನುಸಾರವಾಗಿ ಬದಲಾಯಿಸುತ್ತಿದ್ದವು. ಅರಣ್ಯದಲ್ಲಿ ಆದಿಮಾನವನಿಗೆ ಸಂತೋಷವಾದಾಗ ಉಚ್ಚಧ್ವನಿಯಲ್ಲಿ ಕೂಗುತ್ತಿದ್ದನು. ದುಃಖವಾದಾಗ ಅವನ 'ಆಕ್ರೋಶದ' ಧ್ವನಿ ನೀಚವಾಗುತ್ತಿತ್ತು. ಪಶು-ಪಕ್ಷಿಗಳ ರೋಧನೆ, ದುಂಬಿಯ ಝೇಂಕಾರ, ಧನುಸ್ಸಿನ ಠೇಂಕಾರ, ಬಿದಿರು ವನದಲ್ಲಿ ಗಾಳಿಯ ಚಲನದಿಂದ ಉತ್ಪತ್ತಿಯಾಗುವ ಧ್ವನಿ ಇತ್ಯಾದಿಗಳಲ್ಲಿಯೂ ಪ್ರಾಚೀನ ಸಂಗೀತ ಮೂಲವಡಗಿದೆ" (ನಾಗಪುಷ್ಪಲತಾ, ಕರ್ನಾಟಕ ರಂಗ ಕಲೆಗಳ ಕೋಶ, ಪು. ೩೧) ಎಂದು ಉಲ್ಲೇಖಿಸಲಾಗಿದೆ.

ಸಂಗೀತ ಕಲೆಯು ಅತ್ಯಂತ ಪುರಾತನವಾದದ್ದು ಅದರ ಪ್ರಾರಂಭ ಎಲ್ಲಿಂದ ಹೇಗೆ, ಯಾವಾಗ ಆಯಿತು ಎಂದು ಹೇಳುವುದು ತುಂಬ ಕಷ್ಟ ಈ ಜಗತ್ತು ಸೃಷ್ಟಿಯಾದಾಗಲೇ, ಸಂಗೀತದ ಉಗಮವಾಯಿತು ಎನ್ನಬಹುದು.

"Music is born of nature and has been essentially an integral part of life from the very beginning of the creation and developed with the growth of civilization"(ನಾಗಮಷ್ಪಲತಾ, ಕರ್ನಾಟಕ ರಂಗ ಕಲೆಗಳ ಕೋಶ, ಪು. ೩೧)

ಮಾನವನಿಗೂ ಮೊದಲು ಸಂಗೀತವಿದ್ದಿತ್ತೆಂಬ ಹೇಳಿಕೆಯನ್ನು ಗಮನಿಸಿದರೆ ವೇದ್ಯ ವಾಗುತ್ತದೆ. ನಿಸರ್ಗಕ್ಕೂ, ಕಲೆಗೂ ಅವಿನಾಭಾವ ಸಂಬಂಧವಿದೆ. ನಿಸರ್ಗ ಸೌಂದರ್ಯ, ಸ್ವರೂಪಗಳೆಲ್ಲವನ್ನೂ ಕಲೆಯು ತನ್ನಲ್ಲಿ ಅಡಗಿಸಿಕೊಂಡಿದೆ. ನಿಸರ್ಗದ ಸಹಜ ಕ್ರಿಯೆಗಳಾದ ಹರಿಯುವ ನೀರು, ಪಕ್ಷಿಗಳ ಕೂಗು ಮುಂತಾದವುಗಳನ್ನು ಅನುಕರಿಸುವುದರ ಮೂಲಕವಾಗಿ ಮಾನವ ಹಾಡಲು ಕಲಿತನು. ಪ್ರಪ್ರಥಮ ಬಾರಿಗೆ ಬರಿಯ ಧ್ವನಿಯ ಮೂಲಕ ತನ್ನ ಭಾವನೆಗಳನ್ನು ವ್ಯಕ್ತಪಡಿಸುತ್ತಿದ್ದು, ನಂತರ ನಾದದ ಮೂಲಕ ವ್ಯಕ್ತಪಡಿಸಲಾರಂಭಿಸಿದನು.

ಇದೇ ತೆರನಾಗಿ ಮಾನವ ಧ್ವನಿ, ಭಾಷೆ, ಶಬ್ದಗಳ ಮೂಲಕವಾಗಿ ಹಾಡಲು ಕಲಿತದ್ದು, ಮುಂದೆ ಕಾಲ ಕಳೆದಂತೆಲ್ಲಾ ಸಂಗೀತವು ಮಾನವನ ಜೀವನದ ಪ್ರಮುಖ ಭಾಗವಾಗಿ ಉಳಿಯಿತು. "ಆದಿಮಾನವ ಸಂಸ್ಕೃತಿಯ ಕಾಲದಿಂದಲೂ ಸಂಗೀತವು ಹಾಡು ಮತ್ತು ವಾದ್ಯಗಳ ಮೂಲಕ ಅಭಿವ್ಯಕ್ತಗೊಳ್ಳುತ್ತಿತ್ತೆಂಬುದು ತಿಳಿದುಬರುತ್ತದೆ. ಆದಿ ಮಾನವರ ಗುಹೆಗಳಲ್ಲಿದ್ದ ಶಿಲಾಯುಧಗಳ ಜೊತೆಗೆ ಹಿಮಸಾರಂಗದ ಕೊಂಬಿನಿಂದ ಮಾಡಿದ ವಾದ್ಯವು ದೊರೆತಿದೆ. ಇದು ಕೊಳಲಿನಾಕಾರದಂತಿದ್ದು, ಈ ವಾದ್ಯದ ಜೊತೆಯಲ್ಲಿ ೫೦೦೦ ವರ್ಷಗಳ ಹಿಂದಿನದೆಂದು ಹೇಳಲಾಗಿರುವ ಕೆಲವು ಸಂಗೀತ ವಾದ್ಯಗಳು ದೊರೆತಿವೆ. ಇದರೊಂದಿಗೆ ಒಂದು ಚಿತ್ರವು ದೊರೆತಿವೆ. ಇದರಲ್ಲಿ ೭ ಜನ ಸಂಗೀತಗಾರರ ಚಿತ್ರಗಳಿವೆ. ಆ ಚಿತ್ರದಲ್ಲಿ ಮೂರು ಜನ ಕೊಳಲಿನಂತಹ ವಾದ್ಯವನ್ನು ಇಬ್ಬರು ತಂತಿವಾದ್ಯವನ್ನು ನುಡಿಸುತ್ತಿದ್ದಾರೆ. ಇನ್ನುಳಿದ ಈರ್ವರು ಇವರಿಗೆ ಸಹಾಯಕರಾಗಿ ಕೈಯಿಂದ ತಾಳವನ್ನು ಹಾಕುತ್ತಾ ಕುಳಿತಿದ್ದಾರೆ. ಈ ಚಿತ್ರವು ಈಜಿಪ್ಟಿನಲ್ಲಿ ದೊರೆತಿದೆ"(ಪಾಠಕ ಬಿ.ಡಿ., ಭಾರತೀಯ ಸಂಗೀತ ಚರಿತ್ರೆ, ಪು. ೫).

"ಈಜಿಪ್ಟಿನ ಸಂಸ್ಕೃತಿಯೇ ಎಲ್ಲ ಸಂಸ್ಕೃತಿಗಳಿಗೆ ಮೂಲವೆಂದೂ, ವಿಶ್ವಕ್ಕೆ ಈಜಿಪ್ಟಿನ ಸಂಸ್ಕೃತಿಯೇ ಸಂಗೀತ ಕೊಡುಗೆಯನ್ನೆತ್ತಿದೆಯೆಂಬ ಅಭಿಪ್ರಾಯ ಸಹ ಕಂಡುಬರುತ್ತದೆ. ಕ್ರಿ.ಪೂ. ೨೦೦೦ ವರ್ಷಗಳಷ್ಟು ಪ್ರಾಚೀನವಾದ ಈಜಿಪ್ಟ್ ಸಂಸ್ಕೃತಿಯೇ ವಿಶ್ವಕ್ಕೆ ಸಂಗೀತದ ಕೊಡುಗೆಯನ್ನು ಕೊಟ್ಟಿದೆ ಎಂಬುದು ಈಜಿಪ್ಪಿಯನ್ನರ ಅಭಿಪ್ರಾಯವಾಗಿದೆ. ಆದರೆ ಈ ಸಂಸ್ಕೃತಿಗಿಂತ ಮೊದಲೇ ಭಾರತದಲ್ಲಿಯ ಸಿಂಧೂ ನದಿ ಸಂಸ್ಕೃತಿಯಲ್ಲಿ ಸಂಗೀತದ ಆವಿಷ್ಕಾರವಾಗಿತ್ತೆಂಬುದು ಗಮನಾರ್ಹ ಅಂಶವಾಗಿದೆ"(ನಾಗಪುಷ್ಪಲತಾ, ಕರ್ನಾಟಕ ರಂಗ ಕಲೆಗಳ ಕೋಶ, ಪು. ೩೫).

ಭಾರತೀಯ ಪುರಾಣಗಳ ಪ್ರಕಾರ ಸೃಷ್ಟಿಕರ್ತ ಬ್ರಹ್ಮ ಈ ನಾದಮಯ ವಿಶ್ವವನ್ನು ಸೃಷ್ಟಿಸಿದನಂತೆ. ಅದೇ ಕಾರಣಕ್ಕಾಗಿ ಇವನಿಗೆ ನಾದಬ್ರಹ್ಮ ಎಂದು ಕರೆಯಲಾಗಿದೆ. "ಎಲ್ಲರಿಗಿಂತಲೂ ಮೊದಲು ಆದಿವಿಷ್ಣು ತನ್ನ ಮಗನಾದ ಬ್ರಹ್ಮನಿಗೆ ಸಂಗೀತವಿದ್ಯೆಯನ್ನು ಕಲಿಸಿಕೊಟ್ಟನು. ನಂತರ ತಂದೆಯಿಂದ ಪಡೆದ ಸಂಗೀತ ವಿದ್ಯೆಯನ್ನು ಬ್ರಹ್ಮದೇವನು ಶಿವನಿಗೆ ವೀಣಾವಾಣಿ ಪುಸ್ತಕ ಪಾಣಿ ಸರಸ್ವತಿಗೂ ಕಲಿಸಿದನು. ತದನಂತರ ಸರಸ್ವತಿಯೂ ನಾರದನಿಗೂ ಈ ಸಂಗೀತ ವಿದ್ಯೆಯನ್ನು ಕಲಿಸಿದಳು. ನಾರದ ಮುನಿಯಿಂದ ತುಂಬುರರು ಗಂಧರ್ವರು, ಯಕ್ಷ, ಕಿನ್ನರರು ಹಾಗೂ ಅಪ್ಸರೆಯರಿಗೆ ಈ ವಿದ್ಯೆ ಲಭಿಸಿತು. ಸ್ವರ್ಗಲೋಕದಿಂದ ಭರತ ಹನುಮಾನ, ನಾರದ ಮುಂತಾದ ಋಷಿಗಳು ಈ ಕಲೆಯ ಪ್ರಚಾರ ಮಾಡುವ ಸಲುವಾಗಿ ಮತ್ತು ವಿಸ್ತಾರ ಮಾಡುವ ಸಲುವಾಗಿ ಭೂಮಿಯ ಮೇಲೆ ಅವತರಿಸಿದರೆಂದು ಹೇಳಲಾಗುತ್ತದೆ.(ಪಾಠಕ ಬಿ.ಡಿ., ಭಾರತೀಯ ಸಂಗೀತ ಚರಿತ್ರೆ, ಪು. ೯).

"ಕೆಲವು ವಿದ್ವಾಂಸರ ಅಭಿಪ್ರಾಯದಂತೆ ಸಂಗೀತದ ಹುಟ್ಟು 'ಓಂ' ನಾದದ ಗರ್ಭದಿಂದಾಯಿತು. 'ಓಂ' ಎನ್ನುವ ಈ ಶಬ್ದ ಅ, ಉ, ಮ ಈ ಮೂರು ಅಕ್ಷರಗಳಿಂದ ಕೂಡಿದೆ. ಈ ಮೂರು ಅಕ್ಷರಗಳು ಮೂರು ಶಕ್ತಿಗಳ ದ್ಯೋತಕವಾಗಿದೆ. 'ಅ' ಉತ್ಪತ್ತಿ ಶಕ್ತಿ ದ್ಯೋತಕವಾದ ಸೃಷ್ಟಿಕರ್ತನಾದ ಬ್ರಹ್ಮನನ್ನು, 'ಉ' ಧಾರಣ ಪಾಲನ ರಕ್ಷಣ ಅಂದರೆ ಸ್ಥಿತಿ ಶಕ್ತಿಯ ಪ್ರತೀಕವಾದ ವಿಷ್ಣುವನ್ನು, 'ಮ' ಲಯಶಕ್ತಿಯ ದ್ಯೋತಕನಾದ ಶಿವನನ್ನು ಸೂಚಿಸುತ್ತದೆ. ಈ ಮೂರು ಶಕ್ತಿಗಳ ಸಂಗಮದಿಂದಲೇ ತ್ರಿಮೂರ್ತಿ ಸ್ವರೂಪ ಪರಮೇಶ್ವರನಾಗಿದ್ದಾನೆ. 'ಓಂ' ವೇದದ ಬೀಜಮಂತ್ರವಾಗಿದೆ.

ಷಡ್ಜಾದಿ ಸಪ್ತಸ್ವರಗಳು ಏಕಮಾತ್ರ ಓಂಕಾರ ಸ್ವರದ ಅಂತರ ವಿಭಾಗಗಳಿವೆ.

ಸಂಗೀತದಲ್ಲಿ ಎರಡು ಪ್ರಕಾರಗಳು

೧. ಜಾನಪದ ಸಂಗೀತ

೨. ಶಾಸ್ತ್ರೀಯ ಸಂಗೀತ

**೧. ಜಾನಪದ ಸಂಗೀತ**

ಜನರು ತಮ್ಮ ತಮ್ಮ ಸಂತೋಷಕ್ಕಾಗಿ ಮತ್ತು ತಮ್ಮ ಮನೋ ಆನಂದಕ್ಕಾಗಿ ತಾವೇ ಮಾಡಿಕೊಂಡ ಯಾವುದೇ ರೀತಿಯ ಶಾಸ್ತ್ರೀಯ ಕಟ್ಟುಪಾಡುಗಳಿಗೆ ಒಳಪಡದೆ ಸಾಮಾನ್ಯ ಜನರಿಗೂ ಕೂಡ ಹಾಡಲ್ಪಡುವಂತಹ ಸಂಗೀತವೇ ಜಾನಪದ ಸಂಗೀತ.

ಮನುಷ್ಯ ತನ್ನ ದಿನನಿತ್ಯದ ಜೀವನದಲ್ಲಿ ಸುಖ-ದುಃಖ ಇನ್ನು ಹಲವಾರು ಭಾವನೆಗಳನ್ನು ಅನುಭವಿಸಲು ಬಹಳಷ್ಟು ಸಂಗೀತವನ್ನೆ ಬಳಸಿಕೊಳ್ಳುತ್ತಾರೆ. ಇದು ಅವನ ಸಹಜ ಮನೋಪ್ರವೃತ್ತಿಯಾಗಿದೆ. ಈ ಸಂಗೀತ ಸಕಲರ ಮೇಲು ಪರಿಣಾಮ ಬೀಳುವಂತಹ ಒಂದು ಮಾಧ್ಯಮವಾಗಿದೆ.

ಸುಮಾರು ವರ್ಷಗಳಿಂದ ಕರ್ಣ ಪರಂಪರೆಯೇ ಮುಖ್ಯವಾಗಿ ತಲೆಮಾರಿನಿಂದ ತಲೆಮಾರಿಗೆ, ಒಬ್ಬರಿಂದ ಮತ್ತೊಬ್ಬರಿಗೆ ಪಾಠಾಂತರವಾಗಿ ಉಳಿದುಬಂದಿರುವ ಸಂಗೀತವೇ ಈ ಜಾನಪದ ಸಂಗೀತ. ಈ ಜಾನಪದ ಹಾಡುಗಳು ರಚನೆಕಾರರ ಹೆಸರುಗಳು ಕಂಡುಬರುವುದಿಲ್ಲ.

ಜನಪದ ಸಂಗೀತದಲ್ಲಿ ಸ್ವರ ಸ್ಥಾನಗಳು, ಪ್ರಭೇದಗಳಾಗಲಿ, ರಾಗದ ಚೌಕಟ್ಟಾಗಲಿ, ತಾಳ-ಲಯದ ವಿನ್ಯಾಸವಾಗಲಿ ಕಂಡುಬರದಿದ್ದರೂ ಈ ಜಾನಪದ ಸಂಗೀತ ಶಾಸ್ತ್ರೀಯ ಸಂಗೀತದಷ್ಟೇ ಕೇಳಲಿಕ್ಕೆ ಬಹಳಷ್ಟು ಹಿತಕರವಾಗಿರುತ್ತದೆ.

ಯಾವುದೇ ಒಂದು ಪ್ರದೇಶದ ಜಾನಪದ ಸಂಗೀತವು ಆಯಾ ಪ್ರದೇಶದ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತದೆ. ಬಾಯಿಂದ ಬಾಯಿಗೆ ಹರಡುವುದರ ಮುಖಾಂತರ ಹೆಚ್ಚು ಜೀವಂತವಾಗಿರುವ ಕಲೆ ಎಂದರೆ ಅದು ಜಾನಪದ ಸಂಗೀತ. "ಶಾಸ್ತ್ರದ ಆಸರೆ, ಪೋಷಣೆಗಳಿಲ್ಲದೆ ಪ್ರಬುದ್ಧರ ಕಣ್ಣಿಗೆ ಬಿದ್ದು ಅವರ ಮಾರ್ಗದರ್ಶನ ಪಡೆಯದೆಯೇ ಜನಪದ ಸಂಗೀತ ಒಂದು ರೀತಿಯ ತಬ್ಬಲಿಯಾಗಿ ಬೆಳೆಯಿತು"(ನಾಗಪುಷ್ಪಲತಾ ಕೆ., ಕರ್ನಾಟಕ ಜನಪದ ರಂಗ ಕಲೆಗಳ ಕೋಶ, ಪು.೩೯).

ಮಾಧ್ಯಮವಾಗಿ ಕೆಲಸ ಮಾಡುವಂತಹ ಸಂಗೀತ ಅದು ಜನಪದ ಸಂಗೀತ ಎಂದು ತಿಳಿದುಬರುತ್ತದೆ. ಡಾ. ಶಿವರಾಮ ಕಾರಂತರು ಜನಪದ ಗೀತೆಗಳ ಕುರಿತು ಹೇಳುವಾಗ "ಸಂಗೀತ ಮತ್ತು ಸಾಹಿತ್ಯಗಳೆರಡನ್ನು ಕೂಡಿಯೇ ಹೊಮ್ಮಿದ ಶರೀರ ಅವುಗಳದ್ದು"(ಯಕ್ಷಗಾನ, ಪು.೧೫) ಎಂದಿದ್ದಾರೆ. ಸಂಗೀತ ಮತ್ತು ಸಾಹಿತ್ಯಗಳು ಒಂದಕ್ಕೊಂದು ಪೂರಕವಾಗಿ ಅನೇಕ ಶತಮಾನಗಳಿಂದ ಸೇರಿ ಬೆಳೆದುಬಂದಿವೆ ಎಂಬುದು ಸ್ಪಷ್ಟವಾಗಿ ತಿಳಿದುಬರುತ್ತದೆ.

"ರೈತರು ಹೊಲಗದ್ದೆಗಳಲ್ಲಿ ದುಡಿದು, ದಣಿದು ಒಂದೆಡೆ ಕುಳಿತಾಗ ಹೊರಹೊಮ್ಮಿ ಬರುವ ಆಲಾಪನೆಯೆ ಇಂದಿನ ಮನಮೋಹಕ ಮಧುರರಾಗ ಧಾಟಿಯ ಜಾನಪದ ಸಂಗೀತ".(ನಾಗಪುಷ್ಪಲತಾ ಕೆ., ಕರ್ನಾಟಕ ಜನಪದ ರಂಗ ಕಲೆಗಳ ಕೋಶ, ಪು.೪೦)

ಶಾಸ್ತ್ರೀಯ ಸಂಗೀತಕ್ಕೆ ಇರುವಂತಹ ಕಟ್ಟುಪಾಡುಗಳಿಂದ ರಾಗ-ತಾಳ-ಸ್ವರ ಮುಂತಾದ ವಿಷಯಗಳು ಈ ಜಾನಪದ ಸಂಗೀತದಲ್ಲಿ ಶಾಸ್ತ್ರೀಯ ಕಟ್ಟುಪಾಡುಗಳು ಇರದಿದ್ದ ಕಾರಣ ಸಾಮಾನ್ಯ ಜನರು ಕೂಡ ಕೇಳಿ ಕೇಳಿ ಕಲಿಯಬಹುದಾಗಿದೆ. ಜನಪದ ಸಂಗೀತದಲ್ಲಿ ಬರುವಂತ ಹಾಡುಗಳು ಕುಟ್ಟುವ ಹಾಡು, ಬೀಸುವ ಹಾಡು, ಹಂತಿಯ ಹಾಡು, ಜೋಗುಳ ಹಾಡು, ಎಣ್ಣೆ ಹಚ್ಚುವ ಹಾಡು, ಮೊಹರಂ ಹಾಡು, ಸೊಬಾನೆ ಹಾಡು ಮುಂತಾದವುಗಳು.

೨. ಶಾಸ್ತ್ರೀಯ ಸಂಗೀತ

ಈ ಶಾಸ್ತ್ರೀಯ ಸಂಗೀತ ರಾಗ, ತಾಳ ಎಂಬ ಹಲವಾರು ರೀತಿಯ ಕಟ್ಟುಪಾಡುಗಳನ್ನು ಒಳಗೊಂಡು, ಸಂಪ್ರದಾಯ ಬದ್ಧವಾಗಿ ನಿರ್ಮಾಣಗೊಂಡು ನಿರಂತರ ಅಭ್ಯಾಸದಿಂದ ಕಲಿಯಲು ಸಾಧ್ಯವಾಗುವ ಸಂಗೀತ ಪ್ರಕಾರವೇ ಈ ಶಾಸ್ತ್ರೀಯ ಸಂಗೀತ.

ಈ ಭಾರತೀಯ ಶಾಸ್ತ್ರೀಯ ಸಂಗೀತದ ಉತ್ಪತ್ತಿ ಮತ್ತು ಬೆಳವಣಿಗೆ ಈ ರೀತಿಯಾದಂತ ಅಭಿಪ್ರಾಯಗಳು ಕಂಡುಬರುತ್ತವೆ. ಭರತ ಖಂಡದಲ್ಲಿ ಆರ್ಯರು ದೇವರನ್ನು ಋಕ ಎಂಬ ಸ್ತೋತ್ರದ ಮೂಲಕ ಸ್ತುತಿಸುತ್ತಿದ್ದರು. ಆದರೆ ಸ್ತೋತ್ರಗಳನ್ನು ಸಂಗೀತದ ಮೂಲಕ ಹಾಡಿದರೆ ದೇವರು ಕ್ಷಿಪ್ರದಲ್ಲಿಯೇ ತೃಪ್ತಿಪಡುವನು ಎಂಬುದನ್ನು ಮನಗಂಡರು. ಹೀಗೆ ಅವರು ಋಕಗಳ ತಾಳ ಲಯಬದ್ಧವಾಗಿ ದೇವರನ್ನು ಸ್ತುತಿಸಲು ಉಪಯೋಗಿಸಿದರು.

ಸಾಮವೇದವು ಹೀಗೆ ಉತ್ಪನ್ನವಾಯಿತು. ಭಾರತೀಯ ಸಂಗೀತವು ಹೀಗೆ ಸಾಮವೇದದಿಂದ ಹುಟ್ಟಿತು.(ನಾಗಪುಷ್ಪಲತಾ, ಪು. ೩೨)

ಸಾಮದ ಉತ್ಪತ್ತಿಯ ಬಗೆಗೆ ಡಾ. ಶರಶ್ಚಂದ್ರ ಪರಾಂಜಪೆಯವರು ಜೈಮಿನಿ ಸೂತ್ರದ ಆಧಾರದ ಮೇಲೆ ಈ ರೀತಿಯಾಗಿ ತಮ್ಮ ವಿಚಾರಗಳನ್ನು ಪ್ರಸ್ತಾಪ ಮಾಡಿದ್ದಾರೆ. ಗೀತೆಗಾಗಿ ಸಾಮ ಎಂಬ ಸಂಜ್ಞೆ ಕೊಡಲಾಗಿದೆ. ಯಾವ ಮಂತ್ರಗಳನ್ನು ಹಾಡಲಾಗುತ್ತಿತ್ತು ಅವುಗಳಿಗೆ ಸಾಮ ಎಂದು ಕರೆಯಲಾಗುತ್ತಿತ್ತು. ಸಾಮ ಶಬ್ದದ ಅರ್ಥ ಗಾನ ಅಥವಾ ಗೇಯ ಎಂದು ಇದ್ದರೂ ಅಧಿಷ್ಠಾನದ ರೂಪದಲ್ಲಿ ಋಕಗಳ ಸಂಬಂಧ ಇರುವುದರಿಂದ ಇದಕ್ಕೂ ಸಾಮಿ ಎಂಬ ಶಬ್ದದ ಪ್ರಯೋಗ ಇದೆ. ದೇವತಾ ಸ್ತೋತ್ರಕ್ಕಾಗಿ ಸಂಬಂಧ ಇರುವುದರಿಂದ ಇದಕ್ಕೂ ಸಾಮಿ ಎಂಬ ಶಬ್ದ ಪ್ರಯೋಗ ಇದೆ. ದೇವತಾ ಸ್ತೋತ್ರಕ್ಕಾಗಿ ರಚಿತವಾದ ಲಲಿತ ಹಾಗೂ ಛಂದೋಬದ್ಧ ಕಾವ್ಯಗಳು ಸಂಗೀತಕ್ಕೆ ಉಪಯುಕ್ತವಾಗಲೆಂದು ಸಿದ್ಧವಾದವು.

ಸಂಗೀತ ಉತ್ಪತ್ತಿಯ ದೃಷ್ಟಿಯಿಂದ ಸಾಮವೇದಕ್ಕೆ ಒಂದು ವಿಶಿಷ್ಟವಾದ ಸ್ಥಾನ ಕಂಡುಬರುತ್ತದೆ. ವೇದನಾರಿ ಸಾಮವೇ ದೋಸ್ತಿ ಎಂದು ಸ್ವಯಂ ಭಗವಂತನು ಗೀತೋಪದೇಶ ಮಾಡುವಾಗ ಹೇಳಿದ್ದಾನೆ. ಸಾಮವೇದವು ಗಾಯತ್ರಿ ಛಂದಸ್ಸಿನಲ್ಲಿ ನಿಬದ್ಧವಾಗಿದ್ದು ಗಾಯನವನ್ನು ಸರ್ವಶ್ರೇಷ್ಠವೆಂದು ತಿಳಿದುಕೊಳ್ಳಲಾಗಿದೆ. ಸಾಮ ಸಾಹಿತ್ಯದಲ್ಲಿ ಉದ್ಧೀಥ ಶಬ್ದದ ಸಂಬಂಧವನ್ನು ಉಚ್ಚಧ್ವನಿಯಲ್ಲಿ ಹಾಡುವ ಓಂಕಾರ ಅಥವಾ ಪ್ರಣವದ ಜೊತೆಗೆ ಕಾಣಿಸಲಾಗಿದೆ. ಸ್ವರವೇ ಸಾಮವೇದದ ಸರ್ವಸ್ವ ಮತ್ತು ವಿಶಿಷ್ಟ ಸ್ವರಗಳ ಸನ್ನಿವೇಶವೇ ಸಾಮ ಶಬ್ದದ ಮೂಲಧಾರ ಯಜ್ಞ ಯಾಗಗಳಲ್ಲಿ ಮಾಡಲಾಗುತ್ತಿತ್ತು. ಅವರೇ ಉದ್ಗಾತ್ರ ಗಳೆನಿಸಿದರು. ಸಾಮವೇದದಲ್ಲಿ ಪ್ರಧಾನವಾಗಿ ಎರಡು ಭಾಗಗಳಿವೆ. ಅವು ಗಾನ ಮತ್ತು ಅರ್ಚಿಕ ಎಂಬ ಎರಡು ಭಾಗಗಳನ್ನು ಅರ್ಚಿಕ ಭಾಗದಲ್ಲಿ ಋಗ್ವೇದದ ಋಕಗಳ ಸಂಗ್ರಹದಲ್ಲಿದೆ.

ಇವು ಸಾಮ ಸಾಹಿತ್ಯದ ಸಂಕೇತಗಳಾಗಿವೆ. ಸಾಮವೇದದಲ್ಲಿ ಗಾನದ ಸ್ಥಾನವು ಬಹಳ ಮಹತ್ವಪೂರ್ಣವಾಗಿದೆ. ಗಾನಗ್ರಂಥ ಸಾಮದ ಸ್ವರಮಯ ಸ್ವರೂಪದ ದ್ಯೋತಕವಾಗಿದೆ. ಸಂಗೀತದ ಇತಿಹಾಸದಲ್ಲಿ ಸಾಮಾನ್ಯವಾಗಿ ಸಾಮವೇದದ ಈ ಗ್ರಂಥಗಳಿಗೆ ಮಹತ್ವಪೂರ್ಣ ಸ್ಥಾನವಿದೆ. ಗಾನ ಋತುಗಳಲ್ಲಿ ನಾಲ್ಕು ಗ್ರಂಥಗಳಿವೆ.

ಗ್ರಾಮಗೇಯ ಗಾನ, ಅರಣ್ಯೇಯ ಗಾನ, ಊಹಗಾನ ಮತ್ತು ಊದ್ಯಗಾನ

ಸಾಮಸ್ವರಗಳ ವಿಕಾಸವು ಪ್ರಾರಂಭದಲ್ಲಿ ಕೇವಲ ಮೂರು ಸ್ವರಗಳಿಂದಾಗಿದೆ. ಕೆಲವೊಮ್ಮೆ ಒಂದೇ ಸ್ವರ ಅಥವಾ ಎರಡು ಸ್ವರ ಅಥಾವ ಮೂರು ಸ್ವರಗಳು ಸಾಮಗಾನದಲ್ಲಿ ಉಪಯೋಗಿಸಲ್ಪಡುತ್ತಿದ್ದವು. ಒಂದೇ ಸ್ವರ ಉಪಯೋಗಿಸಿ ಹಾಡಿದರೆ ಅದಕ್ಕೆ ಅರ್ಚಿಕ ಎಂದು ಎರಡು ಸ್ವರಗಳನ್ನು ಉಪಯೋಗಿಸಿ ಹಾಡಿದರೆ ಅದಕ್ಕೆ ಗಂಧಿಕ ಎಂದು ಮತ್ತು ಮೂರು ಸ್ವರಗಳನ್ನು ಉಪಯೋಗಿಸಿ ಹಾಡುವ ಗಾಯನ ಶೈಲಿಗೆ ಸಾಮಿಕ ಎಂದು ಕರೆಯುತ್ತಿದ್ದರು. ಕಾಲಾಂತರದಲ್ಲಿ ಈ ಮೂರು ಸ್ವರಗಳ ವಿಕಾಸ ಆರಂಭವಾಯಿತು. ಆರಂಭದ ಸಾಮಗಾನದಲ್ಲಿ ಏಳು ಸ್ವರಗಳು ಮೂರು ಸ್ವರಗಳಲ್ಲಿ ಅಡಕವಾಗಿದ್ದು, ಮುಂದಿನ ಸಾಮಗಾನ ಪದ್ಧತಿಯಲ್ಲಿ ಏಳು ಸ್ವರಗಳ ಉಪಯೋಗವಾಗಲಾರಂಭಿಸಿತು. ಈ ಏಳು ಸ್ವರಗಳ ಹೆಸರುಗಳು ಈ ರೀತಿಯಾಗಿ ಕಂಡುಬರುತ್ತದೆ.

ಪ್ರಥಮ, ದ್ವಿತಿಯ, ತೃತೀಯ, ಚತುರ್ಥ, ಪಂಚಮ, ಮಂದ್ರ, ಕೃಷ್ಣ ಮತ್ತು ಅತಿಸ್ವಾರ, ಸಮವಿಧಾನ ಬ್ರಾಹ್ಮಣದಲ್ಲಿ ಪಂಚಮ ಸ್ವರಕ್ಕೆ ಅತಿಕೃಷ್ಟ ಎಂದು ಕರೆಯಲಾಗಿದೆ.

ಸಾಮಸ್ವರಗಳು ಮತ್ತು ಆಧುನಿಕ ಸ್ವರಗಳ ವಿವರಣೆ ಈ ಕೆಳಗಿನಂತಿವೆ.

| **ಸಾಮ ಸ್ವರ** | **ಸಂಗೀತ ಸ್ವರ** | **ಪ್ರತೀಕ ಚಿಹ್ನೆ** |
|---|---|---|
| ಪ್ರಥಮ | ಮಧ್ಯಮ | ಮ |
| ದ್ವಿತೀಯ | ಗಾಂಧಾರ | ಗ |

| | | |
|---|---|---|
| ತೃತೀಯ | ರಿಷಬ | ರೆ |
| ಚತುರ್ಥ | ಷಡ್ಜ | ಸ |
| ಪಂಚಮ | ದ್ವೈತ | ಧ |
| ಮಂದ್ರಕಪ್ಪ | ನಿಷಾದ | ನಿ |
| ಅತಿಸ್ವಾರ | ಪಂಚಮ | ಪ |

ಸಪ್ತಸ್ವರಗಳ ಹಾಡುವಿಕೆಯಿಂದಾಗಿ ಸಂಗೀತಕ್ಕೆ ಶಾಸ್ತ್ರದ ಚೌಕಟ್ಟು ದೊರೆತು ಶಾಸ್ತ್ರೀಯ ಸಂಗೀತವೆಂಬುದಾಗಿ ಕರೆಯಲ್ಪಟ್ಟಿತೆಂದು ತಿಳಿದುಬರುತ್ತದೆ. ನಾರದಿಯ ಶಿಕ್ಷ ಗ್ರಂಥದಲ್ಲಿ ಆಗಿನ ಕಾಲದಲ್ಲಿದ್ದ ಸಂಗೀತದ ವಿಸ್ತಾರವಾದ ವಿವರಣೆಯಿದೆ. ವೈದಿಕ ಮತ್ತು ಲೌಕಿಕ ಎಂಬ ಎರಡು ಬಗೆಯ ಸಂಗೀತ ಉಲ್ಲೇಖಗಳೊಂದಿಗೆ ಆರ್ಚಿಕ ಗಾಥಿಕ, ಸ್ವರಾಂತರ, ಜಾಡವ, ಷಾಡವ, ಸಂಪೂರ್ಣವೆಂಬ ವೈದಿಕ ಗಾಯನ ಪದ್ಧತಿಯನ್ನು ನಾರದನು ತಿಳಿಸಿದ್ದಾನೆ(ಪದ್ಮಾಮೂರ್ತಿ, ಸಂಗೀತ ಲಕ್ಷಣ ಸಂಗ್ರಹ ಭಾಗ–೧, ಪು.೨೫). ನಾರದರ ಸಂಗೀತ ಮಕರಾದ ಗ್ರಂಥದಲ್ಲಿ ರಾಗಗಳನ್ನು ಸ್ತ್ರೀ–ಪುರುಷ ನಪುಂಸಕಗಳಾಗಿ ಮೊದಲ ಬಾರಿಗೆ ವಿಂಗಡಿಸಿದ್ದಾರೆ. ಅಲ್ಲದೆ ರಾಗಗಳನ್ನು ಹಾಡುವ ಕಾಲದ ಬಗೆಗೆ ತಿಳಿಸಿದ್ದಾನೆ.

ಭರತನು ರಚಿಸಿದ ನಾಟ್ಯಶಾಸ್ತ್ರವೇ ಭಾರತೀಯ ಸಂಗೀತದ ಬಗೆಗೆ ತಿಳಿಸಿಕೊಡುವ ಪ್ರಾಚೀನ ಗ್ರಂಥವಾಗಿದೆ. ಈತನ ಕಾಲ ಸುಮಾರು ೨ರಿಂದ ೪ನೇ ಶತಮಾನ ನಾಟ್ಯಶಾಸ್ತ್ರದಲ್ಲಿ ಒಟ್ಟು ೩೬ ಅಧ್ಯಾಯಗಳಿದ್ದು ೨೮ನೇ ಅಧ್ಯಾಯದಿಂದ ೩೬ನೇ ಅಧ್ಯಾಯದವರೆಗೆ ಸಂಗೀತದ ಬಗೆಗೆ ತಿಳಿಸಲಾಗಿದೆ. ಇದರಲ್ಲಿ ತತ, ಸುಧಿರ, ಅವನದ್ದ ಹಾಗೂ ಘನ ವಿಂಗಡಣೆಯ ಅನೇಕ ವಾದ್ಯಗಳು ಹೇಳಲ್ಪಟ್ಟಿವೆ. ಅಲ್ಲದೆ ವಾದ್ಯಗಳ ಗುಂಪಿನ ವಿಂಗಡಣೆಯ ಕುರಿತಾಗಿ ಹೇಳಲ್ಪಟ್ಟಿವೆ. ಸ್ವರಸಪ್ತಕ ಅದರಲ್ಲಿನ ವಾದಿ, ವಿವಾದಿ, ಸಂವಾದಿ ಸಂಬಂಧಗಳು, ಧ್ರುವ ಚಲವೀಣೆಗಳು ಆ ವೀಣೆಯ ಪ್ರಯೋಗದಿಂದ ಪಡೆಯಲು ಸಾಧ್ಯವಿರುವ ೨೨ ಶ್ರುತಿಗಳು, ವರ್ಣ, ಅಲಂಕಾರ, ಮಾರ್ಗತಾಳ, ದೇಶಿತಾಳ ಧ್ರುವ ಪದ, ತ್ರಿಸ್ಥಾಯಿ, ಷಡ್ಜಗ್ರಾಮೆ, ಮಧ್ಯಮ ಗಾಮ, ಜಾತಿಗಳು, ಮೂರ್ಛನ ಪ್ರಬಂಧ ಇತ್ಯಾದಿ ಅನೇಕ ವಿಚಾರಗಳು ನಾಟ್ಯಶಾಸ್ತ್ರದಲ್ಲಿ ಉಲ್ಲೇಖಿಸಲ್ಪಟ್ಟಿವೆ.(ಡಾ. ಸರ್ವಮಂಗಳ ಶಂಕರ ಸಂಗೀತ ಕ್ಷೇತ್ರಕ್ಕೆ ವಚನಕಾರರ ಕೊಡುಗೆ, ಪು.೪೮) ಹೀಗೆ ಈ ಭರತನಾಟ್ಯ ಶಾಸ್ತ್ರವು ಸಂಗೀತ ಚರಿತ್ರೆಯಲ್ಲಿ ಆಕಾರ ಗ್ರಂಥವಾಗಿ ಪರಿಣಮಿಸಿದೆ.

ಪ್ರಾರಂಭದಿಂದಲೂ ಸಂಸ್ಕೃತ ಭಾಷೆಯಲ್ಲಿಯೇ ಬರೆಯಲ್ಪಟ್ಟ ಕೃತಿಗಳು ತದನಂತರದಲ್ಲಿ ಪ್ರಾದೇಶಿಕ ಭಾಷೆಯಗಳಲ್ಲಿ ಬರೆಯಲ್ಪಟ್ಟವು. ದಾಸಕೂಟದ ನರಹರಿ ತೀರ್ಥರು ಪುರಾಣ, ಉಪನಿಷತ್ತುಗಳ ಸಾರವನ್ನು ಅರುಹುವ ಭಕ್ತಿ ಪ್ರಧಾನವಾದಂತಹ ಕೀರ್ತನೆಗಳನ್ನು ಕನ್ನಡದಲ್ಲಿ ರಚಿಸಿದರು. ನಂತರದಲ್ಲಿ ಬಂದ ಶ್ರೀ ಪಾದರಾಯರು ರಂಗವಿಠಲ ಎಂಬ ಅಂಕಿತದಲ್ಲಿ ನೃತ್ಯಶಾಸ್ತ್ರ, ಸಂಗೀತ ಶಾಸ್ತ್ರ, ತತ್ವಶಾಸ್ತ್ರವನ್ನು ಕನ್ನಡದಲ್ಲಿ ಈ ಕೃತಿಗಳನ್ನು ರಚಿಸಿದರು.

ಇವರ ನಂತರ ಬಂದಂತಹ ಮತ್ತು ಕರ್ನಾಟಕ ಸಂಗೀತದ ಪಿತಾಮಹರೆನಿಸಿದ ಪುರಂದರದಾಸರು, ವಾದಿರಾಜರು ಮತ್ತು ಕನಕದಾಸರು ಸಾಮಾಜಿಕ ಕಳಕಳಿ ಉಳ್ಳಂತಹ ಮತ್ತು ಸಾಮಾಜಿಕ ವಿಷಯಗಳ ನ್ನೊಳಗೊಂಡ ಭಕ್ತಿ ಪ್ರಧಾನ ಕೀರ್ತನೆಗಳನ್ನು ಕನ್ನಡದಲ್ಲೇ ಬರೆಯುವುದರ ಮೂಲಕ ಭಾರತೀಯ ಸಂಗೀತಕ್ಕೆ ಒಂದು ಅತ್ಯದ್ಭುತವಾದಂತ ಕೊಡುಗೆಯನ್ನು ಕೊಟ್ಟಿದ್ದಾರೆ.

ದಕ್ಷಿಣ ಭಾರತದ ಹರಿದಾಸರು ಉತ್ತರ ಭಾರತದ ಗಾಯಕ ಮತ್ತು ವಾಗ್ಗೇಯಕಾರರಾದ ಸಂತ ಕಬೀರದಾಸ, ಸಂತ ತುಳಸಿದಾಸ. ಮೀರಾಬಾಯಿ, ಸೂರದಾಸ, ಹರಿದಾಸ, ವಲ್ಲಭಚಾರ್ಯ, ಹರಿದಾಸ, ಬೈಜ, ಗೋಸ್ವಾಮಿ ಮುಂತಾದವರು ನಮ್ಮ ಭಾರತೀಯ ಸಂಗೀತಕ್ಕೆ ಅಪಾರವಾದಂತ ಕೊಡುಗೆಗಳನ್ನು ನೀಡಿ ಹೋಗಿದ್ದಾರೆ. ತ್ಯಾಗರಾಜರು ಶ್ಯಾಮಶಾಸ್ತ್ರಿಗಳು ಹಾಗೂ ದೀಕ್ಷಿತರು ತಮ್ಮ ಕೃತಿಗಳು ರಚಿಸುವುದರ ಮೂಲಕ ಭಾರತೀಯ ಸಂಗೀತ ಬೆಳವಣಿಗೆಗೆ ಕಾರಣಿಕರ್ತರಾಗಿದ್ದಾರೆ.

ಭಾರತೀಯ ಸಂಗೀತದ ಬಗೆಗೆ ಇಂಗ್ಲೀಷ್‌ನಲ್ಲಿ ಗ್ರಂಥವೊಂದನ್ನು ಬರೆದು ಗೇಯ ಸಂಗೀತಕ್ಕೆ ಉದಾಹರಣೆಗಳನ್ನು ಕೊಟ್ಟಿದ್ದಾರೆ. ೨೦ನೇ ಶತಮಾನದ ಆದಿಯಲ್ಲಿ ಯು.ಪಿ. ಅಪ್ಪಾ ತುಳಸಿ(ಕಾಶಿನಾಥ) ಎನ್ನುವವರು 'ರಾಗಚಂದ್ರಿಕಾ', 'ರಾಗ ಕಲ್ಪದ್ರುವ', 'ಅಭಿನವ ತಾಳ ಮಂಜರಿ' ಮತ್ತು 'ಸಂಗೀತ ಸುಧಾಕರ' ಎಂಬ ಗ್ರಂಥಗಳನ್ನು ರಚಿಸಿದ್ದಾರೆ. ಹಿಂದಿನ ಶತಮಾನದಲ್ಲಿ ರಾಜಾ ಸರ್ ಎಸ್.ಎಮ್. ಠಾಕೂರ್ ಅವರು "ಸಂಗೀತ ಸಾರ ಸಂಗ್ರಹ" ಎಂಬ ಗ್ರಂಥವೊಂದನ್ನು ರಚಿಸಿದ್ದಾರೆ. ಭಾರತೀಯ ಸಂಗೀತದ ಬಗೆಗೆ ಇಂಗ್ಲೀಷ್‌ನಲ್ಲಿ ಗ್ರಂಥವೊಂದನ್ನು ಬರೆದು stoff Notition ಗೇಯ ಸಂಗೀತಕ್ಕೆ ಉದಾಹರಣೆಗಳನ್ನು ಕೊಟ್ಟಿದ್ದಾರೆ.(ಪದ್ಮಮೂರ್ತಿ, ಸಂಗೀತ ಲಕ್ಷಣಗಳ ಸಂಗ್ರಹ ಭಾಗ-೧, ಪು.೪೦)

ಹೀಗೆ ಇನ್ನು ಹಲವಾರು ಸಂಗೀತಜ್ಞರು ರಚಿಸಿರುವ ಕೃತಿಗಳ ಮೂಲಕ ಬೆಳೆದುಬಂದ ಸಂಗೀತವು ೨೧ನೇ ಶತಮಾನದ ಪ್ರಾರಂಭದಿಂದ ಸಂಗೀತ ಸಮ್ಮೇಳನಗಳು ಸಂಗೀತದ ಉತ್ಸವಗಳು ಮುಂತಾದ ಕಾರ್ಯಕ್ರಮಗಳು ನಡೆಯುತ್ತಿರುವುದು ಕಂಡುಬರುತ್ತದೆ. ಪ್ರತಿಯೊಬ್ಬರ ಮನೆಮನೆಯಲ್ಲೂ ಸಂಗೀತ ಜ್ಯೋತಿ ಬೆಳಗಿಸಿದ್ದು, ಶಿಷ್ಯ ಪರಂಪರೆಯನ್ನು ತಯಾರು ಮಾಡುವುದರ ಮುಖಾಂತರ, ಸಂಗೀತ ಕುರಿತಾಗಿ ಉಪನ್ಯಾಸಗಳನ್ನು ಮಾಡುವುದರ ಮುಖಾಂತರ ಜನಸಾಮಾನ್ಯರಲ್ಲಿಯೂ ಕೂಡಾ ಆಸಕ್ತಿಯನ್ನು ಮೂಡಿಸುತ್ತಿವೆ. ಹಲವಾರು ವಿಶ್ವವಿದ್ಯಾಲಯಗಳು, ಸಾವಿರಾರು ಸಂಘ ಸಂಸ್ಥೆಗಳು ಹಲವಾರು ಸಂಗೀತ ಗ್ರಂಥಗಳನ್ನು ರಚಿಸುವುದರ ಮೂಲಕ ಇಂದಿನ ಯುವ ಸಂಗೀತ ಆಸಕ್ತರಿಗೆ ಮಾರ್ಗದರ್ಶಿಯಾಗಿವೆ.

ಪಂ. ವಿಷ್ಣು ನಾರಾಯಣ ಭಾತಖಂಡೆಯವರು ಹಾಗೂ ವಿಷ್ಣು ದಿಗಂಬರ ಫಲೂಸ್ಕರ್ ಅವರು ಸಂಗೀತ ಕುರಿತಾಗಿ ೩೦೦ ಗ್ರಂಥಗಳನ್ನು ರಚಿಸಿ ಸಂಗೀತ ಪ್ರೇಮಿಗಳಿಗೆ ಮಾರ್ಗದರ್ಶಿಯಾಗಿ ಗುರುತರವಾದ ಕೆಲಸ ಮಾಡಿದ್ದಾರೆ. ಪ್ರಸ್ತುತ ಸಂಗೀತದಲ್ಲಿ ಅನೇಕ ಪ್ರಕಾರಗಳಾದ ಶಾಸ್ತ್ರೀಯ ಸಂಗೀತ (ಹಿಂದೂಸ್ತಾನಿ, ಕರ್ನಾಟಕಿ) ಲಘು ಸಂಗೀತ, ರಂಗ ಸಂಗೀತ, ಸಮುದಾಯ ಸಂಗೀತ, ಠಪ್ಪಾ, ಹೋರಿ, ಗಜಲ್, ಠುಮ್ರಿ ಮತ್ತು ಕವ್ವಾಲಿ ಸಂಗೀತ ಹೀಗೆ ಇನ್ನು ಹಲವಾರು ಪ್ರಕಾರಗಳಲ್ಲಿ ಹಾಡುತ್ತ ನಿಂತ ನೀರಾಗಿರದೆ ಹರಿಯುವ ನೀರಾಗಿ ಸಾಗುತ್ತಿರುವುದು ಕಾಣಬಹುದಾಗಿದೆ.

## ಸಂಗೀತದ ಕೆಲವು ಪ್ರಮುಖ ಕೃತಿಗಳು

| ಗ್ರಂಥಕಾರರ ಹೆಸರು | ಗ್ರಂಥಗಳು |
|---|---|
| ಭರತ | ನಾಟ್ಯಶಾಸ್ತ್ರ |
| ನಾರದ | ನಾರದೀಯ ಶಿಕ್ಷ |
| ಮತಂಗ | ಬೃಹದ್ದೇಶಿ |
| ಅಭಿನವ ಗುಪ್ತ | ಅಭಿನವ ಭಾರತಿ |
| ಸೋಮೇಶ್ವರ | ಮಾನಸೋಲ್ಲಾಸ |
| ಜಗದೇಕಮಲ್ಲ | ಸಂಗೀತ ಚೂಡಾಮಣಿ |
| ಶಾಙ್ಗದೇವ | ಸಂಗೀತ ರತ್ನಾಕರ |
| ಪಾಶ್ವದೇವ | ಸಂಗೀತ ಸಮಯಸಾರ |
| ವಿದ್ಯಾರಣ್ಯರು | ಸಂಗೀತ ಸಾರ |
| ಲೋಚನ ಕವಿ | ರಾಗತರಂಗಿಣಿ |
| ತಾನಸೇನ | ರಾಗಮಾಲ |
| ಪುಂಡಲಿಕ ವಿಠಲ | ಷಡ್ರಾಗ–ಚಂದ್ರೋದಯ |
| ರಾಮಾಮಾತ್ಯ | ಸ್ವರಮೇಳ ಕಲಾನಿಧಿ |
| ಸೋಮನಾಥ | ರಾಗವಿಭೋಗ |
| ದಾಮೋಧರ | ಸಂಗೀತ ದರ್ಪಣ |
| ಅಹೋಬಲ | ಸಂಗೀತ ಪಾರಿಜಾತ |
| ವೆಂಕಟಮುಖಿ | ಚತುರ್ದಂಡಿ ಪ್ರಕಾಶಿಕ |
| ನಾರಾಯಣ | ಸಂಗೀತ ಸಾರಿಣಿ |
| ವಿ. ರಾಮರತ್ನಂ ಮತ್ತು ವಿ.ಎಸ್.ಸಂಪತ್ತು | ಕರ್ನಾಟಕ ಸಂಗೀತ: ಸುಧಾ ಸಂಗೀತ |
| ರಾಳಪಳ್ಳಿ ಅನಂತ ಕೃಷ್ಣಶರ್ಮ | ಗಾನಪತಿ |
| ಎ.ಎಂ. ಪುರಂದರ | ಭಾರತೀಯ ವಾದ್ಯಗಳು |
| ಬಿ.ಡಿ. ಪಾಠಕ | ಭಾರತೀಯ ಸಂಗೀತ ಚರಿತ್ರೆ |
| ರಾ. ಸತ್ಯನಾರಾಯಣ | ಕರ್ನಾಟಕ ಸಂಗೀತ ವಾಹಿನಿ |

| ಗ್ರಂಥಕಾರರ ಹೆಸರು | ಗ್ರಂಥಗಳು |
| --- | --- |
| ಪದ್ಮಾಮೂರ್ತಿ | ಸಂಗೀತ ಲಕ್ಷಣ ಸಂಗ್ರಹ ಭಾಗ-೨ |
| ಬಿ.ಡಿ. ಲಕ್ಷ್ಮಣ ಎಂ.ಎ.ನರಸಿಂಹಾಚಾರ | ಕರ್ನಾಟಕ ಸಂಗೀತ ಶಾಸ್ತ್ರ ಜ್ಞಾನಸಾರ |
| ಮೂಲ: ಡಾ. ಬಿ.ಸಿ.ದೇವ (ಅನು) ರತ್ನಶಿವಶಂಕರ | ಸಂಗೀತ ಧ್ವನಿ ವಿಜ್ಞಾನ |
| ಪ್ರೊ. ವಿ. ರಾಮರತ್ನಂ | ಸಂಗೀತ ದರ್ಪಣ |
| ಪ್ರೊ. ರಾ. ವಿಶ್ವೇಶ್ವರನ್ | ಸಂಗೀತ ಶಾಸ್ತ್ರ ಚಿಂತನ ರಸಾಯನ |

ಅಧ್ಯಾಯ ನಾಲ್ಕು

# ಅಲೆಮಾರಿ ಸಮುದಾಯಗಳ ಹಿನ್ನೆಲೆ

## ಅಧ್ಯಾಯ ನಾಲ್ಕು

# ಅಲೆಮಾರಿ ಸಮುದಾಯಗಳ ಸಂಕ್ಷಿಪ್ತ ಹಿನ್ನೆಲೆ

### ಅಲೆಮಾರಿಗಳ ಮೂಲ

ಯಾವುದೇ ಸಮುದಾಯದ ಮೂಲವನ್ನು ಶೋಧಿಸಿದರೂ ನಿರ್ದಿಷ್ಟವಾಗಿ ಇಂತಹುದೇ ಮೂಲದಿಂದ ಬಂದವರು, ಇಂತಹ ಸ್ಥಳದಿಂದಲೇ ಬಂದವರೆಂದು ಹೇಳುವುದು ಕಷ್ಟದ ಕಾರ್ಯ. ಇದೇ ಮೂಲವೆಂದು ಹೇಳುವುದು ಕೂಡ ಕಷ್ಟವಾದುದು. ಆ ಸಮುದಾಯ ಎಲ್ಲಿ ಜೀವಿಸಲು ಅನುಕೂಲವಾದ ವಾತಾವರಣ, ಕಾಡಿನ ಸಂಪನ್ಮೂಲ, ನೀರಿನ ಸಂಪನ್ಮೂಲ ಹಾಗೂ ಹೇರಳವಾಗಿ ಭಿಕ್ಷೆ ದೊರೆಯುವ ಸ್ಥಳಗಳು, ಬೇಟೆಗೆ ಅನುಕೂಲಕರವಾದ ಸ್ಥಳಗಳು ಮತ್ತು ವ್ಯಾಪಾರಕ್ಕಾಗಿ ಎಲ್ಲೆಲ್ಲಿ ಅನುಕೂಲವಾಗುತ್ತದೆಯೊ ಅಲ್ಲೆಲ್ಲ ಅಲೆಮಾರಿಗಳು ನೆಲೆಸಿರುವುದನ್ನು ಕಾಣಬಹುದಾಗಿದೆ.

ಮೂಲ ಎಲ್ಲಿ ಎಂಬುದನ್ನು ನಿಖರವಾಗಿ ಹೇಳುವುದು ಕಷ್ಟದ ಕೆಲಸ. ಮೂಲದ ಬಗ್ಗೆ ಕೆದಕುತ್ತಾ ಹೋದಂತೆಲ್ಲಾ ಇವರ ಸೃಷ್ಟಿ ಪುರಾಣಗಳಿಂದ ಮತ್ತು ವಕ್ತೃಗಳಿಂದ ಬಂದಿರುವ ಮಾಹಿತಿಯು ತುಂಬಾ ವಿಚಿತ್ರವಾಗಿದೆ. ಒಬ್ಬರು ಬಳ್ಳಿಯಿಂದ ಜನಿಸಿದರೆ ಮತ್ತೊಬ್ಬರು ಮಂತ್ರದಿಂದ, ಶಿವನಿಂದ, ದೇವಾನುದೇವತೆಗಳಿಂದ, ಶಾಪದಿಂದ, ಪ್ರಾಣಿ-ಪಕ್ಷಿಗಳಿಂದ, ಋಷಿಗಳಿಂದ ಹೀಗೆ ನಾನಾ ರೀತಿಯಲ್ಲಿ ಸೃಷ್ಟಿಯಾಗಿ ಬಂದದ್ದನ್ನು ಕಾಣಬಹುದಾಗಿದೆ. ಆದಿ ಕಾಲದಲ್ಲಿ ಪ್ರಾಣಿಯಂತಿದ್ದ ಮಾನವ ಹಂತಹಂತವಾಗಿ ಬೇರೆ ಬೇರೆ ಆಯಾಮಗಳಲ್ಲಿ ಬೆಳೆದು ಬಂದಿದ್ದಾನೆ. ಈ ಹಂತಗಳಲ್ಲಿ ಬದುಕಿನ ಏನೆಲ್ಲಾ ಘಟನೆಗಳಾದ ಪ್ರಕೃತಿ ವಿಕೋಪ, ವಿಪರೀತ ಮಳೆ, ಚಳಿ, ಬಿಸಿಲು, ಕ್ರೂರ ಮೃಗಗಳ ಹಾವಳಿ ಆಹಾರದ ಅಭಾವ, ಬೇಟೆಯ ತುಡಿತ, ವ್ಯಾಪಾರದ ಅಮಲು, ಬ್ರಿಟೀಷರ ಮತ್ತು ಸ್ಥಳೀಯರ ಆಡಳಿತದಿಂದ ಬೇಸತ್ತು ಮತ್ತು ಕೆಲವೊಂದು ಮುಸ್ಲಿಂ ದೊರೆಗಳಿಂದ ಹಿಂಸೆಯನ್ನು ಅನುಭವಿಸಿ ಬಂದವರಾಗಿದ್ದಾರೆ. ಇಂತಹ ಸಮುದಾಯಗಳನ್ನು ಅಂದಿನ ಆಳುವ ವರ್ಗವು ಧರ್ಮದ ಪ್ರಚಾರಕ್ಕಾಗಿ, ಸೇವೆಗಾಗಿ ಇನ್ನಿತರ ಕಾರಣಗಳಿಗಾಗಿ ಬಳಸಿಕೊಂಡಿದ್ದರು. ವೈವಿಧ್ಯಮಯ ಸ್ಥಳಗಳಲ್ಲಿ ಚದುರಿ ಹಂಚಿಹೋದ ಸಮುದಾಯಗಳು ಅಲೆಮಾರಿಗಳಾಗಿ ವಾಸದ ನೆಲೆ-ನೆಲವಿಲ್ಲದೆ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶದಲ್ಲಿ ಅಲೆಯುತ್ತಲೇ ಇದ್ದಾರೆ. ಆಳುವ ಸಮುದಾಯದ ದಬ್ಬಾಳಿಕೆಗೆ ತಲೆಮರೆಸಿಕೊಂಡು ಕಾಡಿಗೆ ಪ್ರವೇಶಿಸಿ ಹಸಿವನ್ನು ನೀಗಿಸಿಕೊಳ್ಳಲು ಅಡ್ಡದಾರಿ ತುಳಿದಿರಬೇಕು.

## ೪.೧. ಹಂಡಿ ಜೋಗಿ ಸಮುದಾಯದ ಹಿನ್ನೆಲೆ

**ಪದನಿಷ್ಪತ್ತಿ:** ಹಂಡಿ ಹಾಗೂ ಜೋಗಿ ಎಂಬ ಎರಡು ಪದಗಳಿಂದ ಹಂಡಿಜೋಗಿ ಪದ ಬಳಕೆಗೆ ಬಂದಿದೆ. ಭಿಕ್ಷಾಟನೆ ಕೈಯಲ್ಲಿ ಹಿಡಿದುಕೊಳ್ಳುವ ಕುಂಬಳಕಾಯಿ ಅಥವಾ ಸೋರೆಕಾಯಿಯಿಂದ ಮಾಡಿದ ಒಂದು ರೀತಿಯ ಪಾತ್ರೆಗೆ "ಹಂಡಿ" ಎಂಬುದಾಗಿ ಕರೆಯುತ್ತಾರೆ. ಜೋಗಿ ಪದವು 'ಯೋಗಿ' ಪದದಿಂದ ಯೋಗಿ ಎಂಬರ್ಥವನ್ನು ಹಂಡಿಜೋಗಿ ಪದ ಸೂಚಿಸುತ್ತದೆ. ಪ್ರಾರಂಭದಲ್ಲಿ ಜೋಗಿಗಳು ಒಂದು ಪ್ರತ್ಯೇಕ ಜಾತಿಯಾಗಿರಲಿಲ್ಲ. ಇದು ನಾಥ ಸಿದ್ಧ ಪರಂಪರೆಗೆ ಸೇರಿದ್ದಿತ್ತು. ತರುವಾಯ ಅದು ಜಾತಿ ಸ್ವರೂಪವನ್ನು ಪಡೆದುಕೊಂಡಿತು. ನಾಥ ಪರಂಪರೆಯಿಂದಾಗಿಯೇ 'ಹಂಡಿಜೋಗಿ' ಎಂಬುದಾಗಿ ಹೆಸರು ಬಂದಿದೆಯೆಂದು ಕೆಲವು ವಿದ್ವಾಂಸರು ಹೇಳುತ್ತಾರೆ. (ಚಂದ್ರಪ್ಪ ದುಷಂತ ಎಂ, ಹಂಡಿಯೋಗಿ ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು ೨೦೦೮ ಪು.೦೪)

ಪೌರಾಣಿಕ ಐತಿಹಾಸಿಕ ಹಾಗೂ ಸಾಮಾಜಿಕ ಹಿನ್ನೆಲೆ ಐತಿಹಾಸಿಕವಾಗಿ ಅಂತ: ವಿಶೇಷವಾದಂತ ದಾಖಲೆಗಳು ನಮಗೆ ದೊರಕುವುದಿಲ್ಲ. ಆದರೆ ಕ್ಷೇತ್ರಕಾರ್ಯದಲ್ಲಿ ಸಮುದಾಯದ ಮುಖಂಡರು ಹೇಳಿರುವ ಕೆಲವು ಕಥೆಗಳನ್ನ ಇಲ್ಲಿ ವಿವರಿಸಲಾಗಿದೆ. ಕುರುಗೋಡದ ಹಂಡಿಜೋಗಿ ಸಮುದಾಯದ ಮಂಜಣ್ಣನವರು ಹೇಳುವಂತೆ ಮಧ್ಯಮ ಪಾಂಡವರಾದ ಅರ್ಜುನನಿಂದ ಮುಂದುವರಿದು ಬಂದ ಉಪಪಾಂಡವ ವಂಶದವರು ಇವರು. ಪಾಂಡವರ ಹಿರಿಯ ಅಣ್ಣನಾದ ಧರ್ಮರಾಯನು ಒಮ್ಮೆ ತನ್ನ ಹೆಂಡತಿಯೊಂದಿಗೆ ವಸಂತದಲ್ಲಿ ಮಲಗಿದ್ದಾಗ ಆಕಸ್ಮಿಕವಾಗಿ ತಮ್ಮನಾದ ಮಧ್ಯಮ ಪಾಂಡವ ಅರ್ಜುನನು ಮನೆಯೊಳಗೆ ಪ್ರವೇಶಿಸುತ್ತಾನೆ. ಇದರಿಂದ ಕೋಪಿತನಾದ ಅಣ್ಣ ಮನೆಯೊಳಗೆ ಪ್ರವೇಶಿಸಿದ ತಪ್ಪಿಗೆ ಹನ್ನೆರಡು ವರ್ಷ ತೀರ್ಥಯಾತ್ರೆ ಪರ್ಯಟನೆಗೆ ಹೋಗಬೇಕೆಂದು ಆಜ್ಞೆಯನ್ನು ಮಾಡುತ್ತಾನೆ. ಅಣ್ಣನ ಆಜ್ಞೆಯಂತೆ ಹನ್ನೆರಡು ವರ್ಷಗಳ ತೀರ್ಥಯಾತ್ರೆ ಪರ್ಯಟನೆಗೆ ಹೊರಡುತ್ತಾನೆ. ಆಗ ಕಿನ್ನರಿ ವಾದ್ಯವನ್ನು ನುಡಿಸುತ್ತ. ಕೈಯಲ್ಲಿ ಹಂಡಿ ಎಂಬ ಭಿಕ್ಷಾಪಾತ್ರೆಯನ್ನು ಹಿಡಿದುಕೊಂಡು ಭಿಕ್ಷಾಟನೆ ಮಾಡುತ್ತಿದ್ದನು. ಒಂದು ದಿನ ತನ್ನ ತಾಯಿ ಕುಂತಿದೇವಿಯನ್ನ ಬೇಟಿಯಾಗಲು ಜೋಗಿಯ ವೇಷಭೂಷಣಗಳನ್ನು ಹಾಕಿಕೊಂಡು ಹೋಗುತ್ತಾನೆ. ಅಲ್ಲಿ "ಕಿನ್ನರಿ" ವಾದ್ಯವನ್ನು ನುಡಿಸುತ್ತಾ ಕಿನ್ನರಿ ಹಾಡು ಹಾಡಿ ಭಿಕ್ಷೆ ಬೇಡುತ್ತಾನೆ. ಇಂದಿಗೂ ಕೂಡ ಕಿನ್ನರಿ ಜೋಗಿಗಳು ಅರ್ಜುನ ಜೋಗಿಯ ಹಾಡನ್ನು ಹಾಡುವುದು ಕಂಡುಬಂದಿದೆ.

ಇನ್ನೊಂದು ಕಥೆಯ ಪ್ರಕಾರ ಒಮ್ಮೆ ಅರ್ಜುನ ದ್ರೌಪದಿ ಜೊತೆಗೆ ಪಗಡೆಯಾಟಕ್ಕೆ ಕುಳಿತುಕೊಂಡಿರುತ್ತಾನೆ. ಸುಮ್ಮನೆ ಪಗಡೆಯಾಡಿದರೆ ಅಷ್ಟೊಂದು ಸೊಗಸಿರುವುದಿಲ್ಲ ಎಂದು ತಿಳಿದು ಪಂಥದ ಮೇಲೆ ಆಟ ಆಡಿದರೆ ಸೊಗಸಿರುತ್ತದೆಂದು ತಿಳಿದು ಇವರಿಬ್ಬರು ಪಂಥ ಕಟ್ಟಿ ಆಟಶುರುಮಾಡುತ್ತಾರೆ. ಈ ಪಂಧ್ಯದಲ್ಲಿ ಅರ್ಜುನ ಸೋತರೆ ೧೨ ವರ್ಷಗಳ ಕಾಲ ಜೋಗಿ ವೇಷಧರಿಸಿ ದೇಶಾಂತರ ಹೋಗಬೇಕೆಂದು ಒಂದು ವೇಳೆ ದ್ರೌಪದಿ ಸೋತರೆ ಮಣಿಪುರದ ರಾಣಿಯರ ದಾಸಿಯಾಗುವುದಾಗಿ ಪಂಥ ಕಟ್ಟುತ್ತಾರೆ. ಈ ಪಂಥದಲ್ಲಿ ಅರ್ಜುನ ಸೋಲುತ್ತಾನೆ. ಸೋತ ಕಾರಣದಿಂದ ಹನ್ನೆರಡು ವರ್ಷ

ದೇಶಾಂತರ ಹೊರಟ ಅರ್ಜುನ ಏಳು ತಲೆ ಗುಡ್ಡದ ಕಲ್ಲಿನ ಮಠಕ್ಕೆ ಬಂದ ಅರ್ಜುನ ಆ ಮಠದ ಏಳು ಮಂದಿ ಸಿದ್ದರ ಸೇವೆಗೆ ತಿಂತನು. ತಾನು ಜೋಗಿಯಾಗುವುದಾಗಿ ಕೇಳಿಕೊಂಡನು. ಆಗ ಸಿದ್ದರು ಮಾಳವತಿ ಎಂಬ ದೇಹದ ರಾಕ್ಷಸಿಯೆನ್ನು ಕೊಂದು ರಾಕ್ಷಸಿಯ ದೇಹದಿಂದ ಕಿನ್ನರಿ ವಾಧ್ಯವನ್ನು ಮಾಡಿ ಜೋಗಿ ದೀಕ್ಷೆಯನ್ನು ನೀಡಿದರು ಎಂದು ತಿಳಿದುಬರುತ್ತದೆ (ಬೋರಲಿಂಗಯ್ಯ ಹಿ.ಚಿ., ಕರ್ನಾಟಕ ಜನಪದ ಕಲೆಗಳ ಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ೧೯೯೬, ಪು.೧೨೩). ಅಂದಿನ ಅರ್ಜುನ ವಂಶದವರು ಈಗಿನ ಹಂಡಿಜೋಗಿಗಳು ಎಂದು ತಿಳಿದುಬರುತ್ತದೆ.

ಕಿನ್ನರಿ ವಾದ್ಯವನ್ನು ನುಡಿಸುವ ಹಂಡಿಜೋಗಿಗಳ ಇತಿಹಾಸ ಹನ್ನೆರಡನೆ ಶತಮಾನಕ್ಕೂ ಹಿಂದೆ ಹೋಗುತ್ತದೆ. ಶರಣರ ಸಂಘದಲ್ಲಿ "ಕಿನ್ನರಿ" ಬೊಮ್ಮಯ್ಯನೆಂಬ ಒಬ್ಬ ವ್ಯಕ್ತಿ ಇದ್ದನೆಂಬ ಉಲ್ಲೇಖವಿದೆ. ಇವನು ಭಕ್ತಿಯಿಂದ ಶಿವಾಲಯದಲ್ಲಿ ಕಿನ್ನರಿ ನುಡಿಸಿ ಹನ್ನೊಂದು ಹಣ ದ್ರವ್ಯವನ್ನು ಶಿವನ ದಯೆಯಿಂದ ಸಂಪಾದಿಸಿ ಆ ಹಣವನ್ನು ಶರಣರ ದಾಸೋಹಕ್ಕೆ ಮೀಸಲಿಡುತ್ತಿದ್ದರಿಂದ ಕಿನ್ನರಿ ಬೊಮ್ಮಯ್ಯನೆಂಬ ಹೆಸರು ಬಂತೆಂದು ಹೇಳಲಾಗಿದೆ. "ಭೀಮಕವಿಯ ವಿರಚಿತ ಬಸವ ಪುರಾಣ'ದಲ್ಲಿ ಕಿನ್ನರಿ ಶಬ್ದ ಉಲ್ಲೇಖವಿದೆಯಲ್ಲದೆ ಕಿನ್ನರಿ ಬೊಮ್ಮಯ್ಯ 'ಕಿನ್ನರಿ ವೀಣೆಯನ್ನು ನುಡಿಸುತ್ತ ಶಿವಧ್ಯಾನ ಮಾಡುತ್ತಿದ್ದುದನ್ನು ಉಲ್ಲೇಖಿಸುತ್ತಾನೆ. ಶಿವಶರಣರ ಕಥಾ ರತ್ನಕೋಶದಲ್ಲಿ ಕೂಡ ಈ ಕಿನ್ನರಿಯ ವಿಚಾರ ಬರುತ್ತದೆ (ಡಾ. ಹಿ.ಚಿ. ಬೋರಲಿಂಗಯ್ಯ ಕರ್ನಾಟಕ ಜನಪದ ಕಲೆಗಳ ಕೋಶ ಪು.೧೨೩ ಪ್ರಸಾರಾಂಗ ಕವಿವಿ ಹಂಪಿ ೧೯೯೬).

"ಕಿನ್ನರಿ ಬೋಮ್ಮಯ್ಯ ಕಿನ್ನರಿಯ ಬಾರಿಸಲು
ಕುನ್ನಿ ಹಸು ಮರೆತು ಕಿವಿಗೊಟ್ಟು ಕಲ್ಯಾಣ
ಚೆನ್ನಾತು ಲೋಕ ಚಲುವಾತು ಸಂಗೀತ ವಿದ್ಯೆಯದು ಸಂಗಡದೆ ಬಂದದ್ದು
ಲಿಂಗಿಗಳ ಹಿರಿಮೆ ಹಾಡುತಲಿ ಕಲ್ಯಾಣ
ಲಿಂಗಮಂಟಪವ ಕುಡಿದನು"(ಶಂಕರ ಸರ್ವಮಂಗಳಾ ಸಂಗೀತ ಕ್ಷೇತ್ರಕ್ಕೆ ವಚನಕಾರರ ಕೊಡುಗೆ ಬಸವ ಸಮಿತಿ, ಬೆಂಗಳೂರು, ೨೦೦೮, ಪು.೧೨೮).

"ಶಿವಕೊಟ್ಟ ಕಿನ್ನರಿಯ ಭವದೊಳಗೆ ನುಡಿಸುತಲಿ
ಶಿವಬೋಧೆ ಜನಕೆ ಮಾಡುತಲಿ ಬೊಮ್ಮಯ್ಯ
ಭವಿಗಳಿಗೆ ಊದಿ ಶಿವಮಂತ್ರ" (ಅದೇ ಪು.೧೨೮)

ಹಂತಿಯ ಪದದಿಂದ ಕಿನ್ನರಯ್ಯ ವಚನಕಾರ ಕೆಲವು ವಚನಗಳನ್ನು ಬರೆದಿದ್ದಾನೆ. ಈತನ ವಚನಗಳ ಅಂಕಿತ ತ್ರಿಪುರಾಂತ ಲಿಂಗ. ಆದರೆ ಕಿನ್ನರಿ ಜೋಗಿಗಳನ್ನೆ ಕೇಳಿದಾಗ ಅವರು ಹೇಳುವ ಪ್ರಕಾರ ಮಹಾಭಾರತದ ಮಧ್ಯಮ ಪಾಂಡವ ಅರ್ಜುನನೆ ಇವರ ಮೂಲಗುರು. ಅವನಿಂದ ಜೋಗಿಗಳಿಗೆ ದೀಕ್ಷೆ ಯಾಯಿತು ಎಂಬುದು ಅವರ ಹೇಳಿಕೆ. ಹೌದು ಅವರು ಇಂದಿಗೂ ಕೂಡ ಅರ್ಜುನನ ಕುರಿತು ಹಲವಾರು ಕಾವ್ಯಗಳನ್ನು ಹಾಡುವುದು ಕಂಡುಬರುತ್ತದೆ. ಈ ಅರ್ಜುನ ಜೋಗಿ

ಕಾವ್ಯಗಳನ್ನು ಇಂದಿಗೂ ಹಾಡುವುದನ್ನು ಕಂಡರೆ ಅವರು ಹೇಳುವ ಕಥೆಗಳು ಸತ್ಯಕ್ಕೆ ಹತ್ತಿರವಾಗಿದೆ ಎನಿಸುತ್ತವೆ. ಆದರೆ ಪ್ರಸ್ತುತ ಹಂಡಿಜೋಗಿ ಸಮುದಾಯದ ಮುಖಂಡರು ಹೇಳುವಂತೆ ಜೋಗಿಗಳು ಭೈರವನ ಆರಾಧಕರು ಶಿವನಿಂದ ಕಿನ್ನರಿವಾದನವನ್ನು ಪಡೆದಿದ್ದಾರೆಂದು ತಿಳಿದುಬರುತ್ತದೆ. ಅವರು ಹೇಳುವ ಕಥೆ ಈ ರೀತಿಯಾಗಿ ಕಂಡುಬರುತ್ತದೆ.

ಸುಂದರವಾದ ಮುಖವುಳ್ಳ ಗಂಗೆಯನ್ನು ನೋಡಿದ ಶಿವ ಅವಳನ್ನು ಮೆಚ್ಚಿಸಲು ಜೋಗಿಯ ವೇಷಧರಿಸಿಕೊಂಡು ಹೋಗುತ್ತಾನೆ. ಈ ವೇಷವನ್ನು ನೋಡಿದ ಗಂಗೆಗೆ ಸಿಟ್ಟು ಬರುತ್ತದೆ. ಆಗ ಜೋಗಿ ವೇಷಧರಿಸಿಕೊಂಡಿದ್ದ ಶಿವ ತನ್ನ ನಿಜರೂಪವನ್ನು ತೋರಿಸುತ್ತಾನೆ. ತಾನು ತೊಟ್ಟುಕೊಂಡಿದ್ದ ವೇಷ ಉಳಿಸುವ ಸಲುವಾಗಿ ತನ್ನ ಮೇಲಿನ ಬೆವರಿನ ಮಣ್ಣನ್ನು ತೆಗೆದು ಒಬ್ಬ ಮನುಷ್ಯನನ್ನು ಸೃಷ್ಟಿಸಿ ತಾನು ಹಾಕಿರುವ ಜೋಗಿವೇಷವನ್ನು ಮನುಷ್ಯನಿಗೆ ಕೊಟ್ಟು ಅದರ ಜೊತೆಗೆ ಕಿನ್ನರಿ ವಾದ್ಯವನ್ನು ಕೊಟ್ಟು ಭೂಮಿಯ ಮ್ಯಾಲೆ ಸಂಚಾರ ಮಾಡೆಂದು ಹಾರೈಸಿದ. ಇಂದಿಗೂ ಕೂಡ ಜೋಗಿಗಳು ತಮ್ಮ ಸುಂದರವಾದ ವೇಷಭೂಷಣಗಳನ್ನು ತೊಟ್ಟುಕೊಂಡು ಕೈಯಲ್ಲಿ ಕಿನ್ನರಿ ವಾದ್ಯವನ್ನು ಹಿಡಿದುಕೊಂಡು ತಮ್ಮ ಕಲೆ ಪ್ರದರ್ಶನ ಮಾಡುವುದನ್ನು ನಾವು ಕಾಣುತ್ತೇವೆ.

ಇವೆಲ್ಲವನ್ನು ಮೀರಿ ಇನ್ನೂ ಒಂದು ಅಭಿಪ್ರಾಯವನ್ನು ಡಾ. ಹಿ.ಚಿ. ಬೋರಲಿಂಗಯ್ಯ ಅವರು ಬರೆದಿರುವ ಕರ್ನಾಟಕ ಜನಪದ ಕಲೆಗಳ ಕೋಶ ಪುಟ ೧೨೩ರಲ್ಲಿ ಈ ರೀತಿಯಾಗಿ ಹೇಳಲಾಗಿದೆ. ಕಿನ್ನರಿ ಕೊಟ್ಟವನು ಅರ್ಜುನನು ಅಲ್ಲ, ಶಿವನು ಅಲ್ಲ, ಅದನ್ನು ಜೋಗಿ ಮಠದ ಸಿದ್ದರು ಕೊಟ್ಟರು ಎಂದು ತಿಳಿಸಿದ್ದಾರೆ.

ಆದರೆ ನಾನು ಕ್ಷೇತ್ರಕಾರ್ಯದಲ್ಲಿ ಕಲಾವಿದರನ್ನು ಸಂದರ್ಶಿಸಿದಾಗ ನನಗೆ ಅವರ ಕಾವ್ಯಗಳಲ್ಲಿ ಕಂಡುಬಂದಿದ್ದು ಪಾಂಡವರ ಕುರಿತು ಅದರಲ್ಲಿ ವಿಶೇಷವಾಗಿ ಅರ್ಜುನ ಜೋಗಿ ಕಾವ್ಯಗಳು ಅರ್ಜುನನ ಕುರಿತು ಇವರು ಹಾಡುವ ಕಾವ್ಯಗಳನ್ನು ನೋಡಿದರೆ ಇವರ ಗುರು ಅರ್ಜುನ ಇವರಿಗೆ ಕಿನ್ನರಿ ವಾದ್ಯವನ್ನು ಕೊಟ್ಟವನು ಅರ್ಜುನನೆ ಎಂದು ಹೇಳಬಹುದು.

ಡಬ್ಬಾಜೋಗಿ, ಬಳೆಗಾರ ಜೋಗಿ ಇನ್ನು ಮುಂತಾದ ಹೆಸರುಗಳಿಂದ ಕರೆಸಿಕೊಳ್ಳುವ ಹಂಡಿಜೋಗಿ ಸಮುದಾಯದವರು ಮೂಲತಃ ಎಲ್ಲಿಯವರು ಎಲ್ಲಿಂದ ಬಂದವರು ಮತ್ತು ಯಾವಾಗ ಬಂದರೆಂದು ಖಚಿತವಾಗಿ ಹೇಳಲು ಸಾಧ್ಯವಿಲ್ಲ. ಆದರೆ ಸಮುದಾಯದ ಹಿರಿಯ ಮುಖಂಡರನ್ನು ವಿಚಾರಮಾಡಿದಾಗ ಕರ್ನಾಟಕದ ಬೆಳಗಾವಿ ಜಿಲ್ಲೆಯ ರಾಮನಗರದಲ್ಲಿರುವ ಹಂಡಿ ಬಡಿಗನಾಥ ಮಠ ತಮ್ಮ ಮೂಲಮಠವೆಂದು, ಚಿತ್ರದುರ್ಗದ ಮೊಳಕಾಲ್ಮೂರು ಹತ್ತಿರದ ನುಂಕೆವಲೆ ಮಠ ಮತ್ತು ದಕ್ಷಿಣ ಕನ್ನಡ ಜಿಲ್ಲೆ ಕದ್ರಿಮಠಗಳು ಇನ್ನು ಹಲವಾರು ಜೋಗಿಮಠಗಳು ಇರುವುದು ಕಂಡುಬರುತ್ತದೆ. ಮತ್ತು ಎರಡು ಮೂರು ತಲೆಮಾರುಗಳಿಂದ ಕರ್ನಾಟಕಕ್ಕೆ ಬಂದಿರಬಹುದೆಂದು ತಿಳಿದುಬರುತ್ತದೆ. ಇವರು ಮಾತನಾಡುವ ಭಾಷೆ ಮರಾಠಿಯಾಗಿರುವುದರಿಂದ ಕರ್ನಾಟಕಕ್ಕೆ ವಲಸೆ ಬಂದಿರಬೇಕು ಎನಿಸುತ್ತದೆ.

ಕರ್ನಾಟಕದ ಎಲ್ಲಾಕಡೆ ಕಂಡುಬರುವ ಇವರು ಹೈದರಾಬಾದ್ ಕರ್ನಾಟಕದ ಬಳ್ಳಾರಿ ಜಿಲ್ಲೆಯ ಕುರುಗೋಡದಲ್ಲಿ ಮಾತ್ರ ಹೆಚ್ಚಾಗಿ ಕಂಡುಬರುತ್ತಾರೆ.

ಕುರುಗೋಡದಲ್ಲಿ ಇವರು ಹೆಚ್ಚಾಗಿ ಕಂಡು ಬಂದರು ಸಹ ಭಿಕ್ಷಾಟನೆಗಾಗಿ ಹೈದರಾಬಾದ್ ಕರ್ನಾಟಕ ತುಂಬೆಲ್ಲ ಸಂಚಾರ ಮಾಡುತ್ತಾರೆ.

**೪.೨. ಕೊರಮ ಸಮುದಾಯದ ಹಿನ್ನೆಲೆ**

ಕೊರಮ ಸಮುದಾಯದ ಇತಿಹಾಸವನ್ನು ಕುರಿತು ಕೆಲವು ಪೌರಾಣಿಕ ಕಥೆಗಳು ಹುಟ್ಟಿಕೊಂಡಿವೆ. ನಿಸರ್ಗದ ನಿಗೂಢತೆಗೆ ಉತ್ತರ ಸಿಗದೆ ಇದ್ದಾಗ ಆ ಎಲ್ಲವನ್ನು ಧರ್ಮ ಹಾಗೂ ದೇವರ ಹೆಸರಿನಲ್ಲಿ ನಂಬಿ ಜನ ಅದರ ನೆರಳಲ್ಲಿ ಬದುಕಿದರು. ಅಂತಹ ನಿಗೂಢ ಅಂಶಗಳ ಬಗೆಗೆ ಅಪಾರವಾದಂತಹ ಭಯ, ಭಕ್ತಿ, ಗೌರವಗಳನ್ನು ಬೆಳಸಿಕೊಂಡರು. ಮನುಷ್ಯನ ಹುಟ್ಟು ಸಾವಿಗೆ ಬದುಕಿಗೆ ಎಲ್ಲ ಆಗು ಹೋಗುಗಳಿಗೆ ಈ ದಿವ್ಯ ಶಕ್ತಿಯೇ ಕಾರಣವೆಂದು ನಂಬಿದರು.

ಹುಟ್ಟು ಸಾವಿಗೆ ಜನಪದರ ಬಳಕೆಗಳೆ ಅನೇಕ ರೂಪದ ಕಥೆ ಕಾವ್ಯಗಳಾಗಿ ರೂಪುಗೊಂಡಿವೆ. ಈ ನಿಟ್ಟಿನಲ್ಲಿ ನೋಡುವುದಾದರೆ ಕೊರಮ ಸಮುದಾಯದ ಮೂಲದ ಕುರಿತು ಅನೇಕ ಐತಿಹ್ಯಗಳಿವೆ.

ಜಾನಪದರು 'ಕೊರಮ' ಸಮುದಾಯದ ಹುಟ್ಟು ಕುರಿತು ರಾಮಾಯಣ, ಮಹಾಭಾರತ, ಭಾಗವತ ಮುಂತಾದವುಗಳಿಗೆ ಜೋಡಣೆ ಮಾಡಿದ್ದಾರೆ. ಜಾತಿಯ ಹುಟ್ಟು ದೈವ ನಿರ್ಮಿತವಾದದ್ದು ಎಂದು ಅವರ ನಂಬಿಕೆಯಾಗಿರುವುದು ಅನೇಕ ಕಥೆಗಳಲ್ಲಿ ಕಂಡುಬರುತ್ತದೆ. ಅಂತಹ ಕಥೆಗಳಲೊಂದು ಕೊರಮ ಸಮುದಾಯದ ಹಿರಿಯ ಮುಖಂಡ, ಹಿರಿಯ ಶಹನಾಯಿ ಮೇಳ ಕಲಾವಿದರಾದ ಶತಾಓ ಬಜಂತ್ರಿ, ಕಾಸರ ಬೋಸಗಾ(ಕಲಬುರ್ಗಿ) ಇವರು ಹೇಳುವ ಪಾರ್ವತಿ ಕೊರವಂಜಿಯ ಕಥೆ ಪರಮಾತ್ಮನು ಪಾರ್ವತಿಯ ತಪಸ್ಸನ್ನು ಪರೀಕ್ಷಿಸಲು ಹಲವಾರು ವೇಷಗಳನ್ನು ಹಾಕುತ್ತಾನೆ. ಅಂತವುಗಳಲ್ಲಿ ಕೊರವಂಜಿಯ ವೇಷವು ಒಂದು. ಆ ಕೊರವಂಜಿಯ ಬಳುವಳಿಯೆ ಇಂದಿನ ಕೊರಮ ಸಮುದಾಯದವರು ಎಂದು ಹೇಳಿಕೊಳ್ಳುತ್ತಾನೆ.

ಕೊರಮರು ಮಹಾಭಾರತದಲ್ಲಿ ಬರುವ ಧರ್ಮರಾಜನ ವಂಶದವರೆಂದು ತಿಳಿಸುವ ಒಂದು ಕಥೆ ಈ ರೀತಿಯಾಗಿ ಕಂಡುಬರುತ್ತದೆ. ತಮ್ಮ ತಮ್ಮಂದಿರ ಜೊತೆ ಹನ್ನೆರಡು ವರ್ಷ ವನವಾಸಕ್ಕೆ ಹೋದ ಸಂದರ್ಭದಲ್ಲಿ ಧರ್ಮರಾಯರನ್ನು ಪ್ರೀತಿಸಿದ ಒಬ್ಬ ಹೆಣ್ಣುಮಗಳು ಕಣಿ ಹೇಳುವವಳ ವೇಷಧರಿಸಿಕೊಂಡು ಹೋಗಿ ಅವನನ್ನು ಒಲಿಸಿದ್ದಳಂತೆ ಆಕೆಯ ಸಂತಾನವೇ ಇಂದಿನ ಕೊರಮ ಸಮುದಾಯದವರೆಂದು ತಿಳಿದುಬರುತ್ತದೆ.

ಅರ್ಜುನನ ತಪಸ್ಸನ್ನು ಪರೀಕ್ಷೆ ಮಾಡಲು ಶಿವ ಕಿರಾತ ವೇಷಧರಿಸಿದನು. ಪಾರ್ವತಿ ದೇವಿಯು ಕಿರಾತೆಯ ರೂಪಧರಿಸಿಕೊಂಡಳು ಆ ಕಿರಾತೆಯೇ ಕೊರವಿಯೆಂದು ಅವಳ ವಂಶದವರೆ ಕೊರಮರೆಂದು ಮತ್ತೊಂದು ಕಥೆ.

ಒಮ್ಮೆ ಬಳೆಮಲ್ಹಾರ ಬಗಲಲ್ಲಿ ಹಾಕಿಕೊಂಡು ಎದೆ ಮೇಲೆ ಲಿಂಗ ಹಾಕಿಕೊಂಡು ಕಟ್ಟೆಕೆರೆ ಕಡೆ ಹೋಗುತ್ತಿರುವಾಗ ಕಟ್ಟೆಕೆರೆ ಮೇಲೆ ಬೇರೆ ಬೇರೆ ಹದಿನೆಂಟು ಜಾತಿಯವರು ಜಳಕ ಮಾಡುತ್ತಿದ್ದರು ಆ ಜಳಕ ಮಾಡುತ್ತಿರುವವರನ್ನು ನೋಡಿಕೊಂಡು ನಿಂತುಬಿಡುತ್ತಾನೆ. ಆಗ ಕಟ್ಟೆಕೆರೆಯ ಬೇರೆ ಬೇರೆ ಸಮುದಾಯದವರು ಜಳಕ ಮಾಡಿಕೊಂಡು ಇವನನ್ನು ಬಿಟ್ಟು ಅವರೆಲ್ಲ ದೇವರ ಹತ್ತಿರ ವರ ಪಡೆದುಕೊಳ್ಳಲು ಹೋದರು. ಅವನಿಗೆ ನೀರಿನ ಕಟ್ಟೆ ಸಿಗುತ್ತೆ, ಬಳೆ ಮಲ್ಹಾರ (ಬಳೆ ಜೋಡಿಸಿರುವುದು) ಕೆಳಗೆ ಇಟ್ಟು ನೀರಿನೊಳಗೆ ಇಳಿದು ಬಿಡುತ್ತಾನೆ. ಇವನು ನೀರಿನೊಳಗೆ ಇಳಿದು ಮೀನು ಹಿಡಿಯುವುದನ್ನು ಉಪ್ಪುಗಲರ ಶೆಟ್ಟಿಯವನು ನೋಡಿಬಿಡುತ್ತಾನೆ. ಆಗ ಉಪ್ಪುಗಲರ ಶೆಟ್ಟಿಯವರು ಬಳೆಮಲ್ಹಾರವನ್ನು ಕೊರಳಿಗೆ ಹಾಕಿಕೊಂಡು ಮೀನುಗಳನ್ನು ಪೋಣಿಸಿ ಸೊಂಟಕ್ಕೆ ಕಟ್ಟಿಕೊಂಡು ಇವನು ಕೂಡ ದೇವರ ಹತ್ತಿರ ಹೋದನು. ಅಷ್ಟೊತ್ತಿಗಾಗಲೆ ಎಲ್ಲರಿಗೂ ಒಂದೊಂದು ಜಾತಿ ಮತ್ತು ಭಾಷೆ ಕೊಟ್ಟು ಕಳುಹಿಸಿದ್ದ. ತದನಂತರ ಹೋದ ಇವನು ಕೂಡ ದೇವರ ಹತ್ತಿರ ವರ ಕೇಳಲು ನಿಂತನು. ಆಗ ದೇವರು ಇವನನ್ನು ಕೊರಮ ಮೀನು ಎಂದು ಹೇಳುತ್ತಾನೆ. ತಕ್ಷಣ ಇವನು ದೇವರ ಹತ್ತಿರ ಪ್ರಶ್ನೆ ಮಾಡುತ್ತಾನೆ. ನನ್ನ ಮುಂದಿನ ಜೀವನ ಏನು ಮಾಡೋದು ಸ್ವಾಮಿಗಳೇ? ಎಂದ ಇದಕ್ಕೆ ಪರಿಹಾರಕ್ಕಾಗಿ ಶಿವನ ಬಳಿಹೋಗಿ ತ್ರಿಶೂಲ ಕೇಳುವುದು ಶ್ರೀರಾಮಚಂದ್ರನ ಬಳಿಹೋಗಿ ಬಾಣ ತೆಗೆದುಕೊಳ್ಳುವುದು ಈ ಬಾಣವೆ ಅಂಬುಗತ್ತಿ. ಇವೆರಡು ತೆಗೆದುಕೊಂಡು ಚಾಮುಂಡಮ್ಮನ ಹತ್ತಿರ ಹೋಗಿ ಕಣಿ ಕುಕ್ಕೆ ತೆಗೆದುಕೋ ಎಂದು ಸ್ವಾಮಿ ಹೇಳಿದ. ಬೆಟ್ಟಕ್ಕೆ ಹೋಗಿ ಬಿದಿರು ತರುವುದು ಹೊರಿಯುವುದು ಮತ್ತು ನಮ್ಮ ಭಾಷಾ ಹೆಂಗೆ ಸ್ವಾಮಿಗಳೆ ಎಂದು ಕೇಳಿದಾಗ ಆಗ ದೇವರು ಹೇಳಿದ ಒಟ್ಟು ಭಾಷೆಗಳು ಸೇರಿ ಕುಲಹದಿನೆಂಟು ಭಾಷೆಯಾಗುತ್ತೆ ನಿನ್ನ ಭಾಷೆ ನೀನು ಮೀನುಗಳನ್ನು ಹಿಡಿದುಕೊಂಡು ಬಂದು ಮಹಾತಪ್ಪು ಮಾಡಿದಿ ಆದ ಕಾರಣ ಆ ತಪ್ಪಿಗಾಗಿ ಸಂತೆಯಲ್ಲಿ ಸಾವಿರ ರೂಪಾಯಿಗಳು ಬಂದರೂ ಸಹ ಸಂಜೆಯೊಳಗೆ ತೀರಿಹೋಗಲಿ ಎಂದು ಶಾಪ ಕೊಟ್ಟನು. ಇಂದಿಗೂ ಕೂಡ ಈ ಕುಲಕಸಬು ಮಾಡುವ ಸಮುದಾಯದ ಹಿರಿಯ ಮುಖಂಡರು ಹೇಳುವ ಪ್ರಕಾರ ನಾವು ಎಷ್ಟೇ ದುಡಿದರೂ ಸಹ ಸಂಜೆಯೊಳಗೆ ನಮ್ಮ ಕೈಯಲ್ಲಿ ದುಡ್ಡು ಖಾಲಿಯಾಗಿರುತ್ತೆ ಅಂತ ಇವರು ಹೇಳುವ ಪ್ರಕಾರ ಆ ದೇವರು ಶಾಪಕೊಟ್ಟಿದ್ದಕ್ಕೆ ನಮ್ಮ ಕೈಯಲ್ಲಿ ದುಡ್ಡು ನಿಲ್ಲುತ್ತಿಲ್ಲ ಎಂದು.

ಈ ಮೇಲ್ಕಾಣಿಸಿದ ಕೊರಮ ಸಮುದಾಯದ ಇತಿಹಾಸ ಕುರಿತು ಸಮುದಾಯದ ಹಿರಿಯ ಮುಖಂಡರು ಹೇಳಿರುವ ಈ ಮೇಲಿನ ಎಲ್ಲಾ ಕಥೆಗಳಲ್ಲಿ ಶಿವ-ಪಾರ್ವತಿಗೆ ನಿಶಡುವಿಗೆ ಸಂಬಂಧಪಟ್ಟಂತಹ ಕಥೆಗಳಾಗಿರುವ ಕೊರಮರ ದ್ರಾವಿಡ ಮೂಲವನ್ನು ಸೂಚಿಸಿದರೆ ಮಹಾಭಾರತದ ಅರ್ಜುನ ಧರ್ಮರಾಯ ಮುಂತಾದ ಭಾಗವತದ ಕಥೆಗಳು ಆರ್ಯರ ಮೂಲವನ್ನು ತಿಳಿಸಲು ಪ್ರಯತ್ನಿಸುತ್ತಿವೆ. ಈ ಕಾರಣಗಳಿಂದಾಗಿಯೆ ಪರಿಶೋಧಕ್ಕೆ ವಿದ್ವಾಂಸರಲ್ಲಿ ಕೊರಮರು ದಕ್ಷಿಣ ಭಾರತದ ಬುಡಕಟ್ಟಿಗೆ ಸೇರಿದವರೋ ಅಥವಾ ಉತ್ತರಕಡೆಯಿಂದ ಬಂದಿರಬಹುದು ಎನ್ನುವ ಬಗೆಗೆ ಬೇರೆ ಬೇರೆ ಅಭಿಪ್ರಾಯಗಳು ಹುಟ್ಟಿಕೊಂಡಿವೆ. ಆದರೆ ಕೊರಮ ಸಮುದಾಯದಲ್ಲಿ ಕಂಡುಬರುವ ಕೆಲವು ಸಂಸ್ಕೃತಿಗಳು,

ಸಂಪ್ರದಾಯಗಳು, ರೀತಿ–ನೀತಿಗಳು ಅವರ ವೃತ್ತಿಗಳು, ಜೀವನದ ವಿಧಾನ, ಆಡುವ ಭಾಷೆ ಇವುಗಳನ್ನು ನೋಡಿದಾಗ ಇವರು ದ್ರಾವಿಡ ಪರಂಪರೆಯಿಂದ ಬಂದವರೆಂದು ಸ್ಪಷ್ಟವಾಗುತ್ತದೆ.

ಕೊರಮ ಸಮುದಾಯದವರ ಮೂಲ ಕುರಿತು ಬಹಳಷ್ಟು ಅಧ್ಯಯನಗಳು ಆಳವಾಗಿ ನಡೆದಿಲ್ಲವೆಂದು ಹೇಳಬಹುದು ಅವರ ಮೂಲ ಕುರಿತು ಈ ಕಥೆಗಳನ್ನು ಹೊರತುಪಡಿಸಿ ಬೇರೆಯಾವ ಮೂಲ ಆಕಾರ ಸಾಮಾಗ್ರಿಗಳು ಕೊರಮ ಸಮುದಾಯದವರ ಮೂಲ ಕುರಿತು ಸಿಕ್ಕಿಲ್ಲ.

ಇವರ ಮೂಲ ಮತ್ತು ವಲಸೆ ಕುರಿತು ಹೇಳುವುದಾದರೆ ಕೊರಮ ಸಮುದಾಯದವರು ಮೂಲತಃ ಬುಡಕಟ್ಟಿನವರಾಗಿದ್ದು, ತಮ್ಮ ಜೀವನ ನಡೆಸುವುದಕ್ಕಾಗಿ ಒಂದು ಪ್ರದೇಶದಿಂದ ಬೇರೆ ಬೇರೆ ಪ್ರದೇಶಕ್ಕೆ ಅಲೆಮಾರಿಗಳಾಗಿ ಸಂಚಾರ ಮಾಡುತ್ತಿದ್ದವರು. ಆಂದ್ರ ಪ್ರದೇಶ ಮತ್ತು ತಮಿಳುನಾಡಿನಲ್ಲಿ ಬಹಳಷ್ಟು ಜನ ಕಂಡುಬರುವ ಕೊರಮರು ಯಾವ ರಾಜ್ಯದಿಂದ ವಲಸೆ ಬಂದಿದ್ದಾರೆ ಎಂದು ಹೇಳುವುದು ಕಷ್ಟ. ಆದರೆ ಕೊರಮರು ಮಾತನಾಡುವ ಭಾಷೆ ಮತ್ತು ಅವರ ಆಚಾರ–ವಿಚಾರ ಜೀವನ ಶೈಲಿಯನ್ನು ನೋಡಿದರೆ ಇವರು ದಕ್ಷಿಣ ಭಾರತದ ತಮಿಳುನಾಡಿನಿಂದ ವಲಸೆ ಬಂದಿರಬಹುದೆಂದು ತಿಳಿದುಬರುತ್ತದೆ.

ತಮ್ಮ ಜೀವನ ನಡೆಸಲು ಅನಿವಾರ್ಯ ಕಾರಣಗಳಿಂದ ದೇಶದ ಬೇರೆ ಬೇರೆ ಪ್ರದೇಶಗಳಿಗೆ ಚದುರಿ ಹೋಗಿದ್ದಾರೆ. ಇವರು ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆ ಹೆಸರುಗಳಿಂದ ಕರೆಸಿಕೊಳ್ಳುತ್ತಾರೆ. ಥರ್ಸ್ಟ್‌ನ್ ಅವರು ತಿಳಿಸುವಂತೆ ಉತ್ತರ ಹಾಗೂ ದಕ್ಷಿಣ ಅರ್ಕಾಚಗಳಲ್ಲಿ ಕೊರಚ, ಕೊರ್ಚ ಎಂದು ಕರೆಯುತ್ತಾರೆ ಆದರೆ ಅಕ್ಕಪಕ್ಕದ ಜಿಲ್ಲೆಗಳಲ್ಲಿ ಅವರನ್ನೆ ಉರಕುಲ ಅಥವಾ ಯರಕಲ ಎಂದು ಕರೆಸಿಕೊಳ್ಳುತ್ತಾರೆ. (ಮಾನಪಡೆ ಬಿ. ಮಲ್ಲಿಕಾರ್ಜುನ ಕೊರಮ ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು ಪುಟ–೧೨ ೨೦೦೮) ಇಲ್ಲಿ ಬಂದ ಪಂಗಡದ ಜನರನ್ನು ಬೇರೆ ಬೇರೆ ಹೆಸರಿನಿಂದ ಕರೆಯುತ್ತಿದ್ದ ಬಗೆಗೆ ಮತ್ತು ತಮಿಳುನಾಡಿನ ಕೆಲವು ಭಾಗಗಳಲ್ಲಿ ಇವರು ವಾಸವಾಗಿದ್ದ ಅಂಶಗಳನ್ನು ಈ ದಾಖಲೆ ಸ್ಪಷ್ಟಪಡಿಸುತ್ತದೆ.

ಹೀರೇಂದ್ರ ಕೆ. ರಕ್ಷಿತ ಅವರು ಈಡಿಗರು, ಬೆಸ್ತರು ಹಾಗೂ ಯರಕುಲರು ತಮಿಳುನಾಡಿನಿಂದ ವಲಸೆ ಬಂದವರು ಎಂದು ತಿಳಿಸುತ್ತದೆ.

ಆರ್.ಇ. ಎಂಥೋವನ್ ಅವರು ಮೈಸೂರು ಮತ್ತು ಮದ್ರಾಸ್ ಪ್ರಾಂತ್ಯದಲ್ಲಿದ್ದ ಇವರ ವಾಸದ ನೆಲೆಗಳನ್ನು ಹೇಳುವುದರ ಜೊತೆಗೆ ಅಲ್ಲಿ ಅವರನ್ನು ಕುರುವಾಸ್ಸು ಎಂದು ಕರೆಯುತ್ತಾರೆಂಬ ಅಂಶ ಅವರ ಮೂಲದ ಮೇಲೆ ಹೆಚ್ಚು ಬೆಳಕು ಚೆಲ್ಲುತ್ತದೆ.

ಬೊಂಬಾಯಿ ಪ್ರಾಂತ್ಯದ ಕೊರಮ ಸಮುದಾಯದ ಬಗೆಗೆ ಬರೆದಿರುವ ಮೈಕೇಲ್ ರೆನಡಿ ಅವರು ಹೇಳಿರುವ ಹೆಸರುಗಳಿಗಿಂತ ಸ್ವಲ್ಪ ಭಿನ್ನವಾಗಿದೆ. ಸಾಂತಿಪಾಡಿಯ, ಕಾಪಾಡಿಯ, ಮ್ಯಾನಪಾಡಿಯ ಎನ್ನುವ ಈ ಹೆಸರುಗಳು ಸಾತಪಾಡಿ, ಕಾಪಾಡಿಯ, ಮ್ಯಾನಪಾಡಿಯ ಎನ್ನುವ ಈ ಹೆಸರುಗಳು

ಸಾತಪಾಡಿ, ಕಾವಾಡಿ, ಮಾನಪಾಡಿ, ರೂಪಕಿಂತ ಪೂರ್ವದವಾನಿಗಿದ್ದರೂ ನಂತರ ರೂಪಾಂತರ ಗೊಂಡಿರುವ ಸಾಧ್ಯತೆ ಇದೆ.

ಹಂಪ ನಾಗರಾಜಯ್ಯ ಅವರು ಯರಕುಲ, ಕೈಪಾಡಿ ಹಾಗೂ ಕೋರ್ಟ ಎಂಬ ಇನ್ನು ಹಲವಾರು ಭಾಷೆಗಳಿವೆ ಎಂದಿದ್ದಾರೆ. ಕೈಪಾಡಿ, ಕೋರ್ಟ, ಹಾಗೂ ಯರಕುಲ ಇವೆಲ್ಲ ಒಂದೆ. ಬುಡಕಟ್ಟನ್ನು ಗುರುತಿಸಲು ಹೆಸರುಗಳು ತೆಲುಗು ನಾಡಿನಲ್ಲಿ ಯರಕುಲ ಎಂದು ಗುರುತಿಸಿದರೆ ಮಹಾರಾಷ್ಟ್ರದಲ್ಲಿ ಕೈಪಾಡಿಗಳೆಂದು ಕರೆಸಿಕೊಳ್ಳುತ್ತಾರೆ.

ಒಟ್ಟಾರೆಯಾಗಿ ತಿಳಿಸುವುದಾದರೆ ಬುಡಕಟ್ಟು ಕೊರಮ ಸಮುದಾಯದ ಮೂಲಸ್ಥಾನ ತಮಿಳುನಾಡಿನ ಒಂದು ಪರ್ವತ ಪ್ರಾಂತವಾಗಿದೆ. ಅದು ಕೊಯಂಬತ್ತೂರು, ತಂಜಾವೂರು ದಕ್ಷಿಣ ಅರ್ಕಾಟ ಜಿಲ್ಲೆಗಳಲ್ಲಿಯ ಗುಡ್ಡಗಾಡುಗಳ ಒಂದು ಭಾಗ ಎಂದು ಹೇಳಬಹುದು. ಕೊರಮರು ಮಾತನಾಡುವ ಭಾಷೆ ತಮಿಳುನಾಡಿನ ಉಪಭಾಷೆಯಾದ ಕುರ್‍ರ ಕುಳುವ ಭಾಷೆಯಾಗಿರುವಂತೆ ಕಾಣುತ್ತದೆ. ಹೀಗೆ ಹೊಟ್ಟೆಪಾಡಿಗೋಸ್ಕರ ಅಲೆಮಾರಿ ಜೀವನ ನಡೆಸುತ್ತಿರುವ ಕೊರಮರನ್ನು ಹೈದರಾಬಾದ್–ಕರ್ನಾಟಕದಲ್ಲಿ ಕೊರಮ, ಕೊರಚ, ಕೊರವ ಕೊರವರ, ಭಜಂತ್ರಿ, ಕುಂಚೆಕೊರವ ಇನ್ನು ಮುಂತಾದ ಹೆಸರುಗಳಿಂದ ಕರೆಯುತ್ತಾರೆ. ಇವರ ವೃತ್ತಿಗಳು ಕಣಿಹೇಳುವುದು, ಬಾರಿಗೆ, ಪುಟ್ಟಿ ತಯಾರಿಸುವುದು, ಬಾರ್ಲ್ಲು ಎಣಿಯುವುದು ಮತ್ತು ಶಹನಾಯಿ ಮೇಳ ನುಡಿಸುವುದು.

ಅಲೆಮಾರಿ ಕೊರಮ ಸಮುದಾಯದವರು ಪ್ರಸ್ತುತ ಬೇರೆ ಬೇರೆ ಜಾತಿ, ಸಮುದಾಯಗಳೊಂದಿಗೆ ಸಹಬಾಳ್ವೆ ಮಾಡುತ್ತಿದ್ದಾರೆ. ಹೀಗಾಗಿ ಅನ್ಯ ಸಮುದಾಯಗಳ ಪ್ರಭಾವಕ್ಕೆ ಒಳಗಾಗಿ ತಮ್ಮ ಮೂಲದ ಎಷ್ಟೋ ಅಂಶಗಳನ್ನು ಕಳೆದುಕೊಳ್ಳುತ್ತಿದೆಯೇನೋ ಅನಿಸುವುದು ಆದರೂ ಸಹ 'ಕೊರಮ'ರ ಸಮುದಾಯವು ತನ್ನ ಮೂಲವನ್ನು ಉಳಿಸಿಕೊಳ್ಳಲು ನಿರಂತರವಾದ ಹೋರಾಟವನ್ನು ಮಾಡುತ್ತಿರುವುದನ್ನು ನೋಡಬಹುದು.

### ೪.೩. ಬುಡ್ಗಜಂಗಮ ಸಮುದಾಯದ ಹಿನ್ನಲೆ

ನಮ್ಮ ನಾಡಿನ ಕಲೆ ಸಂಸ್ಕೃತಿಯನ್ನು ತನ್ನ ಮಡಿಲಿನಲ್ಲಿ ಇಟ್ಟುಕೊಂಡು ಶೋಧಿಸಿಕೊಂಡು ಬಂದಂತ ಹಲವಾರು ಅಲೆಮಾರಿ ಸಮುದಾಯಗಳಲ್ಲಿ ಈ ಬುಡ್ಗ ಜಂಗಮ ಸಮುದಾಯವು ಕೂಡ ಒಂದು. ನಾಡು ನುಡಿಯ ಜೀವಾಳವಾಗಿರುವ ಇವರು ಭಾರತೀಯ ಸಂಸ್ಕೃತಿಯ ರಾಯಭಾರಿಗಳಾಗಿದ್ದಾರೆ. ಬಹಳಷ್ಟು ಮೊಟ್ಟ ಮೊದಲ ಬಾರಿಗೆ ಗ್ರಾಮೀಣ ಪ್ರದೇಶದ ಜನತೆಗೆ ರಾಮಾಯಣ–ಮಹಾಭಾರತದ ಕಥೆಗಳನ್ನು ವೇಷ, ಶಾಸ್ತ್ರ, ಕೈಚಳಕ ಮತ್ತು ಹಾಡುಗಳ ಮುಖಾಂತರ ಕೃಷ್ಣ–ಪರಮಾತ್ಮ, ರಾಮ–ಲಕ್ಷ್ಮಣ, ಹನುಮಂತ ಮುಂತಾದ ದೇವರುಗಳನ್ನು ಪರಿಚಯಿಸಿದ ಕಲಾವಿದರೆಂದರೆ ಅವರೇ ಬುಡ್ಗಜಂಗಮ ಕಲಾವಿದರು ಎಂದುರೆ ತಪ್ಪಾಗಲಾರದು. ಇವರನ್ನು ಜನಪದರು, ಹಗಲು ವೇಷಗಾರರು, ವೇಷಗಾರರು, ಬಹುರೂಪಿ, ಬುರ್‍ರಕಥೆಯವರು, ಕಥೆ ಹೇಳುವವರು, ಸನ್ಯಾಸಿಗಳು, ಸುಡುಗಾಡಸಿದ್ಧರು ಮತ್ತು ಶಾಸ್ತ್ರ ಹೇಳುವವರು ಇತ್ಯಾದಿ ಹೆಸರುಗಳಿಂದ ಕರೆಯುತ್ತಾರೆ.

ಬುಡ್ಗ ಜಂಗಮ/ಬೇಡಜಂಗಮ ಪದದ ಅರ್ಥದ ವಿಚಾರವಾಗಿ ಅನೇಕ ವಿದ್ವಾಂಸರ ಭಿನ್ನಾಭಿಪ್ರಾಯಗಳು ಕಂಡುಬರುತ್ತವೆ. ಪ್ರೊ. ಬಿ. ರಾಮರಾಜುರವರು ತಮ್ಮ 'ತೆಲುಗು' ಜಾನಪದ 'ಗೇಯ ಸಾಹಿತ್ಯಂ' ಎಂಬ ಕೃತಿಯಲ್ಲಿ 'ಬುಡ್ಗಿಗೆ' ಎಂಬ ವಾದ್ಯವನ್ನು ನುಡಿಸುತ್ತಾ ಕಥೆ ಹೇಳುವ ಜನರನ್ನು ಬುಡ್ಗ ಜಂಗಾಲು ಎಂದು ಕರೆದಿದ್ದಾರೆ.

ಇನ್ನೊಬ್ಬರು ವಿದ್ವಾಂಸರಾದ ಮರುವೂರು ಕೋದಂಡ ರಾಮರೆಡ್ಡಿಯವರು ಬರೆದ "ಮಾಂಡಲಿಕ ಪದಕೋಶಂ" ಎಂಬ ಗ್ರಂಥದಲ್ಲಿ ತಂದನಾ ಕಥೆಗಳನ್ನು ಹೇಳಿ ಜೀವಿಸುವವರನ್ನು ಬುರ್ರಕಥೆಯವರು ಮತ್ತು 'ಬುಡಗೇಲು' ವಾದ್ಯವನ್ನು ನುಡಿಸುತ್ತಾ ಭಿಕ್ಷೆ ಬೇಡುವವರನ್ನು ಬುಡ್ಗ ಜಂಗಾಲ ಜಾತಿಯವರು ಎಂದು ಹೇಳಿದ್ದಾರೆ. ಹಗಲು ವೇಷ ಹಾಕುವ ಜನರನ್ನು ಬುಡ್ಗಜಂಗಾಲ ಎಂದು ಕರೆದಿರುವುದಾಗಿ ಹಗಲು ವೇಷದವರ ಸಂಸ್ಕೃತಿ ಎಂಬ ಪುಸ್ತಕದಲ್ಲಿ ಯೆಳನಾಡು ಅಂಜನಪ್ಪನವರು ದಾಖಲಿಸಿದ್ದಾರೆ. 'ಬುಡ್ಗ ಜಂಗಮ' ಪದದ ಅರ್ಥ ಕುರಿತು ಈ ರೀತಿ ಹೇಳಿದ್ದಾರೆ. ಕನ್ನಡ ಕಸ್ತೂರಿ ಕೋಶವು ಬುಡ ಎಂಬ ಪದಕ್ಕೆ ತಳ, ಆದಿ, ಕೆಳಭಾಗ, ವಂಶ ಇತ್ಯಾದಿ ಅಥಗಳನ್ನು ನೀಡಿದೆ. ಕಿಟ್ಟೆಲ್ ಕೋಶ 'ಬುಡ' ಎಂಬ ಪದಕ್ಕೆ 'ಡಮರು' ಎಂದು ಅರ್ಥೈಸಿದೆ. ಬೇಟೆಗಾರಿಕೆ ಮೂಲಕ ಬುಡರು ಕಾಲಾಂತರದಲ್ಲಿ ಡಮರುದಂತಹ ವಾದ್ಯವನ್ನು ಶೈವೋಪಾಸನೆಗೆ ಬಳಸಿರುವುವಂತೆ ಭಾಸವಾಗುತ್ತದೆ. ಆ ನಂತರ ಡಮರುವಿನ ಬದಲಾಗಿ ಡಿಮ್ಮಿಯಂತ ವಾದ್ಯವನ್ನು ನುಡಿಸುತ್ತ ದೈವಾರಾಧನೆ ಮುಂದುವರೆಸುತ್ತ ದೈವಗಳ ವರ್ಣನೆಯನ್ನು ಪಾತ್ರಗಳ ಮುಖೇನ ವರ್ಣಿಸಿ ಭಿಕ್ಷಾಟನೆಗೆ ಇಳಿದಂತಿದೆ (ನಾಗರಾಜಯ್ಯ ವಡ್ಡಗೇರಿ ಬುಡ್ಗಜಂಗಮ ಸಮುದಾಯ ಡಾ. ಬಿ.ಆರ್. ಅಂಬೇಡ್ಕರ ಸಂಶೋಧನಾ ಸಂಸ್ಥೆ ಬೆಂಗಳೂರು ೨೦೧೬ ಪು. ೫೨). ನಾನಾ ವೇಷಗಳನ್ನು ಹಾಕಿಕೊಂಡು ತಮ್ಮ ಕಲಾಪ್ರದರ್ಶನವನ್ನು ನೀಡುವ ಬುಡ್ಗಜಂಗಮರನ್ನು ಬಹುರೂಪಿಗಳೆಂದು ಕರೆಯುತ್ತಾರೆ. ವಚನಕಾರರಲೊಬ್ಬರಾದ ಬಹುರೂಪಿ ಚೌಡಯ್ಯನು ಮೂಲತಃ ಬುಡಕಟ್ಟು ಜನಾಂಗವಾದ ಬುಡ್ಗಜಂಗಮ ಸಮುದಾಯಕ್ಕೆ ಸೇರಿದವನು. ಇವರನ್ನು ಬಾಳಸಂತರು, ಬುಹುರೂಪಿಗಳು ಮತ್ತು ಹಗಲು ವೇಷಗಾರರಂತಲೂ ಕರೆಯುತ್ತಾರೆ.

ಬುಡ್ಗಜಂಗಮ ಸಮುದಾಯದ ಪದದ ಅರ್ಥ ಕುರಿತು ಮೇಲಿನ ಎಲ್ಲಾ ವಿದ್ವಾಂಸರ ಅಭಿಪ್ರಾಯಗಳನ್ನು ಅಲ್ಲಗೆಳೆಯುವಂತಿಲ್ಲ. ಬುಡ್ಗ ಜಂಗಮ ಪದ ನಿಷ್ಪತ್ತಿ ಮತ್ತು ಅದಕ್ಕೆ ತಮ್ಮದೇ ಆದ ಅರ್ಥ ಕೊಟ್ಟಿರುತ್ತಾರೆ.

ಬಹಳ ಹಿಂದೆಯೇ ಬೇಟೆಗಾರಿಕೆಯಿಂದ ಕವಲೊಡೆದವರು ಬೇಡ ಜಂಗಮರು ಎಂಬುದನ್ನು ಮೇಲ್ನೋಟಕ್ಕೆ ಸರಿ ಎಂದು ಕಂಡುಬಂದರು ಬೇಟೆಯ ಮೂಲಿಗರ ಕಾಡಾಡಿ ಬುಡರು ಎಂಬುದನ್ನು ಅಲ್ಲಗಳೆಯುವಂತಿಲ್ಲ. ಬುಡಗೇ ಬುಡಕಟ್ಟಿನವರು, ಮೂಲನಿವಾಸಿಗಳು, ಗಿರಿಜನರು ಆದಿವಾಸಿಗಳು, ಕಾಲ ಕ್ರಮೇಣ ಬುಡರು ಬುಡ್ಗಜಂಗಾಲರಾದರು ಬೇಡ ಜಂಗಾಲರು, ಬುಡ್ಗ ಜಂಗಾಲರು ಬೇರೆ ಬೇರೆಯಲ್ಲ. ಬುಡ್ಗ (ಚರ್ಮವಾದ್ಯ) ಬೇಟೆ ಮಧ್ಯಮದಿಂದ ಕಾಡು ಹಾಗೂ ನಾಡಿನ ಅಂಚಿನಲ್ಲಿ ಹಲವಾರು ವೇಷಗಳನ್ನು ಹಾಕುತ್ತ ತಮ್ಮ ಕಲಾಪ್ರದರ್ಶನ ನೀಡಿ ಬದುಕು ಸಾಗಿಸಿರುವುದರಿಂದ ಜನಪದದಿಂದ ಈ ಹೆಸರುಗಳು ಲಭ್ಯವಾದವು.

ಆಂಗ್ಲರ ಮತ್ತು ಮುಸ್ಲಿಮರ ದೌರ್ಜನ್ಯಗಳು ನಿರಂತರವಾಗಿ ನಡೆಯುತ್ತಿದ್ದವು ಇವರ ದೌರ್ಜನ್ಯವನ್ನು ತಾಳಲಾರದೆ ಕಾಡಿನಿಂದ ನಾಡಿನತ್ತ ಹೊರಟು ನಿಂತರು. ಆದರೆ ಕಾಡಿನಿಂದ ನಾಡಿನತ್ತ ಹೊರಡುವ ಸಂಧರ್ಭದಲ್ಲಿ ತಮ್ಮ ಜೀವನೋಪಾಸನೆಗಾಗಿ ಹಲವಾರು ಸಾಂಸ್ಕೃತಿಕ ವೇಷಗಳನ್ನು ತೊಟ್ಟುಕೊಂಡು ನಾಡಿನಾದ್ಯಂತ ಒಂದೊಂದು ತಂಡವಾಗಿ ಆ ಕಾಲದ ಘಟನೆಗಳನ್ನು ಮತ್ತು ಧಾರ್ಮಿಕ ಕಥೆಯನ್ನು ತಮ್ಮ ಹಲವಾರು ಪ್ರಕಾರದ ವೇಷಗಳು ಮತ್ತು ಕಲಾಪ್ರಕಾರಗಳ ಮುಖಾಂತರ ಪ್ರಚಾರಮಾಡುವುದರ ಜೊತೆಗೆ ಭಿಕ್ಷಾಟನೆ ಮಾಡುತ್ತ ತಂಡೋಪ ತಂಡವಾಗಿ ದೇಶದ ನಾನಾ ಭಾಗಗಳಲ್ಲಿ ನೆಲಸಿದ್ದಾರೆ. ಅವರು ದೇಶದ ಯಾವುದೇ ಸ್ಥಳದಲ್ಲಿ ನೆಲೆಸಿದ್ದರೂ ಕೂಡ ಸ್ಥಳೀಯ ಭಾಷೆಯಲ್ಲಿ ತಮ್ಮ ಕಲಾಪ್ರದರ್ಶನ ನೀಡಿ ತಮ್ಮ ಜೀವನವನ್ನು ಸಾಗಿಸುತ್ತಿದ್ದಾರೆ. ಈ ಬುಡ್ಗ ಜಂಗಮ ಸಮುದಾಯದವರು ಮೂಲತಃ ಆಂದ್ರಪ್ರದೇಶದವರಾಗಿರುವುದರಿಂದ ಹೈದರಾಬಾದ್ ಕರ್ನಾಟಕದ ಬೀದರ್, ಕಲಬುರ್ಗಿ, ಯಾದಗಿರಿ, ರಾಯಚೂರು, ಬಳ್ಳಾರಿ ಮತ್ತು ಕೊಪ್ಪಳ ಆರು ಜಿಲ್ಲೆಗಳಲ್ಲಿ ಈ ಸಮುದಾಯದವರು ಕಂಡುಬರುತ್ತಾರೆ.

ಬುಡ್ಗ ಜಂಗಮ ಸಮುದಾಯದ ಹಿರಿಯ ಮುಖಂಡರಾದ ರಾಜ್ಯಪ್ರಶಸ್ತಿ ವಿಜೇತರಾದ 'ಬುರ್ರಕಥ' ಲಕ್ಷ್ಮೀಬಾಯಿ ಶಹಪುರ ಇವರು ಹೇಳುವ ಪ್ರಕಾರ ಬುಡ್ಗಜಂಗಮರು ಮೂಲತಃ ಆಂದ್ರಪ್ರದೇಶದವರು ಹೊಟ್ಟೆಪಾಡಿಗೋಸ್ಕರ ಬಹಳ ವರ್ಷಗಳಿಂದ ವಲಸೆ ಬಂದಿರಬಹುದೆಂದು ತಿಳಿದುಬರುತ್ತದೆ. ಪೂರ್ವಕಾಲದಲ್ಲಿ ಆಂದ್ರಪ್ರದೇಶದ ಶೈಲ ಅರಣ್ಯದ ಬಾಗಗಳಲ್ಲಿ ಬೇಟೆಯನ್ನು ಪ್ರಧಾನವಾಗಿ ಇಟ್ಟುಕೊಂಡು ನೆಲೆಸಿರುವ ಬುಡ್ಗ ಜಂಗಮರು ತಂದ ಮಾಂಸಹಾರದ ಸ್ವಲ್ಪ ಭಾಗವನ್ನು ಶಿವನಿಗೆ ಭಕ್ತಿಯಿಂದ ಸಮರ್ಪಿಸಿ ತಾವು ಊಟ ಮಾಡುವುದು ಸಂಪ್ರದಾಯ ಎಂದು ಶ್ರೀ ಕಾಳಹಸ್ತ ಮಹಾತ್ಮವಲ ಎಂಬ ಪುಸ್ತಕದಲ್ಲಿ ೩.೮೮ ಮತ್ತು ೩.೫೦ರಲ್ಲಿ ಉಲ್ಲೇಖಿಸಲಾಗಿದೆ. ಅದೇ ರೀತಿಯಾಗಿ ಇಎನ್.ಆರ್. ವೆಂಕಟೇಶು ಅವರು ವೃತ್ತಿ ಆಹಾರದ ಸಲುವಾಗಿ ಬೇಟೆಯನ್ನು ಆಧಾರವಾಗಿಟ್ಟುಕೊಂಡು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಲಸೆ ಹೋಗುತ್ತ ಅಂದಿನಿಂದ ಇಂದಿನವರೆಗೆ ತಮ್ಮ ಸಮುದಾಯದಲ್ಲಿ ಮುಂದುವರಿಯುತ್ತ ಬಂದಿರುತ್ತದೆ. (ಬಾಲಗುರುಮೂರ್ತಿ, ಪ್ರತಾಪ ಬಹುರೂಪಿ "ಬುಡ್ಗಜಂಗಮ" ಕನ್ನಡ ಪುಸ್ತಕ ಪರಾಧಿಕಾರ ಬೆಂಗಳೂರು ೨೦೦೮ ಪುಟ೧೧) ಇವರು ಮಾತನಾಡುವ ಭಾಷೆ ತೆಲುಗು ಮತ್ತು ಇವರು ಪ್ರದರ್ಶನ ನೀಡುವ ಬುರ್ರೆಕಪ್ಪಾ ಸಂಗೀತ ಹೆಚ್ಚಾನೆಚ್ಚು ಆಂದ್ರಪ್ರದೇಶ ಕಂಡುಬುರುವುದರಿಂದ ಇವರು ಆಂದ್ರ ಪ್ರದೇಶದಿಂದ ಕರ್ನಾಟಕಕ್ಕೆ ಬಂದಿದ್ದಾರೆ ಎಂದು ಹೇಳಬಹುದು.

ಬುಡ್ಗಜಂಗಮ ಸಮುದಾಯದವರ ಬದುಕಿನಲ್ಲಿ ಹಲವಾರು ಮಹಾನ್ ಶಿವಶರಣರ ಮತ್ತು ಮಹಾರಾಜರ ಆಗಮನದಿಂದ ಇವರು ಮಾಡುತ್ತಿರುವ ವೃತ್ತಿಗಳಲ್ಲಿ ಬಹಳಷ್ಟು ಬದಲಾವಣೆಗಳಾದವು. ಕರ್ನಾಟಕ ಮತ್ತು ಆಂಧ್ರಪ್ರದೇಶದಲ್ಲಿ ೧೨ನೇ ಶತಮಾನದ ಬಸವಣ್ಣನವರ ಅನುಯಾಯಿಗಳು ಇವರನ್ನು ಧರ್ಮಪ್ರಚಾರಕ್ಕಾಗಿ ಬಳಸಿಕೊಂಡರು. ಶಿವಾಜಿ ಕಾಲದಲ್ಲಿ ಸ್ವತಂತ್ರ ಹೋರಾಟಕ್ಕೆ ಈ ಕಲಾವಿದರನ್ನು ಬ್ರಿಟಿಷರ ಒಳಧರ್ಮವನ್ನು ತಿಳಿಯಲು ಇವರನ್ನು ಗೂಢಚಾರಿಗಳಾಗಿ ಉಪಯೋಗಿಸಿ ಕೊಂಡಿದ್ದಾರೆ ಎಂದು ತಿಳಿದುಬರುತ್ತದೆ.

## ೪.೪. ಚನ್ನದಾಸರ ಹಿನ್ನೆಲೆ

ಪ್ರತಿಯೊಂದು ಸಮುದಾಯದ ಪರಂಪರೆಗೆ ಹುಟ್ಟಿಗೆ ಧಾರ್ಮಿಕ ಅಥವಾ ಪೌರಾಣಿಕ ವ್ಯಕ್ತಿಯಾಗಿರುತ್ತಾರೆ. ಆದರೆ ಚನ್ನದಾಸರ ಸಮುದಾಯದ ವಂಶದ ಮೂಲಪುರುಷ ಯಾವ ಋಷಿಮುನಿಯಾಗಿರದೆ ಒಬ್ಬ ಸಾಮಾನ್ಯ ಮನುಷ್ಯ ಅಜಮಿಳನ ವಂಶದ ಮೂಲಪುರುಷನೆಂದು ತಿಳಿದುಬರುತ್ತದೆ.

ಈತ ಊರ ಹೊರಗೆ ಜೀವಿಸುತ್ತಿದ್ದನು. ಅಂತ್ಯ ಕುಲದವನಾಗಿದ್ದನೆಂದು ತಿಳಿದುಬರುತ್ತದೆ. ಈತ ಸಮೀಪದ ಅರಣ್ಯದಿಂದ ತಂದ ಸೌದೆಯನ್ನು ಮಾರಿ ಜೀವನ ನಡೆಸುತ್ತಿದ್ದನು. ಅದೆ ಊರಿನಲ್ಲಿ ಹೊರಜಾಗದಲ್ಲಿ ಬಹಿಷ್ಕೃತ ಹುಚ್ಚಕುಲದ ಮಹಿಳೆಯೊಬ್ಬಳು ಜೀವನ ನಡೆಸುತ್ತಿದ್ದಳು. ಇವರಿಬ್ಬರಿಗೂ ಪರಿಚಯವಾಗಿ ದೇಹ ಸಂಬಂಧ ಬೆಳೆದು ಇವರಿಬ್ಬರೂ ಒಂದಾಗಿ ಜೀವನ ನಡೆಸುತ್ತಿದ್ದರು. ಕೆಲವು ದಿನಗಳು ಆದ ನಂತರ ಇವರಿಬ್ಬರಿಗೆ ಹಲವಾರು ಗಂಡು ಹಾಗೂ ಹೆಣ್ಣುಮಕ್ಕಳು ಜನಿಸಿದವು. ಅತೀ ಕಾಮುಕನಾದ ಅಜಮಿಳನ ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗಳನ್ನೇ ಕೂಡಿ ಕಾಮದ ಆಶೆಯನ್ನು ತಿರಿಸಿಕೊಳ್ಳುತ್ತಿದ್ದ. ತನ್ನ ಜೀವಿತದ ಕೊನೆಯ ಕಾಲದಲ್ಲಿ ತನ್ನ ಕೊನೆಯ ಪುತ್ರನಾದ ನಾರಾಯಣನನ್ನು ಕರೆದನು. ಇಷ್ಟೆಲ್ಲ ಪಾಪಮಾಡಿದರು ಕೊನೆಗೆ ಪ್ರಾಣತ್ಯಜಿಸುವ ಮುನ್ನ ಭಗವಂತನ ನಾಮಸ್ಮರಣೆ ಮಾಡಿದ್ದರಿಂದ ತಾನು ಮಾಡಿದ ಪಾಪಗಳೆಲ್ಲ ಕಳೆದುಹೋಗಿ ಆತ ವೈಕುಂಟಕ್ಕೆ ಹೋದನು ಎಂದು ತಿಳಿದು ಬರುತ್ತದೆ. ಈತನ ಸಂತತಿಯೇ ಊರಿನ ಹೆಸರು ಎಂದು ತಿಳಿದುಬರುತ್ತದೆ.

ಅಜಮಿಳನ ಪ್ರಸಂಗವನ್ನು ಬಿ.ಫ಼ಿ. ಗುಂಜೆಟ್ಟೆಯವರು ಹೀಗೆ ಉಲ್ಲೇಖಿಸಿದ್ದಾರೆ. ದಾಸರ ಮೂಲ ಪುರುಷ ಅಜಮಿಳನೆಂದು ಒಂದು ಅಬ್ಬಾನಯಿಕೆಯುಂಟು ಅಜಮಿಳನೆಂಬ ಕನ್ಯಾಕುಬ್ಬದಲ್ಲಿ ಬ್ರಾಹ್ಮಣ ಮಾತಾಪಿತರನ್ನು, ಧರ್ಮಪತ್ನಿಯನ್ನು ಪರಿತ್ಯಾಗ ಮಾಡಿ ಶೋಧ ಸ್ತ್ರೀ ಸಂಪರ್ಕ ಮಾಡಿ ಅನೇಕ ಮಕ್ಕಳನ್ನು ಹೊಂದಿದ್ದನು. ಆ ಮಕ್ಕಳೆ ದಾಸಕುಲದವರಾಗಿದ್ದರೆಂದು ಹೇಳುವುದುಂಟು (ಬ.ಹಿಮ್ಮಡಿ ಡಾ. ಯಲ್ಲಪ್ಪ ಚೆನ್ನದಾಸರ ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು ೨೦೦೮ ಪು.೩೧)

ಮತ್ತೊಂದು ನಂಬಿಕೆಯ ಪ್ರಕಾರ ಬ್ರಾಹ್ಮಣನಾದ ಅಜಾಮಿಳನು ಕೆಳಜಾತಿಯವಳನ್ನು ಮದುವೆಯಾದನು. ಮುಂದೆ ಅವನಿಗೊಂದು ಗಂಡು ಮಗು ಹುಟ್ಟಿತು. ಎರಡು ಜಾತಿಯವರು ಆ ಗಂಡುಮಗುವನ್ನು ತಮ್ಮವನೆಂದು ಸ್ವೀಕರಿಸಲಿಲ್ಲ. ಆದ ಕಾರಣ ಆ ಮಗುವು ದಿಕ್ಕಿಲ್ಲದೆ ಭಿಕ್ಷೆ ಬೇಡುತ್ತ ತಿರುಗುತ್ತ ಹೊರಟ ಅವನೇ ಚೆನ್ನದಾಸ. ಅವನ ಸಂತತಿಯೇ ಚನ್ನದಾಸರು ಎಂದು ಹೇಳುತ್ತಾರೆ ಮುತ್ತಿನ ಗೇರೆ ತುಕಾರಾಮ ಅವರು.

ಮನುಷ್ಯ ಅತಿಯಾದ ಆಸೆಯಿಂದ ನಾನು ನನ್ನದು, ನನ್ನ ಹೆಂಡತಿ, ನನ್ನ ಮಕ್ಕಳು ಒಟ್ಟಿನಲ್ಲಿ ಅಷ್ಟಮದಗಳಿಂದ ಅಂದರೆ ಜಾತಿ ಮದ, ಸ್ತ್ರೀ ಮದ, ಧನಮದ, ಯೌವನ ಮದ, ರಾಜ ಮದ, ತಪೊ ಮದ, ಬಲ ಮದ ಮತ್ತು ಸೌಂದರ್ಯ ಮದಗಳ ಬೆನ್ನುಹತ್ತಿ ಇವುಗಳಲ್ಲಿ ಯಾವುದು ಪರಿಪೂರ್ಣವಾಗಿ ಸಿಗದೆ ಹೋದಾಗ ತನ್ನನ್ನ ತಾನು ಮರೆತು ಸಪ್ತವ್ಯಸನಗಳಿಗೆ ಅಂದರೆ ಕುಡಿತ,

ಸೇದುವುದು, ಕೆಟ್ಟಮಾತು, ವ್ಯಬಿಚಾರದಂತಹ ದುಶ್ಚಟಗಳಿಗೆ ಬಲಿಯಾದಂತ ಮತ್ತು ಜಾತಿ-ಜಾತಿಗಳಲ್ಲಿ ಜಗಳ ಧರ್ಮ-ಧರ್ಮಗಳಲ್ಲಿ ಜಗಳ ನಂದು ಆ ಜಾತಿ ನಿಂದು ಈ ಜಾತಿ ಎಂದು ತನ್ನನ್ನು ತಾನೆ ಮರೆತು ಸನ್ನಡತೆಯಿಂದ ದುರ್ನಡತೆಯ ಕಡೆಗೆ ಹೋಗಿರುವ ಜನರನ್ನು ೧೨ನೇ, ೧೮-೧೯ನೇ ಶತಮಾನದ ಮಹಾನ್ ಬಸವಾದಿ ಶಿವಶರಣ ಮತ್ತು ೧೮ನೇ, ೧೯ನೇ ಶತಮಾನ ಶಿಶುನಾಳ ಶರೀಫರ, ಕಡಕೊಳ ಮಡಿವಾಳಪ್ಪನವರ ಮೈಲಾರ ಬಸವಲಿಂಗ ಶರಣ, ಕೈವಾರ ನಾರಾಯಣಪ್ಪನವರಂತಹ ತತ್ವಪದಕಾರರ ತತ್ವದಪಗಳನ್ನು ಹಾಡಿಕೊಂಡು ಊರೂರು ತಿರುಗುತ್ತ ದುರ್ನಡತೆಗೆ ಜಾರಿರುವ ಜನರನ್ನು ಸನ್ನಡತೆಗೆ ತರುವಂತಹ ಸಮುದಾಯವೆಂದರೆ ಅದು ಚನ್ನದಾಸರ ಸಮುದಾಯವೆಂದರೆ ತಪ್ಪಾಗಲಾರದು.

ಇದೊಂದು ಅಲೆಮಾರಿ ಸಮುದಾಯವಾಗಿದೆ. ಈ ಹಿನ್ನೆಲೆಯಲ್ಲಿ ಚನ್ನದಾಸರ ಸಮುದಾಯದ ಪದದ ವಿವೇಚನೆ ಮಾಡಿ ಈ ಪರ್ಯಾಯ ಹೆಸರುಗಳ ಹಿನ್ನೆಲೆಯಲ್ಲಿ 'ದಾಸ' ಪದದ ಅರ್ಥ ವಿವರಣೆಯ ಮುಖಾಂತರ ಪರಶೀಲಿಸಲಾಗಿದೆ. 'ಚೆನ್ನು' ಎನ್ನುವ ವಾದ್ಯ ನುಡಿಸುವವರಿಗೆ ಚೆನ್ನದಾಸರು ಎಂದು ಕರೆದಿದ್ದಾರೆ ಎಂದು ಹೇಳಬಹುದು.

ಚೆನ್ನದಾಸರ ಸಮುದಾಯಕ್ಕೆ ಪ್ರಾದೇಶಿಕವಾಗಿ ಹೈದ್ರಾಬಾದ್-ಕರ್ನಾಟಕದಲ್ಲಿ ಹಲವಾರು ಬೇರೆ ಬೇರೆ ಉಪನಾಮಗಳಿದ್ದರೂ, ಈ ಸಮುದಾಯ ತನ್ನನ್ನು 'ಚೆನ್ನದಾಸರು' ಎಂದೇ ಗುರುತಿಸಿಕೊಂಡಿದೆ. ಬೇರೆ ಬೇರೆ ಶೈಕ್ಷಣಿಕ ದಾಖಲಾತಿಗಳಲ್ಲಿ ಚನ್ನದಾಸರೆಂದೆ ತನ್ನ ಜಾತಿಯನ್ನು ದಾಖಲುಮಾಡಿಕೊಳ್ಳುತ್ತ ಬಂದಿದ್ದಾರೆ. ಚನ್ನದಾಸರ ಪರ್ಯಾಯ ನಾಮಗಳಾದ ದಂಡಿಗೆ ದಾಸರ, ಜಂಬೂದಾಸರ, ಚಕ್ರವಾದ್ಯದಾಸರ, ಹರಿದಾಸರ, ಶಂಕದಾಸರ, ಗೋಪಾಳಬುಟ್ಟಿದಾಸರ, ನಾಮದ ದಾಸರ ಹೊಲೆಯ ದಾಸರ, ದಾಸರಿ, ಮೂಲದಾಸರಿ, ಆಟದ ದಾಸರ, ನಾಮದ ದಾಸರ ಇನ್ನು ಹಲವಾರು ಇದ್ದರೂ ತಮ್ಮನ್ನು ಚನ್ನದಾಸರೆಂದೇ ಗುರುತಿಸಿಕೊಳ್ಳುತ್ತ ಬಂದಿದ್ದಾರೆ. ಪ್ರಾದೇಶಿಕವಾಗಿ ಇವರ ಸುತ್ತ ಮುತ್ತಲಿನ ಜನ ಇವರನ್ನು ದಾಸರ, ದಾಸಯ್ಯ ದಾಸರು ಎಂದೆ ಕರೆಯುತ್ತಾರೆ.

ಐತಿಹಾಸಿಕ ಹಿನ್ನೆಲೆ. ಮಿ.ಟಿ. ಧೂಪದ ಅವರು ಚನ್ನದಾಸರೆನ್ನುವುದು ಒಂದು ಸಾಂಸ್ಕೃತಿಕ ಹಿನ್ನೆಲೆಯೊನ್ನಳಗೊಂಡ ಸಮುದಾಯವಾಗಿದೆ. ಆರ್ಯರು ದಕ್ಷಿಣ ಭಾರತಕ್ಕೆ ಬಂದು ಇಲ್ಲಿಯ ಜನರನ್ನು ತನ್ನ ದಾಸರನ್ನು ಮಾಡಿಕೊಂಡ ಸಮುದಾಯ ಇವರು ಇರಬಹುದು ಅಥವಾ ಆರ್ಯ ಹಾಗೂ ದ್ರಾವಿಡ ಸಂಗಮದ ಸಂತತಿ ಎಂದು ಭಾವಿಸಲು ಸಾಧ್ಯವಿದೆ ಎಂದು ಅಭಿಪ್ರಾಯ ಪಟ್ಟಿದ್ದಾರೆ. ಮುಂದುವರಿದ ಧೂಪದ ಅವರು ಕೆಲವು ಅಭಿಪ್ರಾಯಗಳನ್ನು ಹೀಗೆ ದಾಖಲಿಸಿದ್ದಾರೆ.

ಈ ಚನ್ನದಾಸರನ್ನು ನಟುವಾಂಗ ಹೋಲುವಂತ ಜನರೆಂದು ತಿಳಿಸಲಾಗಿದೆ. ನರಕುಲ ವಿಜ್ಞಾನಿಗಳ ಪ್ರಕಾರ ನಟು ಜನಾಂಗವು ಒಂದು ಅಲೆಮಾರಿ ಜನಾಂಗ ಎಂದು ತಿಳಿದುಬರುತ್ತದೆ. ಕನ್ನುಕರ ಅಭಿಪ್ರಾಯದಂತೆ ಜಪ್ಪಿಯಂತಹ ಒಂದು ಜನಾಂಗ ಇವರು ನೃತ್ಯಗಾರರು. ಆಟವಾಡುವ, ರೂಪ ಜೀವಿಗಳಾದ ಒಂದು ಜನಾಂಗ. ಈ ಜನಾಂಗದ ಉಗಮ ಸ್ಥಾನದ ಬಗ್ಗೆ ನರಕುಲ ವಿಜ್ಞಾನಗಳ

ಇನ್ನೊಂದು ಅಭಿಪ್ರಾಯದಂತೆ ನಟು ಜನಾಂಗದ ಉತ್ಪತ್ತಿಯು ದಾಸ ಜನಾಂಗದ ಉತ್ಪತ್ತಿಯಂತಿದೆ ಎಂದು ತಿಳಿದುಬರುತ್ತದೆ.

**ಚೆನ್ನದಾಸರ ಮೇಲೆ ವೈಷ್ಣವ ಧರ್ಮದ ಪ್ರಭಾವ**

ಕರ್ನಾಟಕದಲ್ಲಿ ವೈಷ್ಣವ ಧರ್ಮದ ಚಟುವಟಿಕೆಗಳು ೧೧ನೇಯ ಶತಮಾನಕ್ಕಿಂತ ಮೊದಲಿನಿಂದಲೇ ನಡೆದಿದೆ. ಅದರ ಪ್ರವರ್ಧಮಾನವನ್ನು ೧೫ನೇ ಶತಮಾನದಲ್ಲಿ ಕಾಣುತ್ತೇವೆ. ಈಶತಮಾನವನ್ನು ಹರಿದಾಸ ಸಾಹಿತ್ಯದ ಉಗಮವೆಂದು ಹೇಳಲಾಗುತ್ತದೆ. (ಬಿ.ಹಿಮ್ಮಡಿ ಡಾ. ಯಲ್ಲಪ್ಪ ಚೆನ್ನದಾಸರ ಕನ್ನಡ ಪುಸ್ತಕ ಪ್ರಾಧಿಕಾರ ೨೦೦೮ ಪುಟ೩೭)

ವಿಜಯನಗರ ಸಾಮ್ರಾಜ್ಯದ ಶ್ರೀ ಕೃಷ್ಣದೇವರಾಯನ ಪ್ರೋತ್ಸಾಹದ ಹಿನ್ನೆಲೆಯಲ್ಲಿ ವ್ಯಾಸರಾಯರು ಮುಂದಾಳತ್ವವನ್ನು ವಹಿಸಿಕೊಂಡು ವೈಷ್ಣವ ಧರ್ಮವನ್ನು ಉನ್ನತಿಗೇರಿಸಿದರು. ಧರ್ಮ ಪ್ರಚಾರದ ನಿಮಿತ್ತ ವ್ಯಾಸಪೀಠ ಹಾಗೂ ದಾಸಪೀಠಗಳು ತಲೆ ಎತ್ತಿ ನಿಂತವು. ಒಂದು ಸಂದರ್ಭದಲ್ಲಿ ದೇಶದ ರಾಜಕೀಯ ಪರಿಸ್ಥಿತಿ ವಿಷಮತೆಯಿಂದ ಕೂಡಿತ್ತು.

ನಮ್ಮ ನಾಡಿನ ಸಾಮಾಜಿಕ ವ್ಯವಸ್ಥೆ, ಧಾರ್ಮಿಕ ನಿಲುವು, ಜನ ಜೀವನ ಆಹಾರ ವಿಚಾರ, ರೀತಿ-ನೀತಿ, ಇವೆಲ್ಲ ಒಂದು ಘಟ್ಟದಿಂದ ಮತ್ತೊಂದು ಘಟ್ಟಕ್ಕೆ ತಲುಪಿದ ಕಾಲ. ಈ ಕಾಲದಲ್ಲಿ ನಾಡಿನೊಳಗೆ ಮುಸ್ಲಿಂ ಸಂಸ್ಕೃತಿಗಳು ಬಂದು ಸೇರಿಕೊಂಡವು. ಕ್ರೈಸ್ತ ಶ್ರದ್ಧಾ ಧರ್ಮಪ್ರಸಾರಕರು ನಾಡಿನೊಳಗಾಗಲೆ ಬಂದಿದ್ದರು. ಪರ್ಶಿಯದಿಂದ ಬಂದಂತ ಕ್ರೈಸ್ತರು (ನೆಸ್ಟೋನಿಯನ್ನರು) ಇದ್ದರು. ನಮ್ಮ ದೇಶದ ಉತ್ತರಭಾರತಾದ್ಯಂತ ಮೊಗಲ್ ಸಾಮ್ರಾಜ್ಯ ಸುಭದ್ರವಾಗಿ ನೆಲೆನಿಂತಿತ್ತು. ಇದೆ ಸಂದರ್ಭದಲ್ಲಿ ಹಿಂದೂ, ಮುಸ್ಲಿಂ, ಕ್ರೈಸ್ತ, ಪಾರ್ಸಿ ಪಂಗಡಗಳ ಕಾಣಿಸಿಕೊಳ್ಳತೊಡಗಿದ್ದವು. ಆರ್ಥಿಕವಾಗಿ ನಾಡು-ಹೊರನಾಡುಗಳೊಂದಿಗೆ ಸಂಪರ್ಕವನ್ನು ಬೆಳೆಸಿಕೊಂಡಿದಿತ್ತು. ಧಾರ್ಮಿಕವಾಗಿ ನಾಡಿನಲ್ಲಿ ಪರ-ವಿರೋಧಗಳು ಮತ ಪ್ರವರ್ತನೆಗಳು, ಖಂಡನೆ-ಮಂಡನೆಗಳು ಹರಡಿಕೊಳ್ಳುತ್ತಿದ್ದವು. ಗ್ರಾಮದಲ್ಲಿರುವ ಸಂಸ್ಕೃತಿಯು ನಗರ ಸಂಸ್ಕೃತಿಗಳಿಗೆ ಎಡೆಮಾಡಿಕೊಡುತ್ತಿದ್ದವು.

ಇಂತ ಮೂಡಣ ಕಾಲದಲ್ಲಿ ನಾಡಿನ ಅನೇಕ ಕಡೆ ಹಿರಿಯ ಚಿಂತಕ, ಜ್ಞಾನಿಗಳು, ಯುಗಪುರುಷರಾದ ದಾಸಕೂಟರು ಕಾಣಿಸಿಕೊಂಡಿದ್ದು, ಯುಗಧರ್ಮದ ಪರಿಣಾಮದಿಂದ ವ್ಯಾಸರಾಯರು, ಕರ್ನಾಟಕ ಸಂಗೀತ ಪಿತಾಮಹ ಪುರಂದರ ದಾಸರು, ಕನಕದಾಸರು, ವಾದಿರಾಜರು ಜೀವಿಸುತ್ತಿದ್ದ ಕಾಲದಲ್ಲಿ ಉತ್ತರ ಭಾರತದಲ್ಲಿ ರಾಮಾನಂದ ತೀರ್ಥರು(೧೪-೧೫), ಕಬೀರದಾಸರು (೧೪೯೯-೧೫೫೯), ಬಂಗಾಳದಲ್ಲಿ ಕೃಷ್ಣಚೈತನ್ಯರು (೧೪೮೫-೧೫೩೩), ಮಹಾರಾಷ್ಟ್ರದಲ್ಲಿ ನಾಮದೇವ ಸಿಂಪಿಗಳು (೧೪೦೦ ಸುಮಾರು), ಗುರು ಅಮರದಾಸರು (೧೫೭೪ರ ಸುಮಾರು) ಬ್ರಜ ಭೂಮಿಯಲ್ಲಿ ಸೂರದಾಸರು(೧೫೫೬), ರಾಶಿಯ ಕಡೆ ಪಳಸೀದಾಸರು (೧೫೩೨-೧೬೨೩) ಮೊದಲಾದವರು ಕಾಣಿಸಿಕೊಂಡರು. ತಿರುಪತಿ ಬಳಿಯ ಚಂದ್ರಗಿರಿಯ ಪ್ರಾಂತ್ಯಕ್ಕೆ ದೊರೆಯಾಗಿದ್ದ ಸಾಳ್ವೆ ನರಸಿಂಹ ಹಾಗೂ ಶ್ರೀಪಾದರಾಜರ ಕಾಲದಲ್ಲಿ ತಿರುಪತಿ ತಿಮ್ಮಪ್ಪ ಅಥವಾ ಶ್ರೀನಿವಾಸನ ಪೂಜೆಯ ಪ್ರಕ್ರಿಯೆಯಿಂದ ವೈಷ್ಣವ ಧರ್ಮ

ಪ್ರಚಾರಕ್ಕೆ ಚಾಲನೆ ದೊರಕಿತು. ಶ್ರೀಪಾದರಾಯರ ಪ್ರಯತ್ನದಿಂದಾಗಿ ವ್ಯಾಸರಾಯರು ಶ್ರೀನಿವಾಸನ ಅರ್ಚಕರಾಗಿ ಚಂದ್ರಗಿರಿ ರಾಜ್ಯದ ಆಸ್ಥಾನ ಗುರುವಾಗಿ ನೇಮಕಗೊಂಡು ೧೨ವರ್ಷಗಳ ನಿರಂತರ ಸೇವೆ ಮಾಡಿದರು. ಹಾಗೂ ವಿಜಯನಗರದಲ್ಲಿ ಆಳುವ ವರಸನಾಯಕನ ಸಹಾಯದಿಂದ ಸಂಸ್ಕೃತ ವಿಶ್ವವಿದ್ಯಾಲಯವನ್ನು ಸ್ಥಾಪಿಸಿದರು.

ನಂತರ ಈ ವಿದ್ಯಾಪೀಠ ವಿಜಯನಗರ ಸಾಮ್ರಾಜ್ಯದ ಶ್ರೀಕೃಷ್ಣದೇವರಾಯನ ಆಳ್ವಿಕೆಯಲ್ಲಿ ಅತ್ಯುನ್ನತಕ್ಕೇರಿತು. ಈ ಮೂಲಕ ಹರಿದಾಸರ ಪ್ರೌಢ ಪಂಕ್ತಿಯೇ ನಿರ್ಮಾಣಗೊಳ್ಳುವುದರ ಮುಖಾಂತರ ವೈಷ್ಣವ ಧರ್ಮ ಪ್ರಚಾರತೆ ಪಡೆಯಿತು. ಈ ಪ್ರಚಾರಕ್ಕಾಗಿ ದಾಸಕೂಟ, ವ್ಯಾಸಕೂಟ ಎಂಬ ಎರಡು ಪಂಗಡಗಳು ಜನ್ಮತಾಳಿದವು.

ದಾಸಕೂಟರು ನಾಮಸ್ಮರಣೆ, ಹರಿಕಥೆ, ಭಜನೆ ಮಾನಸ ಪೂಜೆಗಳ ಮಾರ್ಗದಲ್ಲಿ ನಡೆದರೆ, ವ್ಯಾಸಕೂಟರು ವೇದಾಂತ ಚಿಂತನದ ದಾರಿಯಲ್ಲಿ ನಡೆದರು. ದಾಸಕೂಟದವರ ಅಂತಿಮ ಧ್ಯೇಯ ತಿನುಕೋದ್ಧಾರ ಮಾಡುವುದು ಆದರೆ ವ್ಯಾಸಕೂಟ ವೇದ ಮಂತ್ರಗಳ ಗಂಭೀರ ಧ್ವನಿಯ ರಾಜಮಾರ್ಗದಲ್ಲೇ ಉಳಿದು ಬಂತು. ದಾಸಕೂಟ ಪಂಥ ಜಾನಪದ ಪ್ರಪಂಚವನ್ನು ತಮ್ಮ ಸಾಹಿತ್ಯದಲ್ಲಿ ಬೆರೆಸಿಕೊಂಡಿತು. ಹಾಗೂ ವ್ಯಾಸರಾಯರು ವೈಷ್ಣವ ಧರ್ಮವನ್ನು ಜನಪ್ರಿಯೆಗೊಳಿಸುತ್ತ ಬಹಳಷ್ಟು ಒತ್ತು ನೀಡಿದರು. ಸಾಮಾನ್ಯವಾಗಿಯೇ ಮಡಿವಂತಿಕೆ ಆಚಾರ-ವಿಚಾರ ವ್ಯಾಸಕೂಟಕಿಂತ ದಾಸ ಕೂಟಕ್ಕೆ ಪ್ರೋತ್ಸಾಹ ಸಿಕ್ಕಿತು. ದಾಸಕೂಟರು ಹರಿದಾಸರ ಪರಂಪರೆಯಲ್ಲಿ ಚಳುವಳಿಯಲ್ಲಿ ರೀತಿ-ನೀತಿಯಲ್ಲಿ ಜನಸಾನ್ಯರನ್ನು ಸೆಳೆಯಿತು. ಮತ್ತು ಪುರಂದರ ದಾಸರು, ಕನಕದಾಸರ ಪ್ರಭಾವದಿಂದ ಸಮುದಾಯದವರನ್ನು ವೈಷ್ಣವ ಧರ್ಮಕ್ಕೆ ಸೇರಿಸಿಕೊಳ್ಳುವಂತೆ ಈ ಧರ್ಮವು ಮೂಡಿತು. ಮುಂದೆ ಈ ಧರ್ಮದ ಪ್ರಚಾರಕ್ಕಾಗಿ ಇವುಗಳು ತಮ್ಮ ತಮ್ಮ ಬದುಕನ್ನು ಕಟ್ಟಿಕೊಂಡು ಕಲಾ ಸಂಸ್ಕೃತಿಯನ್ನು ತಮ್ಮ ಉಸಿರಾಗಿಸಿಕೊಂಡು, ಕಥೇಯೇ ಜೀವನ, ಬದುಕು ಎಂದುಕೊಂಡು ಊರೂರು, ಕೇರಿ-ಕೇರಿಗಳು ತಿರುಗಿ ಹಾಡಿಕೊಂಡು ಜೀವನ ನಡೆಸುವ ಇವರ ಬದುಕು ತುಂಬ ಅತಂತ್ರ ಸ್ಥಿಯಲ್ಲಿದೆ.

**೪.೫. ಗೋಂಧಳಿ ಸಮುದಾಯದ ಹಿನ್ನೆಲೆ**

ನಮ್ಮ ನಾಡಿನ ಸಾಹಿತ್ಯ ಸಂಗೀತ, ಆಚಾರ, ವಿಚಾರ, ನಂಬಿಕೆ, ನಡೆ, ನುಡಿ, ವೃತ್ತಿ, ಪ್ರವೃತ್ತಿ, ಸಂಸ್ಕೃತಿಯ ಹಲವಾರು ಅಂಶಗಳನ್ನು ಉಳಿಸಿ ಬೆಳೆಸಿಕೊಂಡು ಬಂದಿರುವ ಹಲವಾರು ಅಲೆಮಾರಿ ಸಮುದಾಯಗಳಾದ ದೊಂಬಿದಾಸ, ಶಿಳ್ಳೆಕ್ಯಾತ, ಚನ್ನದಾಸ, ಬುಡ್ಗಜಂಗಮ, ಕೊರಮ ಮತ್ತು ಚನ್ನದಾಸ ಸಮುದಾಯಗಳಂತೆ ಗೋಂಧಳಿ ಸಮುದಾಯವು ಒಂದು. ಇದೊಂದು ಅಲೆಮಾರಿ ಸಮುದಾಯವಾಗಿದೆ. ಗೊಂದಲಿಗರ ಪರಂಪರೆ ಕುರಿತು ಕೆಲವು ಪುರಾಣ ಕಥೆಗಳು ಕಂಡುಬರುತ್ತವೆ.

"ಜಮದಗ್ನಿ ಮಹಾಋಷಿಯ ಧರ್ಮಪತ್ನಿಯಾದ ಶ್ರೀರೇಣುಕಾದೇವಿ ಗೊಂದಲಿಗರ ವಂಶಪರಂಪರೆಯ ಸ್ಥಾಪಕರೆಂದು ತಿಳಿದುಬರುತ್ತದೆ. ರೇಣುಕಾದೇವಿಯ ಪುತ್ರ ಪರಶುರಾಮನು ದೈತ್ಯ ರಾಕ್ಷಸನಾದ ಬೆಟ್ಟಸುರನನ್ನು ಕೊಂದು ಅವರ ಶಿರವನ್ನು ಕಡಿದನು. ಆ ಶಿರದ ಬ್ರಹ್ಮರಂಧ್ರದಿಂದ ಕರಳು ಹೊರಬರುತ್ತದೆ.

ಆ ಕರಳು ತಂತಿಯ ಮಾಡಿ ದೇಹವೆ ಚೌಡಿಕೆ ಮಾಡಿ ಆ ಚೌಡಿಕೆಯಿಂದ ತ್ರುಣ್ ತ್ರುಣ್ ನಾದ ಬರುವಂತೆ ಮಾಡುತ್ತಾನೆ. ಆ ಚೌಡಿಕೆ ತ್ರುಣ್ ತ್ರುಣ್ ಎಂದು ನುಡಿಸುತ್ತ ಉದೋ ಉದೋ ಎಂದು ತಾಯಿಯ ಘೋಷಣೆ ಮಾಡುತ್ತ ತಾಯಿಯ ನೆನೆಯುತ್ತ ಸಂತೋಷದಿಂದ ಗೊಂದಲ ರೂಪದಿಂದ ಸ್ತುತಿಸಿದ ವಾಕ್ಯವೆ ಗೊಂದಳವು ಇಲ್ಲಿಂದಲೇ ಗೊಂದಲಿಗರ ವಂಶಪರಂಪರೆ ಹುಟ್ಟಿತೆಂದು ಸಮರ್ಥ ರಾಮದಾಸ ಶಿಷ್ಯರಾದ ದಿನಕರ ಸ್ವಾಮಿ "ಸ್ವಾನುಭವ ದಿನಕರ" ಎಂಬ ಮರಾಠಿ ಪುಸ್ತಕದಲ್ಲಿ ಹೇಳಿದ್ದಾರೆ"(ಗಂಗಾಧರ ದೈವಜ್ಞ, ಗೊಂದಲಿಗರು, ಪು. ೨೪).

"ಪರಶುರಾಮನು ತಮ್ಮ ತಂದೆಯಾದ ಜಮದಗ್ನಿ ಋಷಿಮುನಿಯನ್ನು ಕೊಂದ ಕಾರ್ತಿವೀರಾರ್ಜುನನ್ನು ಕೊಂದು ಅವನ ದೇಹದಲ್ಲಿರುವ ಕರುಳನ್ನು ಕಿತ್ತುಕೊಂಡು ಆ ಕರುಳಿನಿಂದ ತಂತಿ ಮಾಡಿ, ದೇಹವ ಚೌಡಿಕೆ ಮಾಡಿ ನುಡಿಸಿದನು"(ಬೋರಲಿಂಗಯ್ಯ ಹಿ.ಚಿ., ಕರ್ನಾಟಕ ಜನಪದ ಕಲೆಗಳ ಕೋಶ, ಕವಿಹಂ, ೧೯೯೬, ಪು. ೮೩). ಅಂದಿನಿಂದಲೂ ಗೊಂದಲಿ ಪ್ರಾರಂಭವಾಯಿತು ಎನ್ನುವ ಒಂದು ನಂಬಿಕೆ.

ಗೊಂದಲಿಗಕ್ಕೆ ಸಂವಾದಿಯಾಗಿ ಗೊಂದಲಿ, ಗೊಂದಲ, ಗೊಂದಳೆಗಳು, ಗೊಂದಣೆ, ಗೊಂಡಲ, ಗೊಂದಣ, ಗಾಂಡಲಿ, ಗೊಂದಲಿ, ಕುಂಡಲಿ, ಗೊಂಥಳ ಮೊದಲಾದ ಪದಪ್ರಯೋಗಗಳಿವೆ.

**ಐತಿಹಾಸಿಕ ಹಿನ್ನೆಲೆ**

"ಮಹಾರಾಷ್ಟ್ರ ರಾಜ್ಯದಲ್ಲಿ ಸರಿಸುಮಾರು ಮುನ್ನೂರು ವರ್ಷಗಳ ಹಿಂದೆ ಅಖಂಡ ಹಿಂದೂ ಸಾಮ್ರಾಜ್ಯವನ್ನು ಕಟ್ಟಲು ಶ್ರಮಿಸಿದ ಛತ್ರಪತಿ ಶಿವಾಜಿ ಮಹಾರಾಜರು ರಾಜ್ಯಭಾರ ಮಾಡುತ್ತಿದ್ದ ಸಂದರ್ಭದ ಕಾಲದಲ್ಲಿ ವಿಜಾಪುರ ಈಗಿನ ವಿಜಯಪುರ ಮೊಘಲರ ರಾಜ್ಯವಾಗಿತ್ತು. ಈ ರಾಜ್ಯವನ್ನು ತಮ್ಮದಾಗಿಸಿಕೊಳ್ಳಲು ಎರಡು ಕಡೆಯಲ್ಲು ಒಳಸಂಚುಗಳು ನಡೆಯುತ್ತಿದ್ದವು ಆದಕಾರಣ ಎರಡು ರಾಜ್ಯಗಳಲ್ಲು ಗೂಢಚಾರರ ತಿರುಗಾಟ ಇದ್ದೆ ಇರುತ್ತಿತ್ತು. ಗೊಂದಲಿಗರು ಛತ್ರಪತಿ ಶಿವಾಜಿ ಮಹಾರಾಜರ ಪರವಾಗಿ ಗೂಢಚಾರಿಗಳಾಗಿ ಭಿಕ್ಷುಕರ ವೇಷಧರಿಸಿ ಮೊಘಲರ ರಾಜ್ಯದಲ್ಲಿರುವ ಎಲ್ಲ ವಿಷಯಗಳನ್ನು ತಿಳಿದುಕೊಳ್ಳಲು ಮೊಘಲರ ರಾಜ್ಯಕ್ಕೆ ಬರುತ್ತಾರೆ. ಆ ರಾಜ್ಯದಲ್ಲಿ ನಡೆಯುವ ಎಲ್ಲ ಅಹಿತಕರ ಘಟನೆಗಳನ್ನು ತಿಳಿದುಕೊಳ್ಳಲು ಗೊಂದಲ ಹಾಕುವ ಕಾರ್ಯ ಮಾಡುತ್ತಿದ್ದರು"(ಗಂಗಾಧರ ದೈವಜ್ಞ, ಗೊಂದಲಿಗರು, ಪ್ರಸಾರಾಂಗ, ಕವಿಹಂ, ೨೦೦೦, ಪು.೨೮). ಹೀಗೆ ಗೊಂದಲ ಹಾಕುವ ನೆಪದಲ್ಲಿ ಮುಸಲ್ಮಾರರ ರಾಜ್ಯದಲ್ಲಿ ನಡೆಯುತ್ತಿದ್ದ ಎಲ್ಲ ವಿಧೆಯರ ಸುದ್ದಿಗಳನ್ನು ಮರಾಠಿ ಭಾಷೆಯಲ್ಲಿ ಕಥೆಯಾಗಿ ಹಾಡುತ್ತಿದ್ದರು.

ಭಿಕ್ಷಾಟನೆಯ ನೆಪದಲ್ಲಿ ಗೊಂದಲಿಗರು ಮನೆಯ ಮುಂದೆ ನಿಂತು ಹಾಡತೊಡಗಿದರು. ಇವರ ಹಾಡುಗಳಿಂದ ಮನೆಯೊಳಗಿದ್ದ ಎಲ್ಲ ಜನರಿಗೆ ಗುಪ್ತವಾದ ಸುದ್ದಿಗಳು ತಿಳಿಯುತ್ತಿದ್ದವು. ಅಲೆಮಾರಿ ಮರಾಠಿಗಳಾದ 'ಮಾವಳ' ಜನ ಮತ್ತು ಮರಾಠಿಗರಾದ ಲಮಾಣಿಗಳು ಇವರೆಲ್ಲ ಇರುವ ಕಡೆಗಳೆಲ್ಲ ಹೆಚ್ಚಾಗಿ ಗೊಂದಲ ಹಾಕುವುದರ ಮುಖಾಂತರ ಮುಸಲ್ಮಾನರು ನಡೆಸುವ ಎಲ್ಲ ಒಳಸಂಚುಗಳನ್ನು

ತಿಳಿಸಿ ಒಗ್ಗಟ್ಟನ್ನು ಸಾಧಿಸಲು ಸಲಹೆಗಳನ್ನು ನೀಡಿ ಬರುತ್ತಿದ್ದರು. ಇವರೆಲ್ಲ ಅಂಬಾಭವಾನಿಯ ಮತ್ತು ರೇಣುಕಾ ಯಲ್ಲಮ್ಮ ದೇವಿಯ ಭಕ್ತರಾಗಿರುವುದರಿಂದ ಆ ದೇವತೆಯ ಹೆಸರಿನಲ್ಲೆ ಹಾಡುತ್ತಿದ್ದ ಹಲವಾರು ಕಥೆಗಳು ಇವರು ಮಾರ್ಗದರ್ಶನ ಮಾಡಲು ಮತ್ತು ಸುದ್ದಿಗಳನ್ನು ತಿಳಿಸಲು ತುಂಬ ಉಪಯುಕ್ತವಾಗಿದ್ದವು.

ಈ ಗೊಂಧಳಿ ಸಮುದಾಯಕ್ಕೆ ಗೊಂಧಳಿ ಎನ್ನುವ ಪದ ಬರುವುದಕ್ಕಿಂತ ಮುಂಚೆ ಮಾವಳಿ ಜನಾಂಗದ ಕಾಡುಕುರುಬರಾಗಿದ್ದರು ಎನ್ನುವುದು ನಮಗೆ ಕಂಡುಬರುತ್ತದೆ. ಇವರು ಹಾಡುವುದು ವಾದ್ಯನುಡಿಸುವುದು. ಕುಣಿಯುವುದು ಮಾಡುತ್ತಿದ್ದರು. ಮುಸಲ್ಮಾನರ ಕುತಂತ್ರಗಳಿಗೆ ಬೇಸತ್ತಿದ್ದ ಹಿಂದೂ ಸಾಮ್ರಾಟ ಶಿವಾಜಿ ಮಹಾರಾಜ ಗೊಂದಲಿಗರು ಹಾಡುವುದು ಕುಣಿಯುವುದು ಕಂಡು ಇವರನ್ನು ಕರೆಸಿ ಮುಸಲ್ಮಾನರ ಮನೆಗಳಿಗೆ ಹೋಗಿ ದೇವಿ ಕುರಿತು ಹಾಡುಗಳನ್ನು ಹಾಡಿ ದೇವಿಯ ಹೆಸರಲ್ಲಿ ಅವರಿಗೆ ಬಂಡಾರ ಹಚ್ಚುತ ಅವರ ಮನೆಗಳಲ್ಲಿರುವ ಎಲ್ಲ ವಿಷಯಗಳನ್ನು ತಿಳಿದುಕೊಂಡು ಬರಲು ಆಜ್ಞೆಯನ್ನು ಮಾಡುತ್ತಾನೆ. ರಾಜನ ಆಜ್ಞೆಯಂತೆ ಗೊಂದಲಿಗರು ದೇವಿಯ ಕುರಿತು ಹಾಡುಗಳನ್ನು ಹಾಡುತ್ತಾ ಮುಸಲ್ಮಾನರ ಮನೆಗಳಿಗೆ ಹೋಗಿ ಮನೆಯಲ್ಲಿ ಸಂಗ್ರಹಿಸಿ ಇಡಲಾಗಿದ್ದ ಶಸ್ತ್ರಾಸ್ತ್ರಗಳನ್ನು ಮತ್ತು ಅಲ್ಲಲ್ಲಿ ಅಡಗಿ ಕುಳಿತಿದ್ದ ಸಂಚುಕೋರರನ್ನು ಕಂಡುಹಿಡಿದು ಶಿವಾಜಿ ಮಹಾರಾಜನಿಗೆ ಮಾಹಿತಿ ನೀಡುತ್ತಿದ್ದರು. ಇವರ ಗುಢಾಚಾರದಿಂದ ಯಶಸ್ವಿಯಾದ ಶಿವಾಜಿ ಮಹಾರಾಜ ತುಂಬ ಸಂತುಷ್ಟನಾಗಿ ಗೊಂದಲಿಗರನ್ನು ನೆರೆ ರಾಜ್ಯವಾದ ಬಿಜಾಪುರ ಸಂಸ್ಥಾನಕ್ಕೂ ಗೂಢಚಾರಾಗಿ ನೇಮಿಸಿದರೆಂದು ತಿಳಿದುಬರುತ್ತದೆ (ಗಂಗಾಧರ ದೈವಜ್ಞ, ಗೊಂದಲಿಗರು, ಪು.೨೮). ಹೀಗೆ ಶಿವಾಜಿಯ ಗೂಢಚಾರ ವೇಷದಲ್ಲಿ ಗೊಂದಲಿಗರು ಕರ್ನಾಟಕಕ್ಕೆ ಬಂದಿರಬಹುದೆಂದು ತಿಳಿದುಬರುತ್ತದೆ.

**ಸಮುದಾಯದ ಹೆಸರು ಔಚಿತ್ಯ**

ಗೊಂಧಳಿ ಅಥವಾ ಗೊಂದಲ ಶಬ್ದವನ್ನು ಕನ್ನಡ ಆದಿಕವಿ ಪಂಪ, ರುದ್ರಭಟ್ಟ, ಅಭಿನವ ಪಂಪ ಶರಣರು ಸಮಾನಾರ್ಥದಲ್ಲಿ ಬಳಸಿರುತ್ತಾರೆ.

ನಾಗಚಂದ್ರ ಕವಿ ತನ್ನ ಮಲ್ಲಿನಾಥ ಪುರಾಣದಲ್ಲಿ "ಕುಣಿವ ಗೊಂದಣ" ಎಂಬ ಪದ ಉಪಯೋಗಿಸಿದ್ದಾನೆ. ಆಂಧ್ರಪ್ರದೇಶದ ಅನಂತಪುರ, ಹೈದ್ರಾಬಾದ್ ನಿಜಾಮಬಾದ್, ಆದಿಲಾಬಾದ್, ಮೆಹಬೂಬನಗರ ಇಲ್ಲಿ ಗೊಂದಳಿ ಸಮುದಾಯವನ್ನು ಗೊಂದಳಿವಾಳ ಎಂದೂ ವಾರಂಗದಲ್ಲಿ ಗೊಂದಲವಾರು ಎಂದು ಕರೆಯುತ್ತಾರೆ. (ಶಿವಾನಂದ ಲಪಾಚಂಗಿ, ಗೊಂದಳಿ ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು ೨೦೦೮ ಪುಟ ೪)

**ಸಾಮಾಜಿಕ ಹಿನ್ನೆಲೆ:** ಅಲೆಮಾರಿ ಗೊಂಧಳಿ ಸಮುದಾಯವು ಆರ್ಥಿಕ, ಸಾಮಾಜಿಕ ಶೈಕ್ಷಣಿಕ ಹಾಗೂ ರಾಜಕೀಯವಾಗಿ ಅತ್ಯಂತ ಹಿಂದುಳಿದ ಪಂಗಡವಾಗಿದ್ದರು ಸಾಹಿತ್ಯ ಸಂಗೀತ ಇನ್ನೂ ಹಲವಾರು ಕಲೆಯಲ್ಲಿ ಬಹಳ ಶ್ರೀಮಂತವಾಗಿದೆ. ಇವರ ಕಲೆಗಳಿಗೆ ಸರಕಾರ ಯಾವುದೇ ರೀತಿ ಸಹಾಯ ಮಾಡದೆ ಇರುವುದೆ ಇವರು ಹಿಂದುಳಿದಿರುವಿಕೆಗೆ ಕಾರಣವೆಂದು ಹೇಳಬಹುದು.

ಅಧ್ಯಾಯ ಐದು

# ಅಲೆಮಾರಿ ಸಮುದಾಯಗಳ ಸಂಗೀತದ ಪ್ರಕಾರಗಳು

**೫.೧. ಹಂಡಿಜೋಗಿ ಸಮುದಾಯದ ಸಂಗೀತ**

೫.೧.೧. ಗಾಯನ, ವಾದ್ಯ ಮತ್ತು ನರ್ತನ ಪ್ರಕಾರಗಳು

೫.೧.೨. ವೇಷಭೂಷಣ ಪ್ರಕಾರ

**೫.೨. ಕೊರಮ ಸಮುದಾಯದ ಸಂಗೀತ**

೫.೨.೧. ಗಾಯನ, ವಾದ್ಯ ಮತ್ತು ನರ್ತನ ಪ್ರಕಾರಗಳು

೫.೨.೨. ವೇಷಭೂಷಣ ಪ್ರಕಾರ

**೫.೩. ಬುಡ್ಗಜಂಗಮ ಸಮುದಾಯದ ಸಂಗೀತ**

೫.೩.೧. ಗಾಯನ, ವಾದ್ಯ ಮತ್ತು ನರ್ತನ ಪ್ರಕಾರಗಳು

೫.೩.೨. ವೇಷಭೂಷಣ ಪ್ರಕಾರ

**೫.೪. ಚನ್ನದಾಸ ಸಮುದಾಯದ ಸಂಗೀತ**

೫.೪.೧. ಗಾಯನ, ವಾದ್ಯ ಮತ್ತು ನರ್ತನ ಪ್ರಕಾರಗಳು

೫.೪.೨. ವೇಷಭೂಷಣ ಪ್ರಕಾರ

**೫.೫. ಗೊಂದಳಿ ಸಮುದಾಯದ ಸಂಗೀತ**

೫.೫.೧. ಗಾಯನ, ವಾದ್ಯ ಮತ್ತು ನರ್ತನ ಪ್ರಕಾರಗಳು

೫.೫.೨. ವೇಷಭೂಷಣ ಪ್ರಕಾರ

ಅಧ್ಯಾಯ ಐದು

# ಅಲೆಮಾರಿ ಸಮುದಾಯಗಳ ಸಂಗೀತದ ಪ್ರಕಾರಗಳು

## ಹಂಡಿ ಜೋಗಿಯವರ ಸಮುದಾಯ ಸಂಗೀತ

**ಹಾಡುಗಾರಿಕೆ:** ಹೈದ್ರಾಬಾದ್-ಕರ್ನಾಟಕದಲ್ಲಿ ಕಂಡುಬರುವ ಹಲವಾರು ಸಂಗೀತ ಸಮುದಾಯಗಳಲ್ಲಿ ಹಂಡಿಜೋಗಿ ಸಮುದಾಯವು ಒಂದು. ಅನೇಕ ತಲೆಮಾರುಗಳಿಂದ ಸಂಗೀತವೇ ಜೀವನ. ಸಂಗೀತವೇ ಉಸಿರು ಎಂದುಕೊಂಡ ಆ ಅರ್ಜುನ ಕೊಟ್ಟ ಕಿನ್ನರಿ ವಾದ್ಯವನ್ನು ಹಿಡಿದು ಹಾಡಿಕೊಂಡು ಜೀವನ ನಡೆಸಿದ ಜನಾಂಗ. ಇದೊಂದು ಅಲೆಮಾರಿ ಸಮುದಾಯವಾಗಿದೆ. ಹಂಡಿಜೋಗಿ ಕಲಾವಿದರು ತಮ್ಮ ಗುರುವಾದ ಅರ್ಜುನ ಆ ಅರ್ಜುನಜೋಗಿ ಹಾಡಿಗೆ ಮಾತ್ರ ಸೀಮಿತವಾಗಿರದೆ ಮಹಾಭಾರತದಲ್ಲಿ ಬರುವ ವಿವಿಧ ಪರ್ವಗಳನ್ನು ಅನೇಕ ರಾತ್ರಿಗಳವರೆಗೆ ಸುಶ್ರಾವ್ಯವಾಗಿ ಹಾಡುವ ಇವರು ಶಿವ-ಪಾರ್ವತಿ, ಗಂಗೆ-ಗೌರಿ, ಭೈರವ-ಕಾರಿ ಮುಂತಾದ ಕಥನ ಗೀತೆಗಳನ್ನು ಹಾಡುತ್ತಾರೆ. ಜೋಗಿ ಕಲಾವಿದರು ಒಂದು ಕಥೆಯಲ್ಲಿ ಬರುವ ನಾಯಕರು ನಾಯಕಿಯರ ಪಾತ್ರ ಸಾಮಾನ್ಯ ಜನರ ಮಧ್ಯದ ಪಾತ್ರಗಳು ತಮ್ಮದೇ ಆದ ಶೈಲಿಯಲ್ಲಿ ಅಭಿನಯ ಪೂರ್ವಕವಾಗಿ ಸಮಾನ್ಯ ಜನರಿಗು ತಿಳಿಯುವ ಹಾಗೆ ಸರಳ ರೀತಿಯಲ್ಲಿ ಕಾವ್ಯಗಳನ್ನು ಹಾಡುತ್ತಾರೆ. ಇವುಗಳಲ್ಲದೆ ಇನ್ನೂ ಹಲವಾರು ಲೌಕಿಕ ಕಾವ್ಯಗಳನ್ನು ಬಹಳ ಸುಂದರವಾಗಿ ಸುಶ್ರಾವ್ಯವಾಗಿ ಹಾಡುತ್ತಾರೆ. ಅಂತವುಗಳಲ್ಲಿ ಬಹಳ ಮುಖ್ಯ ಕಾವ್ಯಗಳೆಂದರೆ, ರಾಜಹಂಸ, ಪರಮಹಂಸ, ಶಿವಶಂಕರ ಕುಮಾರ, ಆಶಾವತ, ಶಾಮಸೇನ, ಚಿತ್ರಶೇಖರ, ಸೋಮಶೇಖರ, ಬಸವಕುಮಾರ, ಲೋಹಿತಕುಮಾರ, ಸತಿ ಶೀಲಾವತಿ, ವೀರಸೇನ-ಕೋಕಿಲೆ ಗೋಪಮ್ಮನ ಕಥೆಗಳು ಇತ್ಯಾದಿ ಕಾವ್ಯಗಳು. ಇವರ ಹಾಡುಗಾರಿಕೆಯಲ್ಲಿ ಶಾಸ್ತ್ರೀಯ ಚೌಕಟ್ಟುಗಳು ಕಂಡು ಬರುವುದಿಲ್ಲ. ಜನಸಾಮಾನ್ಯರಿಗೂ ಅರ್ಥವಾಗುವಂತೆ ಸರಳ ರೀತಿಯಲ್ಲಿ ಹಾಡುವುದನ್ನು ಕಂಡುಬರುತ್ತದೆ. ಸಾಹಿತ್ಯವನ್ನು ರಾಗದೊಡನೆ ಹೆಚ್ಚಾಗಿ ಶಾಸ್ತ್ರಚೌಕಟ್ಟಿನೊಳಗೆ ಹಾಡುವ ಪದ್ಧತಿ



ಇರುವುದಿಲ್ಲ. ಆದರೂ ಕೂಡ ಅವರ ಹಾಡು ಯಾವುದಾದರೊಂದು ರಾಗಕ್ಕೆ ಸಂಬಂಧಪಟ್ಟಿರುತ್ತದೆ. ಅಥವಾ ಮಿಶ್ರರಾಗಕ್ಕೆ ಸಂಬಂಧಪಟ್ಟಿರುತ್ತದೆ. ಇವರು ಹಾಡುವಾಗ ಹಾಡಿನ ಸಾಹಿತ್ಯವನ್ನು ಒತ್ತಿ ಹಾಡುವುದನ್ನು ಪ್ರಮುಖವಾಗಿ ಕಂಡುಬರುತ್ತದೆ.

ಈ ಸಮುದಾಯದ ಕಲಾವಿದರು ಯಾವುದೇ ರೀತಿಯ ಶಾಸ್ತ್ರೀಯ ಸಂಗೀತವನ್ನು ಕಲಿತಿರುವುದಿಲ್ಲ. ಆದರೂ ಸಹ ಕಿನ್ನರಿಯ ವಾದ್ಯದ ನಾದಕ್ಕೆ ತಕ್ಕಂತೆ ಶ್ರುತಿಬದ್ಧವಾಗಿ ಸ್ತರಗಳಲ್ಲಿ ಅಪಸ್ವರ ಇಲ್ಲದೆ ಸುಮಧುರವಾಗಿ ಹಾಡುತ್ತಾರೆ. ತಮ್ಮ ಧ್ವನಿಗನುಗುಣವಾಗಿ ಆಲಾಪ ಮಾಡುತ್ತ ಹಾಡನ್ನು ವಿಸ್ತಾರ ಮಾಡಿ, ಹಿಗ್ಗಿಸಿ, ಕುಗ್ಗಿಸಿ ಹಾಡುವ ಕಲೆ ಈ ಕಲಾವಿದರಲ್ಲಿದೆ.

ಹಂಡಿಜೋಗಿ ಸಮುದಾಯದ ಒಂದೊಂದು ಕುಟುಂಬ ಸದಸ್ಯರು ತಮ್ಮ ಹೊಟ್ಟೆಪಾಡಿಗೋಸ್ಕರ ಊರೂರು ತಿರುಗುತ್ತ ತಮ್ಮ ಪ್ರದರ್ಶನ ನಡೆಸುವಾಗ ದೊಡ್ಡವರು, ಮಕ್ಕಳು ಎಲ್ಲರು ಪ್ರದರ್ಶನದಲ್ಲಿ ಭಾಗವಹಿಸುತ್ತಾರೆ. ಈ ಪ್ರದರ್ಶನ ನಡೆಯುವಾಗ ಮುಖ್ಯ ಹಾಡುಗಾರನ ಹಾಡಿಗೆ ದನಿಗೂಡಿಸುವ ಕೆಲಸ ಸಹ ಕಲಾವಿದರು ಮತ್ತು ಮಕ್ಕಳು ಮಾಡುತ್ತಾರೆ. ಮುಖ್ಯಹಾಡುಗಾರನ ಹಾಡಿಗೆ ಹೆಚ್ಚಾಗಿ ಮಕ್ಕಳು ಕೂಡ ದನಿಗೂಡಿಸುವುದರಿಂದ ಮಕ್ಕಳಿಗೂ ಸಹ ಇವರ ಕಲೆಗಳು ಸುಲಭವಾಗಿ ಪ್ರಾಪ್ತವಾಗುತ್ತದೆ. ಇವರು ಯಾರ ಬಳಿಯೂ ಹೋಗಿ ಸಂಗೀತ ಕಲೆಯನ್ನು ಕಲಿಯಬೇಕಾದ ಅವಶ್ಯಕತೆಯಿಲ್ಲ. ತನ್ನ ಕುಟುಂಬದ ಹಿರಿಯ ಕಲಾವಿದರ ಜೊತೆ ಹಾಡುತ್ತಿದ್ದರೆ ಸಾಕು ಅವರ ಹಾಡುಗಳು ಸಹಜವಾಗಿ ಮಕ್ಕಳಿಗೆ ಬರುತ್ತವೆ. ಇವರು ಅನುಕರಣೆಯ ಮೂಲಕವಾಗಿ ಕಿನ್ನರಿಯ ನಾದಕ್ಕೆ ತಕ್ಕಂತೆ ಒಂದು ಸ್ವರವು ಅಪಸ್ವರ ಮಾಡದೆ, ಲಯಕ್ಕೆ ತಕ್ಕಂತೆ ಮತ್ತು ಶೃತಿಗೆ ತಕ್ಕಂತೆ ಹಾಡುತ್ತಾರೆ. ಆದರೆ ಇವರು ಶಾಸ್ತ್ರೀಯ ಸಂಗೀತ ಕಲಿಯದಿದ್ದ ಕಾರಣ ರಾಗ, ತಾಳಗಳ ಬಗ್ಗೆ ಶಾಸ್ತ್ರೀಯ ಮಾಹಿತಿ ಇರುವುದಿಲ್ಲ. ಆದರೂ ಇವರು ತಮ್ಮ ಹಾಡಿನ ಮೂಲಕ ಜನರನ್ನು ಮಂತ್ರಮುಗ್ಧರನ್ನಾಗಿಸುವ ಶಕ್ತಿ ಇವರ ಗಾಯನ ಶೈಲಿಯಲ್ಲಿದೆ.

ಗೊಂದಲ ಸಮುದಾಯವು ಕೂಡ ಒಂದು ಸಂಗೀತ ಸಮುದಾಯವಾಗಿದೆ. ಗೊಂದಲಿ ಸಮುದಾಯ ಕಲಾವಿದರ ಹಾಡುಗಾರಿಕೆ ಹಂಡಿಜೋಗಿ ಸಮುದಾಯದ ಕಲಾವಿದರ ಹಾಡುಗಾರಿಕೆಯಲ್ಲಿ ಹೆಚ್ಚು ಕಡಿಮೆ ಒಂದೇ ಹೋಲಿಕೆ ಕಂಡುಬರುತ್ತದೆ. ಗೊಂದಲಿ ಸಮುದಾಯದ ಹಾಡುಗಾರರು ಶಾಂಭವಿ, ಅಂಬಾಭವಾನಿಯ ಶ್ಲೋಕದ ಮೂಲಕ ಪ್ರಾರಂಭ ಮಾಡಿದರೆ ಹಂಡಿಜೋಗಿ ಕಲಾವಿದರು ಅರ್ಜುನನ ಹಾಡಿನ ಮೂಲಕ ಪ್ರಾರಂಭ ಮಾಡುತ್ತಾರೆ.

ಗೊಂದಲಿ ಸಮುದಾಯದ ಕಲಾವಿದರು ಯಾವುದೇ ಸ್ಥಳಕ್ಕೆ ಹೋದರೂ ಆ ಸ್ಥಳಕ್ಕೆ ತಕ್ಕಂತೆ ಆ ಪರಿಸರಕ್ಕೆ ಸನ್ನಿವೇಶಕ್ಕೆ ತಕ್ಕ ಹಾಗೆ ಸಾಹಿತ್ಯ ಬದಲಾವಣೆ ಮಾಡಿ ಹಾಡುತ್ತಾರೆ. ಅದೇ ತರನಾಗಿ ಹಂಡಿಜೋಗಿ ಕಲಾವಿದರು ಕೂಡ ಆಯಾ ಸ್ಥಳಕ್ಕೆ ತಕ್ಕಂತೆ, ಸಂದರ್ಭ ಮತ್ತು ಕೇಳುಗರ ಪ್ರತಿಕ್ರಿಯೆಗಳನ್ನು ನೋಡಿಕೊಂಡು ನಿಂತ ಸ್ಥಳದಲ್ಲಿಯೇ ಹೊಸದನ್ನು ಕಟ್ಟಿ ಹಾಡಬಲ್ಲ ಶಕ್ತಿ ಈ ಕಲಾವಿದರಿಗಿದೆ. ವಿಡಂಬನೆ, ಸಾಮಾಜಿಕ ಸಂಗತಿಗಳ ವಿಮರ್ಶೆ, ದೊಡ್ಡ ದೊಡ್ಡ ರಾಜಕೀಯ ಮನುಷ್ಯರ ದಬ್ಬಾಳಿಕೆ

ನವಿರು ವ್ಯಂಗ್ಯ ಇವರ ಹಾಡುಗಾರಿಕೆಯಲ್ಲಿ ಕಂಡುಬರುತ್ತದೆ. ಇವರ ಹಾಡುಗಾರಿಕೆಯಲ್ಲಿ ಹಂಡಿಜೋಗಿಯವರ ಸಂಗೀತದಲ್ಲಿಯೂ ವೈವಿಧ್ಯಮಯವಾಗಿದೆ. ಅಚ್ಚ ಜಾನಪದ, ಅರೆ ಜಾನಪದ ಎರಡು ಪದ್ಧತಿಗಳು ಇಂದಿನ ಹಂಡಿಜೋಗಿಯವರ ಸಂಗೀತದಲ್ಲಿ ಕಂಡುಬರುತ್ತದೆ. ಪ್ರಸ್ತುತ ಹಂಡಿಜೋಗಿಯವರ ಸಂಗೀತದಲ್ಲಿ ಶಿಷ್ಟ ಸಂಗೀತವನ್ನೂ ಸಹ ನಾವು ಕಾಣಬಹುದು.

ಅಚ್ಚ ಜಾನಪದ ಸಂಗೀತವೆಂದರೆ ರಾಜಹಂಸ-ಪರಮಹಂಸ ಮುಂತಾದ ಕಾವ್ಯಗಳನ್ನು ಹಾಡುವುದು. ಈ ಹಾಡುಗಾರಿಕೆಯಲ್ಲಿ ಯಾವುದೇ ರೀತಿಯ ಶಾಸ್ತ್ರೀಯ ನಿಯಮಗಳಿಂದ ಕೂಡಿಲ್ಲ. ಅರೆ ಜಾನಪದ ಅಂದರೆ ಕಾಲಕ್ರಮೇಣ ಬದಲಾವಣೆ ಮಾಡುತ್ತ, ಆಯಾ ಸ್ಥಳಗಳಿಗೆ ತಕ್ಕಂತೆ ಮತ್ತು ಆಯಾ ಪ್ರದೇಶದ ಜನಗಳಿಗನುಗುಣವಾಗಿ ಸಾಹಿತ್ಯವನ್ನು ಬದಲಾವಣೆ ಮಾಡುತ್ತ ತಮ್ಮ ಸಂಗೀತ ಪ್ರದರ್ಶನವನ್ನು ಮಾಡುತ್ತಾರೆ. ಇಂದಿನ ಹಂಡಿಜೋಗಿಯವರ ಸಮುದಾಯದ ಕಲಾವಿದರು ಶಾಸ್ತ್ರೀಯ ಸಂಗೀತವನ್ನು ಕಲಿತು ತಮ್ಮ ಸಂಗೀತದಲ್ಲಿ ಅಳವಡಿಸಿಕೊಂಡು ಹಾಡುತ್ತಿದ್ದಾರೆ. ಕೆಲವು ತಂಡದವರು ಇಂದಿಗೂ ಈ ಅಚ್ಚ ಜಾನಪದ ಸಂಗೀತವನ್ನು ಉಳಿಸಿಕೊಂಡು ಬಂದಿದ್ದಾರೆ. ತೀರಾ ಸರಳ ಹಾಗೂ ನೇರವಾಗಿರುವ ಈ ಮೂಲ ಸಂಗೀತ ಶೈಲಿ ನಿರಾಭರಣ ಸುಂದರಿಯಂತೆ, ತನ್ನ ಸಂಗೀತ ಕೃತಿಯ ಚೌಕಟ್ಟಿನೊಳಗೆ ಸಾಧ್ಯವಾದಷ್ಟು ಸೊಗಸು-ವೈವಿಧ್ಯತೆಗಳನ್ನು ಸೃಷ್ಟಿಸಿಕೊಳ್ಳುವಲ್ಲಿ ಈ ಸಂಗೀತ ಶೈಲಿ ಯಶಸ್ವಿಯಾಗಿದೆ ಎಂದು ಹೇಳಬಹುದು. ಇವರ ಸಂಗೀತದ ಹಾಡುಗಳು ರಾಗಬದ್ಧವಾದಂಥವುಗಳಲ್ಲ. ಆದರೂ ಸ್ವರಗಳನ್ನು ಒಳಗೊಂಡಿರುತ್ತದೆ. ಅವರ ಸಾಹಿತ್ಯಕ್ಕೆ ತಕ್ಕಂತೆ ಅವರ ದಾಟಿಗಳು ಕಂಡುಬರುತ್ತವೆ. ಇವರ ಹಾಡುಗಾರಿಕೆಯಲ್ಲಿ ಯಾವುದೇ ರೀತಿಯ ಹಾಡಾಗಿದ್ದರೂ, ಅದನ್ನು ಹಾಡುವಿಕೆಯಲ್ಲಿ ಒರಟುತನವೇ ಎದ್ದು ಕಾಣಿಸುತ್ತದೆ. ಶಾಸ್ತ್ರೀಯ ಸಂಗೀತವನ್ನು ಕಲಿತ ಕೆಲವರು ಮಾತ್ರ ನಯವಾದ ಧಾಟಿಯಲ್ಲಿ ಹಾಡುತ್ತಾರೆ.

141335 ಅಕ್ಷರ ಗ್ರಂಥಾಲಯ

**ಕಿನ್ನರಿ ಮೇಳ :** ಹಂಡಿಜೋಗಿ ಮೇಳದಲ್ಲಿ ಕಿನ್ನರಿ ವಾದ್ಯವನ್ನು ಶೃತಿಗಾಗಿ ಬಳಸುತ್ತಾರೆ. ಹಂಡಿಜೋಗಿ ಕಲಾವಿದರು ಈ ಕಿನ್ನರಿವಾದ್ಯವನ್ನು "ಸ್ವರಮಾತಾ" ಸರಸ್ವತಿ ಎಂದು ಕರೆಯುತ್ತಾರೆ. ಹಂಡಿಜೋಗಿ ಕಲಾವಿದರು ಭಾವತುಂಬಿ ಹಾಡಬೇಕೆಂದರೆ ಕಿನ್ನರಿ ವಾದ್ಯದ ನಾದ ಮುಖ್ಯ. ಕಿನ್ನರಿಮೇಳದ ಮುಖ್ಯಗಾಯಕ ಕಿನ್ನರಿ ವಾದ್ಯದ ತಂತಿಯನ್ನು ಮೀಟುತ್ತ ನಡೆದರೆ ದೊಡ್ಡ ದೊಡ್ಡ ಕಥೆ-ಕಾವ್ಯಗಳು ತಾವಾಗಿಯೇ ಅವರ ನಾಲಿಗೆಯಲ್ಲಿ ನುಡಿಯುತ್ತವೆ. ಆ ಕಿನ್ನರಿ ವಾದ್ಯದ ನಾದ ಮಾಧುರ್ಯದ ಜೊತೆಯಲ್ಲಿ ಇಡೀ ರಾತ್ರಿಯೆಲ್ಲ ಕಿನ್ನರಿ ಮೇಳದವರು ಹಾಡುತ್ತಾರೆ. ಸಾಮಾನ್ಯವಾಗಿ ಎಲ್ಲ ಸಂಗೀತ ಮೇಳದವರು ತಮ್ಮ ದೇವರ ಪ್ರಾರ್ಥನೆಯೊಂದಿಗೆ ಸಂಗೀತ ಕಛೇರಿ ಪ್ರಾರಂಭ ಮಾಡುವ ರೀತಿಯಲ್ಲೆ ಹಂಡಿಜೋಗಿ ಕಲಾವಿದರು ತಮ್ಮ ಸಂಗೀತ ಕಛೇರಿ ಪ್ರಾರಂಭ ಮಾಡುವ ಮುಂಚೆ ಶಾಂಭವಿssss

ಆದಿಶಕ್ತಿ, ದುರ್ಗಾದೇವಿ, ಮಹಾಂಕಾಳಿ ದೇವಿ
ಚಾಮುಂಡಿ, ತ್ರಿಲೋಕಮಾತೆ
ಪಾಂಡವರ ದೇವತೆಯಾದ



ಪಟ್ಟಣದ ಎಲ್ಲಮ್ಮ ನಿಮ್ಮ ಪಾದಪೂಜೆ ಮಾಡುತಿರುವೆ
ಭಕ್ತರನ್ನು ರಕ್ಷಿಸು ಶಿವಶಂಕರ ಎಂದು

ದೇವಿ ಮತ್ತು ಶಂಕರನನ್ನು ನೆನೆಯುತ್ತ ಕಿನ್ನರಿ ಜೋಗಿಗಳ ಮೇಳದವರು ಮಧುರ ಸ್ವರದಲ್ಲಿ ಹಾಡು ಪ್ರಾರಂಭ ಮಾಡಿದರೆಂದರೆ ಸ್ವರ್ಗವೇ ಭೂಲೋಕಕ್ಕೆ ಇಳಿದಂತೆ, ಸ್ವರ್ಗದ ದೇವಾನುದೇವತೆಯವರು ಭೂಲೋಕದಲ್ಲಿ ಸಂಗೀತ ಕಚೇರಿ ನಡೆಸುತ್ತಿದ್ದಾರೆ ಎಂದು ಭಾಸವಾಗುತ್ತದೆ. ಅಷ್ಟೊಂದು ಸುಮಧುರವಾಗಿ ಸುಮಧುರ ಕಂಠದಲ್ಲಿ ಹಾಡುತ್ತಾರೆ.

ಶಾಸ್ತ್ರೀಯ ಸಂಗೀತ ಕಲಾವಿದರು ಶಾಸ್ತ್ರೀಯ ಸಂಗೀತ ಚೌಕಟ್ಟಿನಲ್ಲಿ ಶಾಸ್ತ್ರಬದ್ಧವಾಗಿ ಆಲಾಪ ಮಾಡುವ ರೀತಿಯಲ್ಲೇ, ಹಂಡಿಜೋಗಿ ಕಲಾವಿದರು ಸಹ ಸಂಗೀತ ಕಚೇರಿ ಪ್ರಾರಂಭದಲ್ಲಿ ಆಲಾಪನೆ ಮಾಡುತ್ತಾರೆ. ಆದರೆ ಹಂಡಿಜೋಗಿ ಕಲಾವಿದರ ಆಲಾಪ ಶಾಸ್ತ್ರಬದ್ಧವಾಗಿ ಇರುವುದಿಲ್ಲ. ತಮಗೆ ಹೇಗೆ ತಿಳಿಯುತ್ತೋ ಹಾಗೆ ಆಲಾಪನೆ ಮಾಡುತ್ತ ಸಂಗೀತ ಕಚೇರಿ, ಪ್ರಾರಂಭ ಮಾಡುತ್ತಾರೆ.

ಕಿನ್ನರಿ ಜೋಗಿಯ ಮೇಳದವರು ಮಹಾಭಾರತದ ವಿವಿಧ ಪರ್ವಗಳನ್ನು ಅನೇಕ ರಾತ್ರಿಗಳವರೆಗೆ ಹಾಡಬಲ್ಲ ಮಹಾನ್ ಕಲಾವಿದ ರಾಗಿದ್ದಾರೆ. ಇವರ ಮೇಳದಲ್ಲಿ ಕಿನ್ನರಿ, ದಂಬರಿಗೆ, ಪಿಳ್ಳಂಗೋವಿ, ಚಿಟಗಿ, ಗಗ್ಗರಿ, ಕಿರುಗೆಜ್ಜೆ, ಇವೆಲ್ಲ ವಾದ್ಯಗಳು ಕಂಡುಬರುತ್ತವೆ. ಸಾಮಾನ್ಯವಾಗಿ ಐದು ಜನ ಕಲಾವಿದರಿರುವ ಕಿನ್ನರಿ ಮೇಳದಲ್ಲಿ ಮುಖ್ಯ ಹಾಡುಗಾರ ಅಥವಾ ಮುಖ್ಯ ಹಾಡುಗಾರನ ಜವಾಬ್ದಾರಿ ಹೆಚ್ಚಿರುತ್ತದೆ. ಮುಖ್ಯ ಹಾಡುಗಾರ ಹಾಡಿದ ಹಾಡನ್ನು ಹಿಮ್ಮೇಳದವರು ಅನುಕರಿಸುತ್ತಾರೆ. ಇಲ್ಲಿ ಮುಖ್ಯ ಹಾಡುಗಾರ ಎಲ್ಲ ಹಾಡುಗಳನ್ನು ಕಂಠಪಾಠ ಮಾಡಬೇಕಾಗುತ್ತದೆ. ಆದರೆ ಹಿಮ್ಮೇಳದವರು ಹಾಡನ್ನು ಕಂಠಪಾಠ ಮಾಡಿರದಿದ್ದರೂ ಸಹ ಸಂಗೀತ ಪ್ರದರ್ಶನದಲ್ಲಿ ಸೇರಿಕೊಳ್ಳಬಹುದು. ಮುಖ್ಯ ಹಾಡುಗಾರ ಹಾಡಿದನ್ನು ಹಿಮ್ಮೇಳದವರು ಹಾಡುವ ಕಾರಣದಿಂದ ಅವರು ಕಂಠಪಾಟಮಾಡುವುದು ಅವಶ್ಯಕತೆ ಇರುವುದಿಲ್ಲ.

ಮುಖ್ಯ ಹಾಡುಗಾರ ಜನರ ಮನೋರಂಜನೆಗೊಳಿಸುವ ನಿಟ್ಟಿನಲ್ಲಿ ಜನರ ಮನೋರಂಜನೆಗೋಸ್ಕರ ತಮ್ಮ ಸಂಗೀತ ಕಚೇರಿ ವೇಳೆ ತಮ್ಮ ಗಮನವನ್ನು ಅತ್ತಿತ್ತ ಹೋಗದಂತೆ ಶ್ರುತಿ–ಸ್ಥಾಯಿ–ಸಾಹಿತ್ಯದ ಮೇಲೆ ಗಮನ ಕೊಟ್ಟು ಹಾಡುತ್ತಾನೆ. ಮುಖ್ಯಹಾಡುಗಾರನ ಜವಾಬ್ದಾರಿ ಬಹಳ ಮುಖ್ಯವಾಗಿರುತ್ತದೆ. ಎಷ್ಟೋ ಸಮಯದಲ್ಲಿ ಮುಖ್ಯ ಹಾಡುಗಾರನ ಜತೆಗೆ, ಹಿಮ್ಮೇಳದ ಹಾಡುಗಾರರು ಹಾಡುತ್ತಾರೆ.

ಇವರ ಸಂಗೀತ ಕಚೇರಿ ಅವಧಿ ಕಡಿಮೆಯಾದಂತೆ ಹಾಡುಗಾರಿಕೆಯಲ್ಲೂ ಬದಲಾವಣೆ ಆಗಿ, ಎರಡು ಬಾರಿ ಹಾಡುವುದನ್ನು ಒಂದೇ ಬಾರಿ ಹಾಡುವುದು ಇದೆ. ಏಕೆಂದರೆ ಹಾಡನ್ನು ಹಿಗ್ಗಿಸುವ, ಕುಗ್ಗಿಸುವ ಜಾಣತನ ಇಲ್ಲಿನ ಹಾಡುಗಾರನಿಗಿರುತ್ತದೆ. ಆದ್ದರಿಂದ ಕಾಲ, ಸಂದರ್ಭಕ್ಕನುಸಾರವಾಗಿ ಇಲ್ಲಿನ ಹಾಡುಗಾರಿಕೆ ಭಿನ್ನ ರೂಪವನ್ನು ಪಡೆಯುತ್ತದೆ. ಉದಾಹರಣೆಗೆ,

**ಶ್ಲೋಕ**

ಶಾಂಭಾವಿ ಆ
ಆದಿಶಕ್ತಿ ಮಹಾದೇವಿ ದುರ್ಗಾದೇವಿ
ಪಾಂಡವರ ದೇವತೆಯಾದ ಪಟ್ಟಣದ ಯಲ್ಲಮ್ಮ
ಬೆಳಗಿನ ಜಾವ ಪಾದಪೂಜೆಯ ಮಾಡುತಿರುವೆ
ಭಕ್ತರನು ರಕ್ಷಿಸೈ

**ರಾಗ: ದೇಸ್ (ಮಿಶ್ರ)** **ತಾಳ: ದಾದ್ರ**

ಮು.ಗಾ. : ಏ ಹಸ್ತಿನಾಪುರದೊಳಗೆ ಮಹಾವೀರ
ಹಸ್ತಿನಾಪುರದೊಳಗೆ
ವೀರ ದುರ್ಯೋಧನ ನಾನು ಏ ತಮ್ಮ
ವೀರ ದುರ್ಯೋಧನ
ಹಿ.ಗಾ. : ದುರ್ಯೋಧನ ದುಶ್ಯಾಸನ ಮಹಾದೇವ
ಮು.ಗಾ. : ದ್ರೋಣ ಬಿಷ್ಮರೆಲ್ಲಾ ಆ ದ್ರೋಣ ಭಿಷ್ಮರೆಲ್ಲ

**ಕಥೆ**

ಮುಮ್ಮೇಳ : ಎಲ್ಲೆ ತಮ್ಮ
ಹಿಮ್ಮೇಳ : ಹೌದಪ್ಪ
ಮುಮ್ಮೇಳ : ದ್ರೋಣ ಭೀಷ್ಮ ವಿಧುರ
ಹಿಮ್ಮೇಳ : ಆ
ಮುಮ್ಮೇಳ : ದೊಡ್ಡಪ್ಪನಾದಂತ ದ್ರುತರಾಷ್ಟ್ರ ಚಿಕ್ಕಪ್ಪನಾದ ವಿಧುರ
ಮುತ್ತಾತಾನಾದಂತಹ ಭೀಷ್ಮ
ಹಿಮ್ಮೇಳ : ಹಾ

ಮುಮ್ಮೇಳ : ಕುಲಗುರುಗಳಾದಂತ ಗವಿಮುನಿಗಳು
ನಾರದ ಮಹಾಮುನಿಗಳು
ವೃಂದಾಂತ ಮಹಾಮುನಿಗಳು

ಹಿಮ್ಮೇಳ : ಹೌದಪ್ಪ

ಮುಮ್ಮೇಳ : ದೇವ ಒಂದಾನ ಒಂದು ದಿನದೊಳ್ ಹಸ್ತಿನಾಪುರಕ್ಕೆ ಬರಲು

ಹಿಮ್ಮೇಳ : ಹೌದು

ಮುಮ್ಮೇಳ : ಆಗ ಶಕುನಿ ಸೋದರಮಾವನು ಏನು ಮಾಡುವನು ಗೊತ್ತೆ

ಹಿಮ್ಮೇಳ : ಅದೇನುಮಾಡುವನಪ್ಪಾ

ಮುಮ್ಮೇಳ : ಎಲೈ ದುರ್ಯೋಧನ ಎಲೈ ಮಹಾ ಶಕುನಿಯೆ
ಈ ದಾಯದಿ ಭಾಗವು ನನಗೆ ಲಭಿಸಲಿಲ್ಲವಲ್ಲ

ಹಿಮ್ಮೇಳ : ಆಹಾ

ಮುಮ್ಮೇಳ : ಆಗ ದುರ್ಯೋಧನ ಏನು ಮಾಡಿದನು ಗೊತ್ತೆ?

ಹಿಮ್ಮೇಳ : ಏನು ಮಾಡಿದನಪ್ಪ

ಮುಮ್ಮೇಳ : ಮಾವ ಈ ರಾಜ್ಯವನ್ನು ಗೆಲ್ಲಬೇಕೆಂದರೆ ನಾನು ಯಾವ ಪ್ರಕಾರ ಗೆಲ್ಲಬೇಕು

ಹಿಮ್ಮೇಳ : ಆಹಾ

ಮುಮ್ಮೇಳ : ದುರ್ಯೋಧನ ನಾನೊಂದು ಪರಿ ಹೇಳ್ತಿನಿ ಕೇಳು
ಭಾರತದೊಳ ಯುದ್ಧದಲ್ಲಿ ಗೆದ್ದವರಿಗೆ ರಾಜ್ಯ

ಹಿಮ್ಮೇಳ : ಆಹಾ

ಮುಮ್ಮೇಳ : ಸೋತವರಿಗೆ ರಾಜ್ಯವಿಲ್ಲ
ಅದರಂತೆ ಡಂಗುರವನ್ನು ನುಡಿಸಿ ರಣಭೇರಿ ಬಾರಿಸುವಂತವನಾಗು
ಆಮೇಲೆ ಇದರ ತಾತ್ಪರ್ಯವನ್ನು ಹೇಳುತ್ತೇನೆ
ಹಾಗದರೆ ನಕುಲ ಸಹದೇವಾದಿಗಳಿಗೆ

**ಹಾಡು**

ಮು.ಗಾ. : ಶಿಲ್ಪಿ ಕೇಳುವೆನು ನಾನು ಮಹಾದೇವ

ಹಿ.ಗಾ. : ಶಿಲ್ಪಿ ಕೇಳುವೆನು ನಾನುsss

ಮು.ಗಾ. : ಶಿಲ್ಪಿ ಕೇಳುವೆನು ನಾನು ಮಹಾದೇವ

ಹಿ.ಗಾ. : ಶಿಲ್ಪಿ ಕೇಳುವೆನು ನಾನುsss

**ಕಥೆ**

ಮುಮ್ಮೇಳ : ವೀರ ದುರ್ಯೋಧನ ನಾನು ಮಹಾವೀರ ವೀರ ದುರ್ಯೋಧನ ನಾನು
ನಕುಲ ಸಹದೇವರ ಬಳಿಗೆ ಏ ತಮ್ಮ

ಹಿ.ಗಾ. : ನಕುಲ ಸಹದೇವರ ಬಳಿಗೆ

ಮುಮ್ಮೇಳ : ಬೋಗದಲ್ಲಿ ಬಂದನಲ್ಲ ನಕುಲನಿಗೆ ಏನೆಂದು ಕೇಳುತ್ತಾನೊ
ದೇವಾ

ಹಿ.ಗಾ. : ಆಹಾ

ಮುಮ್ಮೇಳ : ಆ ನಕುಲನಿಗೆ ಬಂದು ಏನು ಕೇಳುವನು ದುರ್ಯೋಧನ
ನಕುಲ ನೀವು ಕಂಡರೆ ಶಿಲ್ಪಿಯಲ್ಲಿ ಪರಾಕ್ರಮ
ಪಾಂಡವರಿಗೆ ಮರಣ ಬರಬೇಕೆಂದರೆ ಯಾವ ಪ್ರಕಾರವಾಗಿ ಬರುತ್ತದೆ
ಈ ರೀತಿಯಾಗಿ ದುರ್ಯೋಧನ ನಕುಲನಿಗೆ ಕೇಳುತ್ತಿದ್ದಾನೆ

ಹಿ.ಗಾ. : ಏನು ಹೇಳಪ್ಪ

ಮುಮ್ಮೇಳ : ಶಿಲ್ಪಿ ಸುಳ್ಳದಂತೆ ನಕುಲ ಸಹದೇವರು ಏನೆನುವರೆ ಗೊತ್ತೆ
ದುರ್ಯೋಧನ ಪಾಂಡವರಿಗೆ ಮರಣ ಬರಬೇಕೆಂದರೆ
ರಣರಂಗದೊಳ ಏಳು ಗಾವುದದ ಮಧ್ಯದೊಳ ಇರತಕ್ಕಂತ
ಸ್ಮಶಾನದಲ್ಲಿ ಇರ್ತಕ್ಕಂತ ಆಲದ ಮರದ ಬೇರು ಸಮೇತ
ಕಿತ್ತುಕೊಂಡು ಬಂದು

ಹಿ.ಗಾ. : ಹೌದಪ್ಪ

ಮುಮ್ಮೇಳ : ಆ ಮರವು ಊರ ಮುಂಭಾಗದೊಳ್
ರಣರಂಗದೊಳು ಹೂಣಿದರೆ ಮಾತ್ರ ಅವನಿಗೆ

**ಹಾಡು**

ಮು.ಗಾ. : ಜಯವಾಗುವುದು ನೋಡು

ಹಿ.ಗಾ. : ದುರ್ಯೋಧನ ಜಯವಾಗುವುದು ನೋಡು

ಮು.ಗಾ. : ಜಯವಾಗುವುದು ನೋಡು ಅವರಿಗೆ ಜಯವಾಗುವುದು ನೋಡು
ದುರ್ಯೋಧನ ರಣರಂಗದೊಳು ಜಯವಾಗುವುದು

ಹಿ.ಗಾ. : ಹೌದಪ್ಪ

ಮು.ಗಾ. : ಆಗ ದುರ್ಯೋಧನ ಹಾಡುತ್ತಿದ್ದಾನೆ

**ಹಾಡು**

ಮು.ಗಾ. : ಆಯ್ಯೋ ನನ್ನ ಹಣೆಬರಹ

ಹಿ.ಗಾ. : ಆಯ್ಯೋ ನನ್ನ ಹಣೆಬರಹsss

ಮು.ಗಾ. : ಅಂತಪ್ಪ ಮಹಾವೀರರು

ಹಿ.ಗಾ. : ಅಂತಪ್ಪ ಮಹಾವೀರರುsss

ಮು.ಗಾ. : ಯಾರು ಇರುವುದು ಇಲ್ಲಿ

ಹಿ.ಗಾ. : ಯಾರು ಇರುವುದು ಇಲ್ಲಿsss

**ಕಥೆ**

ಮುಮ್ಮೇಳ : ಆಯ್ಯೋ ಅಕಟಕಟ ಬಾಂಧವ, ನೀಲಕಂಠ, ನೀಲಧ್ವಜ
ಬನ್ನಿಮಹಾಂಕಾಳಿಯ ಗಡಿ ದುರ್ಗಾದೇವಿಯ ಪಾಂಡವರ
ಮನೆದೇವತೆಯಾದ ಪಟ್ಟಣದ ಯಲ್ಲಮ್ಮ
ಅಷ್ಟೇ ಅಲ್ಲದೆ ಅಂತಪ್ಪ ಮಹಾವೀರಾದಿ ಮಹಾವೀರರು
ರಣರಂಗದಲ್ಲಿ ಇರ್ತಕ್ಕಂತ ಆಲದ ಮರವನ್ನು ತೆಗೆದುಕೊಂಡು ಬಂದು
ಸೂರ್ಯೋದಯದೊಳಗಾಗಿ ಆಲದ ಮರವನ್ನು ತೆಗೆದುಕೊಂಡು ಬಂದು
ಹೂಣೋರು ಯಾರಿದ್ದಾರೆ. ದೇವಾ ಅಂತ ಪರಾಕ್ರಮಿಗಳು ಯಾರಿದ್ದಾರೆ

**ಹಾಡು**

ಮು.ಗಾ. : ದುರ್ಯೋಧನ ಹೋದ ತಕ್ಷಣ ಯಾರಬಂದರಪ್ಪ

ಹಿ.ಗಾ. : ಯಾರಬಂದರಪ್ಪ
ಶ್ರೀಕೃಷ್ಣ ಪರಮಾತ್ಮನೊ

ಸಂಗೀತ, ನೃತ್ಯ, ಸಾಹಿತ್ಯ ಮತ್ತು ಸಂಭಾಷಣೆ ಈ ಎಲ್ಲ ಅಂಶಗಳು ಒಟ್ಟಾಗಿ ನೋಡುವ ಮತ್ತು ಕೇಳುವ ಮನಸ್ಸಿನ ಮೇಲೆ ಪ್ರಭಾವ ಬೀರುತ್ತವೆ. ಮುಮ್ಮೇಳದ ಕಥೆಗಾರನ ನಿರೂಪಣೆಗೆ ಹಿಮ್ಮೇಳದವರು ಪ್ರತಿಕ್ರಿಯಿಸುವ ರೀತಿಯಾಗಲೀ ಕಥೆಯನ್ನು ಹೇಳುವ ಕ್ರಮವಾಗಲೀ, ನೋಡಿದಾಗ ಗೊಂದಲಿಗರಿಗೂ ಇವರಿಗೂ ಅಂಥ ವ್ಯತ್ಯಾಸವೇನೂ ಕಾಣುವುದಿಲ್ಲ.[೫] ಆದರೆ ವಾದ್ಯಗಳಲ್ಲಿ ಮತ್ತು ವಾದ್ಯಗಳ ನುಡಿಸುವ ಕ್ರಮದಲ್ಲಿ ವ್ಯತ್ಯಾಸಗಳು ಕಂಡುಬರುತ್ತವೆ. ಹಂಡಿಜೋಗಿ ಸಂಗೀತ ಮೇಳದಲ್ಲಿ ಕಿನ್ನರಿ, ದಂಬರಿಗೆ, ಪಿಳ್ಳಂಗೋವಿ, ಚಿಟಿಕೆ ತಾಳ, ಮತ್ತು ಕಿರುಗೆಜ್ಜೆ ಕಂಡುಬರುತ್ತವೆ. ಇತ್ತೀಚಿನ ದಿನಗಳಲ್ಲಿ ಹಾರ್ಮೋನಿಯಂ ಕೂಡ ಬಳಸುತ್ತಾರೆ. ಕಾರಣ ಇವರ ಮೇಳದಲ್ಲಿ ಸುಮಾರು ಐದು ಜನ ಕಲಾವಿದರು ಇರುತ್ತಾರೆ. ಇವರು ಕಿನ್ನರಿ ವಾದ್ಯವನ್ನು ಶ್ರುತಿಗೊಳಿಸಿ ಹಾಡುತ್ತಾರೆ. ಒಂದು ಕಿನ್ನರಿ ವಾದ್ಯ ಶ್ರುತಿ ಐದು ಜನ ಕಲಾವಿದರಿಗೆ ಶ್ರುತಿ ಸ್ಥಾನ ಕಡಿಮೆ ಕೇಳಿಸುವುದರಿಂದ ಶ್ರುತಿಗೋಸ್ಕರ ಹಾರ್ಮೋನಿಯಂ ವಾದ್ಯವನ್ನು ಬಳಸಿಕೊಳ್ಳುತ್ತಾರೆ.

ಕಿನ್ನರಿ ವಾದ್ಯದ ಜೊತೆಗೆ ಚಿಟಿಕೆ, ತಾಳ, ಕಿರುಗೆಜ್ಜೆ, ಗಗ್ಗರಿ ಬಳಸುತ್ತಾರೆ. ಇವರು ಹಾಡುವಾಗ ಹಾಡಿನ ತಾಳದ ಲಯಕಾರಿಯನ್ನು ಆ ಕಿನ್ನರಿ ವಾದ್ಯದಲ್ಲಿ ಶ್ರುತಿಯ ಜೊತೆಗೆ ನಾಲ್ಕು ಮಾತ್ರೆ, ಆರು ಮಾತ್ರೆಗಳು ಮತ್ತು ಏಳು ಮಾತ್ರೆಗಳನ್ನು ನುಡಿಸುತ್ತಾ ಹಾಡುತ್ತಾರೆ. ಆದರೆ ಗೊಂದಲಿಗರ ಮೇಳದಲ್ಲಿ ಶ್ರುತಿಗಾಗಿ ಕಿನ್ನರಿ ಬಳಸುವುದಿಲ್ಲ. ಶ್ರುತಿಗೋಸ್ಕರ ಚೌಡಿಕೆ ವಾದ್ಯವನ್ನು ಬಳಸುತ್ತಾರೆ. ತಾಳ ಲಯಗೋಸ್ಕರ ಸಂಬಾಳ ಮತ್ತು ತಾಳ ಗೆಜ್ಜೆಗಳನ್ನು ಬಳಸುತ್ತಾರೆ.

ಇವೆಲ್ಲಕ್ಕಿಂತ ಪ್ರಮುಖವಾದ ಮತ್ತೊಂದು ಅಂಶವೆನೆಂದರೆ ಕಿನ್ನರಿ ಜೋಗಿಗಳು ಆಧುನಿಕ ಕಾಲಕ್ಕೆ ತಕ್ಕಂತೆ ಸ್ಪಂದಿಸುತ್ತಿರುವುದಾಗಿದೆ. ಆಯಾ ಸ್ಥಳ, ಸಂದರ್ಭ ಮತ್ತು ಪ್ರೇಕ್ಷಕರ ಪ್ರತಿಕ್ರಿಯೆಯನ್ನು ನೋಡಿಕೊಂಡು ನಿಂತ ನೆಲದಲ್ಲಿಯೇ ಹೊಸದನ್ನು ಕಟ್ಟಿ ಹಾಡಬಲ್ಲ ಶಕ್ತಿ ಇವರಿಗಿದೆ. ವ್ಯವಸ್ಥೆಯ ವಿಡಂಬನೆ, ಸಾಮಾಜಿಕ ಸಂಗತಿಗಳ ವಿಮರ್ಶೆ, ದೊಡ್ಡ ದೊಡ್ಡ ಮನುಷ್ಯರ ದಬ್ಬಾಳಿಕೆಯ ನವಿರು ವ್ಯಂಗ್ಯ ಇವರ ಕಥೆಗಳ ನಡುನಡುವೆ ಬಂದು ಹೋಗುತ್ತವೆ. ಉದಾಹರಣೆಗೆ ಪ್ರಜಾಪ್ರಭುತ್ವದಲ್ಲಿ ಆಗಿಹೋಗುವ ಮಂತ್ರಗಳಿಗೆ ಲೆಕ್ಕವಿಲ್ಲ. ಅದನ್ನು ಹೀಗೆ ಹಾಡುತ್ತಾರೆ.

ಏನು ಮಂತ್ರಿ ಏನು ಮಂತ್ರಣ್ಣ
ಈ ದೇಶದಾಗ ಏಸು ಜನ ಮಂತ್ರಿ ಆಗಿ ಹೋದ್ರಣ್ಣ
ಇದೇ ಶತಮಾನದ ಆರಂಭದಲ್ಲಿ ಸೈಕಲ್ಲನ್ನೇ

ಕಾಣದಿದ್ದ ನಮ್ಮ ಗ್ರಾಮೀಣ ಲೋಕ ಈಗ ಸೈಕಲ್ಲನ್ನು ಒಂದು ಮುಖ್ಯ ಸಾಧನವಾಗಿ ಬಳಸುತ್ತದೆ.

ಈಗ ಎಲ್ಲರಿಗೂ ಬೇಕು ಸೈಕಲ್
ಎಲ್ಲವನ್ನು ಹಚ್ತಾರಪ್ಪ ಸೈಕಲ್ಲಾ
ಒಳ್ಳೆ ಸೈಕಲ್ಲಾ

ಸಮಾಜದಲ್ಲಿ ಹೆಣ್ಣೆತ್ತವರಿಗೆ ಗಂಡೆತ್ತವರು ಯಾವ ರೀತಿಯಲ್ಲಿ ವರದಕ್ಷಿಣೆ ಕಿತ್ತುಕೊಳ್ಳುತ್ತಾರೆ ಎಂದರೆ ಯಾರಿಗು ಗೊತ್ತಿಲ್ಲ ಅದನ್ನು ಹೀಗೆ ಹಾಡುತ್ತಾರೆ.

**ವರದಕ್ಷಿಣೆ ಕುರಿತು**

**ರಾಗ: ಭೀಮಪಲಾಸಿ** **ತಾಳ: ಕವಾಲಿ**

ನಾವೇನು ವರದಕ್ಷಿಣೆ ಕೇಳೋರಲ್ಲ
ನೀವೇನು ಸಾಲಮಾಡಿ ಕೊಡಬೇಕಿಲ್ಲ
ಹೌದ್ರಿ ನೀವೇನು ಸಾಲಮಾಡಿ ಕೊಡಬೇಕಿಲ್ಲ
ಇದ್ದುದ್ರೊಳಗೆ ಸಾಕಿರಿ ವರ ಹುಟ್ಟಸ್ಯಾರಲ್ಲ
ಹೆಚ್ಚು ಕಡಿಮೆ ಅದ್ರು ನಾಳೆ ನೋಡೋರಿಲ್ಲ

ಗಂಡಿಗಂತು ಬಟ್ಟೆ ನೀವು ಕೊಡಬೇಕಿಲ್ಲ
ವಾಚು, ಉಂಗುರ ಚೈನಾಸರ ಮಾಮೂಲೆಲ್ಲ
ವರದಕ್ಷಣೆ ಅಂತ ನಾವು ಕೇಳೋದಿಲ್ಲ
ಮದುವೆ ಖರ್ಚು ನೋಡಬೇಕ್ರಿ ಮತ್ತೇನಿಲ್ಲ.

ಹಬ್ಬಕ್ಕೆ ನಿಮ್ಮ ಮಗಳ ಕರಕೊಂಡು ಬರ್ಬೇಕಲ್ಲ
ನಿಮ್ಮ ಮಗಳಿಗೊಂದು ಸ್ಕೂಟಿ ಕೊಡ್ರಿ ನಮ್ಗೇನಲ್ಲ
ಪೆಟ್ರೋಲ್ ಗಿಟ್ರೋಲ್ ಅಂತ ನಾವು ಕೇಳೂರಲ್ಲ
ಸಣ್ಣದೊಂದು ಪೆಟ್ರೋಲ್ ಬಂಕ್ ಕಟ್ಟಿಸಿಕೊಡ್ರಿ ಕೆಲ್ಸ ನಮಗಿಲ್ಲ

ಇಂಥ ಹಳ್ಳಿಯಲ್ಲಿ ಬದಕೊ ಜನ ನಾವೇನಲ್ಲ
ಪ್ಯಾಟಿ ಊರಿಗಾ ನಮ್ಮ ಮನೆ ಒಂದು ಇಲ್ವಲ್ಲ
ನಿಮ್ಮ ಮಗಳಿಗೊಂದು ಸೈಟು ಕೊಡಿಸಿರಿ ನಮ್ಗೇನಲ್ಲ
ಮನೆ ಕಟ್ಟಿಸಲಿಕ್ಕೆ ಹತ್ತು ಲಕ್ಷ ಚೆಕ್ ಕೊಡ್ರಿ ಕ್ಯಾಶೇನಲ್ಲ.

ಹೆ ಎಮೆ ಬಿ ಎ ಓದಿದ್ದು ನಾವು ಸುಮ್ನೆಅಲ್ಲಾ
ಅಲ್ಲಿ ಬಿ ಎ ಪಾಸ ಮಾಡಕ ಖರ್ಚು ಇದ್ದೇ ಆಯಿತಲ್ಲ
ಆ ಖರ್ಚಿನ ದುಡ್ಡಲ್ಲಿ ಅರ್ಧ ಕೊಡ್ರಿ ಮತ್ತೇನಿಲ್ಲ
ಇಲ್ಲಿ ತನಕ ಹೇಳಿದ ಮಾತಲೂ ವರದಕ್ಷಿಣೆ ಅನ್ನೊ ಮಾತು ಬರಲೇ ಇಲ್ವಲ್ಲ.

ಇವತ್ತಿನ ಕಾನೂನು ನಿಮ್ಗೆ ಗೊತ್ತೇ ಆಯಿತಲ್ಲ
ನಿಮ್ಮ ಮನೆ ಆಸ್ತಿಲ್ಲಿ ಮಗಳಿಗೆ ಪಾಲು ಇದ್ದೇ ಆಯಿತಲ್ಲ
ನಿಮ್ಮ ಅಪ್ಪ ಮಾಡಿದ ಆಸ್ತಿ ನಾವು ಕೇಳೋರಲ್ಲ
ಅವಳ ಅಜ್ಜನ ಆಸ್ತಿಯಲ್ಲಿ ಅರ್ಧಕೊಡ್ರಿ ಮತ್ತೇನಿಲ್ಲ.
ಮತ್ತು ಗಂಭೀರ ರಸಕ್ಕೆ

ಇಂಥ ನೂರಾರು ಹಾಡುಗಳನ್ನು ಕಟ್ಟಿ ಧಾರ್ಮಿಕ ಕಥೆಗಳ ನಡುವೆ ಹಲವಾರು ರೀತಿಯ" ಹಾಡುಗಳನ್ನು ಹಾಡಿ ಜನರನ್ನು ರಂಜಿಸುವ ಈ ಕಲಾವಿದರ ಜಾಣ್ಮೆ ಮೆಚ್ಚುವಂಥದ್ದು.

ಈ ರೀತಿಯ ಜಾಣ್ಮೆಯ ಕಲೆಯ ಮೂಲಕದಿಂದಲೇ ಕಿನ್ನರಿ ಜೋಗಿ ಕಲೆ ಇವತ್ತಿಗೂ ಕೂಡ ಹೆಚ್ಚು ಜನಮೆಚ್ಚುಗೆ ಪಡೆದುಕೊಂಡಿದೆ.

**ವಾದ್ಯ ಪ್ರಕಾರಗಳು** : ವಾದ್ಯಗಳ ರಚನೆ ಮತ್ತು ಅವುಗಳನ್ನು ನುಡಿಸುವ ಕ್ರಮ.

ಸುಸಿರ ವಾದ್ಯ ಮತ್ತು ಅವನದ ವಾದ್ಯಗಳು ಕಂಡುಬರುವಂತೆ ಹಂಡಿಜೋಗಿ ಕಲಾವಿದರ ವಾದ್ಯಗಳಲ್ಲಿ ಸಹ ನಾಲ್ಕು ಪ್ರಕಾರದ ವಾದ್ಯಗಳನ್ನಾಗಿ ವಿಂಗಡಿಸಲಾಗಿದೆ ಕಂಡುಬರುತ್ತವೆ.

**ಹಂಡಿಜೋಗಿ ಕಲಾವಿದರು ಬಳಸುವ ವಾದ್ಯಗಳು**

ಕಿನ್ನರಿ, ದಂಬರಿಗೆ, ಪಿಳಂಗೋವಿ, ಶಂಖ, ಚಿಟಿಗೆ, ಕಿರುಗೆಜ್ಜೆ ಇತ್ತೀಚೆಗೆ ಹಾರ್ಮೋನಿಯಂ ಕೂಡ ಬಳಸುತ್ತಿದ್ದಾರೆ ಈ ಮೇಲಿನ ವಾದ್ಯಗಳಲ್ಲಿ ನಾಲ್ಕು ಪ್ರಕಾರಗಳಾಗಿ ವಿಂಗಡಿಸಲಾಗಿದೆ.

ತತವಾದ್ಯ : ಕಿನ್ನರಿ

ಘನವಾದ್ಯ : ಚಿಟಿಗೆ, ಕಿರುಗೆಜ್ಜೆ

ಅವನದ ವಾದ್ಯ : ದಂಬಡಿ

ಸುಸಿರ ವಾದ್ಯ : ಶಂಖ

ತತವಾದ್ಯ: ಕಿನ್ನರಿ ವಾದ್ಯ (ಸೋರೆಬುರುಡೆಗಳಿಗೆ ತಂತಿಯನ್ನು ಬಿಗಿದು ಕಟ್ಟಿರುತ್ತಾರೆ.)

ಸುಶ್ಶಿರ ವಾದ್ಯ: ಶಂಖು, ಹಾರ್ಮೋನಿಯಂ (ಬಾಯಿಂದ ಊದುವ ಮುಖಾಂತರ ಗಾಯನವನ್ನು ಉತ್ಪನ್ನ ಮಾಡಿ ಸ್ವರೋತ್ಪನ್ನ ಮಾಡುವ ಇತ್ಯಾದಿ ವಾದ್ಯಗಳು

ಅವನದ್ದ ವಾದ್ಯ: ದಂಬಡಿ (ಎಮ್ಮೆ, ಉಡ, ಆಡು ಮತ್ತು ಜಿಂಕೆಯ ಚರ್ಮದಿಂದ ಬಿಗಿದಿರುವ ವಾದ್ಯಗಳಿಂದ ಸ್ವರೋತ್ಪನ್ನ ಅಥವಾ ಪ್ರಥಮಾ ನಾದ ಉತ್ಪತ್ತಿಯಾಗುವ ವಾದ್ಯಕ್ಕೆ ಅವನದ್ದ ವಾದ್ಯ ಎನ್ನುತ್ತಾರೆ.

ಘನವಾದ್ಯ: ಚಿಟಿಕೆ, ತಾಳ ಮತ್ತು ಕಿರುಗೆಜ್ಜೆ (ಕಬ್ಬಿಣ, ಕಂಚು ಮತ್ತು ಯಾವುದಾದರೂ ಹಿತ್ತಾಳೆಯಿಂದ ಉತ್ಪತ್ತಿಯಾಗುವ ವಾದ್ಯ)ಗಳೆ ಘನ ವಾದ್ಯಗಳು.

೧) **ಕಿನ್ನರಿ ವಾದ್ಯ** : ಜಾನಪದ ಮತ್ತು ತತ್ವಪದ ಸಂಗೀತದಲ್ಲಿ ಏಕತಾರಿ ಮತ್ತು ಗೀಗೀಪದ ಸಂಗೀತದಲ್ಲಿ ಚೌಡಿಕಿ ಇರುವಂತೆ ಹಂಡಿಜೋಗಿ ಅಥವಾ ಕಿನ್ನರಿ ಜೋಗಿಯವರ ಸಂಗೀತದಲ್ಲಿ ಕಿನ್ನರಿ ವಾದ್ಯವೆ ಬಹಳ ಮುಖ್ಯವಾದಂತಹ ವಾದ್ಯವಾಗಿದೆ.

ಈ ಕಿನ್ನರಿ ವಾದ್ಯ ಎಷ್ಟೊಂದು ಮಹತ್ವ ಪಡೆದಿದೆ ಎಂದರೆ, ಈ ಕಿನ್ನರಿ ವಾದ್ಯದ ಕುರಿತು ಒಂದು ಗಾದೆ ಇದೆ. ಅದೇನೆಂದರೆ "ಕೋಣನ ಮುಂದೆ ಕಿನ್ನರಿ ಬಾರಿಸಿದ ಹಾಗೆ" ರಸಿಕತನವಿಲ್ಲದವರ ಮುಂದೆ ಕಿನ್ನರಿಯಂತ ಅದ್ಭುತ ವಾದ್ಯವನ್ನು ನುಡಿಸಿದರಂತೆ ಅದರ ಸುಮಧುರ ನಾದ ರುಚಿ ಅರಸಿಕನಿಗೆ ರುಚಿಸಬಲ್ಲುದೆ! ತಿಳಿದವರೆ ಬಲ್ಲರು ಕಿನ್ನರಿಯ ನಾದ. "ಯಾದಗಿರಿ ಜಿಲ್ಲೆಯ ಶಹಾಪುರ ತಾಲೂಕಿನ ರಸ್ತಾಪುರ ಗ್ರಾಮದ ಪ್ರಸಿದ್ಧ ವಿದ್ವಾಂಸರಾದ ಭೀಮಕವಿಯವರು ತಾವು ಬರೆದಿರುವ 'ಬಸವ ಪುರಾಣ' ಎಂಬ ಕಾವ್ಯದಲ್ಲಿ ಕಿನ್ನರಿ ಬೊಮ್ಮಯ್ಯನ ವಿಷಯ ಕುರಿತು ಹೇಳುತ್ತಾನೆ. ಅಲ್ಲಿ "ಪರಮಭಕ್ತ ಸಂತ್ಕೃತಿಯಿಂದ ಕಿನ್ನರಿ ವೀಣೆಯಂ ನುಡಿದಂ" ಎಂದು ವರ್ಣಿಸಿದ್ದಾನೆ. ಕಿನ್ನರಿ ಬೊಮ್ಮಯ್ಯನವರು ೧೨ನೇ ಶತಮಾನದಲ್ಲಿದ್ದವರು ಮತ್ತು ಬಸವಣ್ಣನವರ ಸಮಕಾಲೀನವರು ಎಂದು ತಿಳಿಸುತ್ತಾರೆ (ಡಾ. ಬೋರಲಿಂಗಯ್ಯ ಹಿ.ಚಿ., ಕರ್ನಾಟಕ ಜನಪದ ಕಲೆಗಳ ಕೋಶ, ಪು.೨೩). ಇದೆಲ್ಲ ಗಮನಿಸಿದರೆ ಕಿನ್ನರಿ ವಾದ್ಯ ೧೨ನೇ ಶತಮಾನದಲ್ಲಿಯೂ ಇತ್ತು. ಇನ್ನೂ ಕೆಲವು ಹಂಡಿಜೋಗಿ ಕಲಾವಿದರ ಇತಿಹಾಸ ನೋಡಿದರೆ ೧೨ನೇ ಶತಮಾನಕ್ಕಿಂತ ಮುಂಚೆಯೇ ಇತ್ತು ಎಂದು ನೋಡಬಹುದು. ಈ ಕಿನ್ನರಿ ವಾದ್ಯವನ್ನು ಎಷ್ಟು ಕೊಂಡಾಡಿದರು ಸಾಲದು ಕಿನ್ನರಿ ವಾದ್ಯದ ಕುರಿತಾಗಿ ಜಾನಪದ ವಿದ್ವಾಂಸರು ಹಿರಿಯ ಕವಿಗಳು ಕಿನ್ನರಿ ಜೋಗಿ ಕಲಾವಿದರನ್ನು ಹೃದಯ ಪೂರ್ವಕ ಕೊಂಡಾಡಿದ್ದಾರೆ.



ಏಕತಾರಿ, ಏಕನಾದ ಮತ್ತು ಚೌಡಿಕೆ ಜಾನಪದ ವಾದ್ಯಗಳಂತೆ ಕಿನ್ನರಿ ವಾದ್ಯವು ಸಹ ಒಂದು ಅಚ್ಚ ಜಾನಪದ ವಾದ್ಯವಾಗಿದೆ. ಇದೊಂದು ಜನಪದ ವೀಣೆ ಎಂತಲೂ ಕರೆಯುತ್ತಾರೆ. "ಕಿನ್ನರಿ ವಾದ್ಯ ಇದೊಂದು ತಂತಿವಾದ್ಯವಾಗಿದೆ. ಏಕತಾರಿ ಏಕನಾದ ಮತ್ತು ಚೌಡಿಕೆ ವಾದ್ಯಗಳಿಗೆ ಒಂದೆ ತಂತಿ ಕಂಡುಬರುತ್ತದೆ. ಆದರೆ ಕಿನ್ನರಿ ವಾದ್ಯಕ್ಕೆ ಎರಡು ತಂತಿಗಳು ಕಂಡುಬರುತ್ತವೆ.

ಮೂರು ಅಡಿ ಉದ್ದದ ಸಣ್ಣದಾದ ಗಳುವಿಗೆ ಒಂದು ತುದಿಯಲ್ಲಿ ಮರದ ಗಿಣಿಯೊಂದನ್ನು ಮಾಡಿ ಸಿಕ್ಕಿಸಿರುತ್ತಾರೆ. 'ಸುಲಂಗಿ' ಎಂಬ ಒಂದು ಪ್ರಕಾರದಲ್ಲಿ ಈ ಗಿಣಿಯನ್ನು ತಯಾರಿ ಮಾಡಿ ಈ ಗಿಣಿಯ ಒಂದು ತುದಿಯಲ್ಲಿ ತಂತಿಯನ್ನು ಕಟ್ಟಲಾಗುತ್ತದೆ. ಗಳುವಿನ ಮಧ್ಯದಲ್ಲಿ ಹತ್ತು ಅಥವಾ ಹನ್ನೆರಡು ಮೆಟ್ಟಿಗೆಗಳನ್ನು ಅಳವಡಿಸಿಕೊಂಡಿರುತ್ತಾರೆ. ಇವುಗಳನ್ನು "ಸಾರಿ" ಎಂದು ಕರೆಯುತ್ತಾರೆ.

ಈ ಸಾರಿಗಳು ಚಿಪ್ಪುಹಂದಿಯ ಮೈಮೇಲೆ ಇರುವ ಚಕ್ಕೆಯಂತೆ ಸಾಧನಗಳು. ಇದನ್ನು ಜೇನು ಮೇಣದಿಂದ ಗಳುವಿನ ಮೇಲೆ ಮೆತ್ತಿರುತ್ತಾರೆ. ಒಂದು ತುದಿಯ ಗಿಣಿಯ ಆಕೃತಿಗೆ ಕಟ್ಟಿದ ತಂತಿಗಳನ್ನು ಇನ್ನೊಂದು ತುದಿಯಲ್ಲಿ ಶೂಲದ ಕಡ್ಡಿಗೆ ಸುತ್ತಿ ಎರಡು ತಿರುವುಗಳಿಗೆ ಸೇರಿಸಿರುತ್ತಾರೆ. ಈ ವಾದ್ಯ ಶ್ರುತಿಗೊಳಿಸುವಾಗ ಈ ತಿರುಪುಗಳನ್ನು ತಿರುಗಿಸಿ ತಂತಿಯನ್ನು ಬಿಗಿ ಮಾಡಿಕೊಳ್ಳುತ್ತಾರೆ ಇಲ್ಲ ಸಡಿಲ ಮಾಡಿಕೊಳ್ಳುತ್ತಾರೆ. ಎರಡು ತಂತಿಗಳು ಸಾರಿಗಳ ಮೇಲೆ ಹಾದು ಹೋಗಿರುತ್ತವೆ. ಉದ್ದವಾದ ಬಿದುರಿನ ಬೊಂಬಿಗೆ ಕೆಳ ಭಾಗದಲ್ಲಿ ಮೂರು ಮಾಗಿಯ ಬುರುಡೆಗಳನ್ನು ಕಟ್ಟಿರುತ್ತಾರೆ. (ದಾರದಿಂದ) ಬುರುಡೆಗಳನ್ನು ಬಿದಿರಿನ ಬೊಂಬಿಗೆ ಮೂರು ಬುರುಡೆಗಳನ್ನು ದಾರದಿಂದ ಬಿಗಿದಿರುತ್ತಾರೆ. ಆ ದಾರದಿಂದ ಬಿಗಿದ ಜಾಗದಲ್ಲಿ ಮೇಣದಿಂದ ಮೆತ್ತಿರುತ್ತಾರೆ. ಆ ಮೂರು ಬುರುಡೆಗಳಲ್ಲಿ ಕೆಳಗೆ ಬಿಗಿದಿರುವ ಬುರುಡೆ ಚಿಕ್ಕದಿರುತ್ತದೆ. ಮಧ್ಯದಲ್ಲಿರುವ ಬುರುಡೆ ದೊಡ್ಡದಿರುತ್ತದೆ ಮೇಲೆ ಬಿಗಿದಿರುವ ಬುರುಡಿ ಈ ಕೆಳಗಿರುವ ಎರಡು ಬುರುಡೆಗಳಿಗಿಂತಲೂ ತುಂಬ ಚಿಕ್ಕದಿರುತ್ತದೆ. ಒಂದು ಕಿನ್ನರಿ ವಾದ್ಯವನ್ನು ತಯಾರು ಮಾಡಿದ ನಂತರ ಆ ಕಿನ್ನರಿ ವಾದ್ಯಕ್ಕೆ ವಿವಿಧ ರೀತಿಯಲ್ಲಿ ಶೃಂಗಾರ ಮಾಡಿರುತ್ತಾರೆ. ಕಿನ್ನರಿಯ ಒಂದು ತುದಿಯಲ್ಲಿ ಮರದ ಗಿಣಿ ಇದಕ್ಕೆ ಮತ್ತೊಂದು ತುದಿಯಲ್ಲಿ ನವಿಲಿನ ಗರಿಗಳನ್ನು ಸಿಕ್ಕಿಸಿ ಮಿಂಚು ಮಿಂಚಿನ ಬಗೆಬಗೆಯ ಪ್ಲಾಸ್ಟಿಕ್ ಕಾಗದದಿಂದ ತಯಾರು ಮಾಡಿದ ಪೇಪರ್‌ಗಳನ್ನು ಶೃಂಗಾರ ಮಾಡಿರುತ್ತಾರೆ ಆ ಕಿನ್ನರಿ ವಾದ್ಯವನ್ನು ನೋಡಿದರೆ ಸಾಕ್ಷಾತ್ ಸರಸ್ವತಿನೆ ಕೈಯಲ್ಲಿ ಕುಳಿತಿದ್ದಾಳೆ ಎಂದು ಭಾಸವಾಗುತ್ತದೆ.

ಕಿನ್ನರಿ ವಾದ್ಯದ ಹಿನ್ನೆಲೆಯನ್ನು ಕುರಿತು ನೋಡುವುದಾದರೆ, ಇದು ಅತ್ಯಂತ ಪುರಾತನ ಕಾಲದಿಂದಲೂ ಬೆಳೆದು ಬಂದಿರುವ ಒಂದು ವಾದ್ಯ. ವೀಣೆಯ ಇತಿಹಾಸ ವೇದಗಳ ಕಾಲದಲ್ಲೇ ಪ್ರಾರಂಭಗೊಂಡು, ಮುಂದೆ ರಾಮಾಯಣ, ಮಹಾಭಾರತ, ಪುರಾಣ, ಉಪನಿಷತ್ತು, ಬುದ್ಧನ ಜಾತಕ ಕಥೆಗಳು ಹಾಗೂ ಕಾಳಿದಾಸ ಮೊದಲಾದವರ ಸಂಸ್ಕೃತ ಕಾವ್ಯಗಳಲ್ಲಿಯೂ ಉಲ್ಲೇಖಿತಗಂಡಿದೆ. ಹಿಂದೆ ಹಾಡಿಕೊಂಡು ವೀಣೆಯನ್ನು ನುಡಿಸುವ ಅಭ್ಯಾಸವಿತ್ತೆಂದು 'ವಾಚಸನೇಯಿ ಸಂಹಿತೆ'ಯಿಂದ ತಿಳಿದುಬರುತ್ತದೆ(ಶಂಕರ ಸರ್ವಮಂಗಳ, ಸಂಗೀತ ಕ್ಷೇತ್ರಕ್ಕೆ ವಚನಕಾರರ ಕೊಡುಗೆ, ಬಸವ ಸಮಿತಿ, ಬೆಂಗಳೂರು, ೨೦೦೮, ಪು.೧೦೩).

ನಾರದ ತನ್ನ ಸಂಗೀತ ಮಕರಂದದಲ್ಲಿ ಹತ್ತೊಂಬತ್ತು ಬಗೆಯ ವೀಣೆಗಳನ್ನು ಹೇಳಿದ್ದಾನೆ. ಅದರಲ್ಲಿ ಕಿನ್ನರಿ ವೀಣೆಯು ಸೇರಿದೆ. ಸೋಮೇಶ್ವರನು ತನ್ನ ಮಾಸೋಲ್ಲಾಸದಲ್ಲಿ (ಕ್ರಿ.ಶ. ೧೧೩೧) ಲಘು ಕಿನ್ನರಿಯಲ್ಲಿ ಎಂಟು ಮೆಟ್ಟಿಲುಗಳು, ಗುರು ಕಿನ್ನರಿಯಲ್ಲಿ ಹದಿನಾಲ್ಕು ಮೆಟ್ಟಿಲುಗಳು ಇದ್ದುವೆಂದು ಹೇಳಿದ್ದಾರೆ. ಅಷ್ಟೇ ಅಲ್ಲದೆ ಕಿನ್ನರಿಯಲ್ಲಿ ಎರಡು ಬಗೆ ಎಂಬುದು ಮತ್ತು ಅವುಗಳಲ್ಲಿ ಲಘುಕಿನ್ನರಿ, ಬೃಹತ್ ಕಿನ್ನರಿಗಳೆಂದು ಹೇಳಿದ್ದಾನೆ. ಎರಡು ಬುರುಡೆಯನ್ನು ಹೊಂದಿದ್ದರೆ ಅದು ಲಘು ಕಿನ್ನರಿ, ಮೂರು ಬುರುಡೆಯನ್ನು ಹೊಂದಿದ್ದರೆ ಅದು ಬೃಹತ್ ಕಿನ್ನರಿ ಎಂದು ಉಲ್ಲೇಖಿಸಿದ್ದಾನೆ.(ಶಂಕರ ಸರ್ವಮಂಗಳ, ಪು.೧೦೪) ಸೋಮೇಶ್ವರನು ಹೇಳುವ ಪ್ರಕಾರ ಹಂಡಿಜೋಗಿಗಳು ಬೃಹತ್ ವೀಣೆಯನ್ನು ಬಳಸುತ್ತಿದ್ದಾರೆ. ಜೋಗಿಗಳು ಬಳಸುವ ಕಿನ್ನರಿ ವಾದ್ಯಕ್ಕೆ ಮೂರು ಬುರುಡೆಗಳು ಇರುವುದು ಕಂಡುಬರುತ್ತದೆ.

ಕಿನ್ನರಿ ಜೋಗಿಗಳಿಗೆ ಕಿನ್ನರಿ ವಾದ್ಯ ಹೇಗೆ ಬಂದಿತು ಎಂಬುದರ ಕುರಿತು ಕೆಲವು ಕಥೆಗಳನ್ನು ಇಲ್ಲಿ ಉಲ್ಲೇಖಿಸಲಾಗಿದೆ.

ಅರ್ಜುನನಿಗೆ ಹಲವಾರು ಕಾರಣಾಂತರಗಳಿಂದ ಅಜ್ಞಾತವಾಸ ಮಾಡಿ ತೀರ್ಥಕ್ಷೇತ್ರಗಳನ್ನು ಸಂದರ್ಶನ ಮಾಡಿ ತನ್ನ ಹಸ್ತಿನಾಪುರಕ್ಕೆ ಬರುತ್ತಿದ್ದ ಸಂದರ್ಭದಲ್ಲಿ ಅರ್ಜುನನ ಜೊತೆ ಒಬ್ಬ ಬಾಲಕ ಕೂಡ ಇದ್ದನು ಬಹಳ ದಿನಗಳಿಂದ ತಾಯಿಯನ್ನು ನೋಡದೆ ಇರುವ ಅರ್ಜುನನಿಗೆ ತಾಯಿಯನ್ನು ನೋಡುವಾಸೆ ಆಯಿತು. ತಾಯಿಯನ್ನು ನೋಡುವ ಒಂದು ಉಪಾಯವನ್ನು ಮಾಡಿದನು ಅದೇನೆಂದರೆ, ಬಗೆ ಬಗೆಯ ಬಣ್ಣ ಬಣ್ಣದ ವಸ್ತ್ರಗಳನ್ನು ಧರಿಸಿ ತಲೆಗೆ ಮುಂಡಾಸು ಸುತ್ತಿಕೊಂಡು ಸುಂದರವಾಗಿ ಅಲಂಕಾರ ಮಾಡಿಕೊಂಡ ಅರ್ಜುನ ಕೈಯಲ್ಲಿ ಒಂದು ತಂತೀವಾದ್ಯವನ್ನು ಹಿಡಿದುಕೊಂಡು ತನ್ನ ತಾಯಿಯಾದ ಕುಂತಿದೇವಿಯ ಅರಮನೆ ಮುಂದೆ ನಿಂತು ಸೊಗಸಾಗಿ ಕುಣಿಯುತ ಹಾಡಿದ. ಅವನ ಹಾಡನ್ನು ಕೇಳಿ ತಾಯಿಗೆ ತುಂಬ ಸಂತೋಷವಾಗಿ ತನ್ನ ಮಗನಾದ ಅರ್ಜುನನನ್ನೇ ಹೋಲುವಂತಿದ್ದ ಅವನನ್ನು ನೋಡಿ ಕಣ್ಣಲ್ಲಿ ನೀರು ತಂದುಕೊಂಡಳು. ತಾಯಿಯ ಕಣ್ಣಲ್ಲಿ ನೀರು ಬಂದಿರುವುದನ್ನು ನೋಡಿ ಜೋಗಿವೇಷದಲ್ಲಿದ್ದ ಅರ್ಜುನ, ತಾನು ಅರ್ಜುನ ಎನ್ನುವ ಸತ್ಯವನ್ನು ಹೇಳಿ ತಾಯಿಯನ್ನು ಸಂತೋಷಪಡಿಸುತ್ತಾನೆ. ನಂತರ ತನ್ನ ಕೈಯಲ್ಲಿದ್ದ ಕಿನ್ನರಿ ವಾದ್ಯ, ವೇಷ, ಬಿರುದುಗಳು ಏನು ಮಾಡೋದು ಎಂದು ಯೋಚಿಸುತ್ತ ನಂತರ ತನ್ನ ಜೊತೆಯಲ್ಲೆ ತನ್ನ ಸೇವೆ ಮಾಡಿಕೊಂಡಿದ್ದ ಆ

ಬಾಲಕನಿಗೆ ಕೊಟ್ಟು ಹೋಗು ಇನ್ಮುಂದೆ ಪಾಂಡವರ ಕಥೆಗಳನ್ನು ಹಾಡಿಕೊಂಡು ಅರ್ಜುನ ಜೋಗಿಗಳು ಎಂಬ ಹೆಸರಿನಲ್ಲಿ ಜೀವನ ನಡೆಸು ಎಂದು ಆಶೀರ್ವಾದ ಮಾಡಿದ. ಇಂದಿಗೂ ಕೂಡ ಕಿನ್ನರಿ ಜೋಗಿಗಳು ಇಡಿ ರಾತ್ರಿಯವರೆಗೆ ಮಹಾಭಾರತದ ಹಲವಾರು ಕಥೆಗಳನ್ನು ಹಾಡುವುದನ್ನು ನಾವು ಕಾಣುತ್ತೇವೆ.

ಇನ್ನೊಂದು ರೀತಿಯ ಕಥೆಯ ಪ್ರಕಾರ ಶಿವನು ಮೊದಲು ಜೋಗಿ ವೇಷದಲ್ಲಿದ್ದ, ಜೋಗಿ ವೇಷದಲ್ಲಿದ್ದ ಶಿವನನ್ನು ನೋಡಿ ಗಂಗೆಗೆ ಅಸಮಧಾನವಾಯಿತಂತೆ. ಇದನ್ನು ತಿಳಿದ ಶಿವನು ತನ್ನ ವೇಷವನ್ನು ತೆಗೆದುಬಿಟ್ಟ, ನಂತರ ಕೈಯಲ್ಲಿದ್ದ ಕಿನ್ನರಿ ವಾದ್ಯ ವೇಷಭೂಷಣವೆಲ್ಲ ಶಾಶ್ವತವಾಗಿ ಭೂಮಿ ಮೇಲೆ ಇರಬೇಕೆಂದು ಯೋಚಿಸಿ ನಂತರ ಶಿವನು ತನ್ನ ಬೆವರಿನಿಂದ ಒಂದು ಹೆಣ್ಣು ಒಂದು ಗಂಡು ಸೃಷ್ಟಿ ಮಾಡಿ ತನ್ನ ಜೋಗಿವೇಷ ಮತ್ತು ಕಿನ್ನರಿ ವಾದ್ಯವನ್ನು ಅವರ ಕೈಯಲ್ಲಿ ಕೊಟ್ಟು ಶಿವ ಗಂಗೆಯರ ಕಥೆಗಳನ್ನು ಹಾಡಿಕೊಂಡು ಜೀವನ ನಡೆಸಿ ಎಂದು ಹರಸಿ ಆಶೀರ್ವದಿಸಿ ಕಳಿಸಿದ ಎಂದು ಹೇಳುತ್ತಾರೆ. ಈ ಕಥೆಗಳನ್ನು ಕೇಳಿದಾಗ ಇದು ಸತ್ಯವೆನಿಸುತ್ತದೆ. ಕಾರಣ ಇವತ್ತಿಗೂ ಕೂಡ ಹಂಡಿಜೋಗಿಗಳು ಶಿವ-ಗಂಗೆಯರ ಕಥೆಗಳನ್ನು ಹಾಡುವುದನ್ನು ನಾವು ಕಾಣುತ್ತೇವೆ.

ಇನ್ನು ಕೆಲವರು ಹೀಗೆ ಹೇಳುತ್ತಾರೆ, ಅದೇನೆಂದರೆ ದೇಶಾದ್ಯಂತ ಸಂಚಾರ ಮಾಡುತ್ತಾ ಹೊರಟ ಅರ್ಜುನ ಇಂದ್ರನಲ್ಲಿಗೆ ಬಂದು ಅಲ್ಲಿ ಶಿವನನ್ನು ಕುರಿತು ತಪಸ್ಸು ಮಾಡಿ ಶಿವನಿಂದ ಹಲವಾರು ಬಿಲ್ಲು ಬಾಣಗಳನ್ನು ಪಡೆದುಕೊಳ್ಳುತ್ತಾನೆ. ಬಿಲ್ಲನ್ನು ಹಿಡಿದು ಬಾಣದ ತುದಿಗೆ ಒಂದು ಜಡೆಯನ್ನು ಸಿಕ್ಕಿಸಿ ದೇವಲೋಕಕ್ಕೆ ಕಳುಹಿಸುತ್ತಾನೆ. ಅರ್ಜುನ ಇಂದ್ರ ಮಗನಲ್ಲವೆ? ಆದಕಾರಣ ಇಂದ್ರದೇವನು ಮಗನ ಕೋರಿಕೆಯಂತೆ "ಹಿರಣ್ಯ" ಎಂಬ ದೊಡ್ಡ ದೈತ್ಯ ರಾಕ್ಷಸಿಯನ್ನು ಕೊಂದು, ಅವಳ ರಕ್ತದಿಂದ ಕೊಡಗಾವಿ ಮಾಡಿ, ಅವಳ ತಲೆಗೂದಲಿನಿಂದ ದಂಡೆದಾರವನ್ನು ಮಾಡಿ ಅವಳ ಎರಡು ಎದೆಗಳನ್ನು ಬುರುಡೆಗಳನ್ನು ಮಾಡಿ, ಅವಳ ಮೂಗು ಶೂಲದ ಕಡ್ಡಿಮಾಡಿ, ಹದಿನಾರು ಹಲ್ಲುಗಳು ಹದಿನಾರು ಸಾಲಿಗಳನ್ನು ಮಾಡಿ, ಕೈ ಬೆರಳುಗಳು ಬಿರಡೆಗಳು ಮಾಡಿ ಮತ್ತು ಬೆನ್ನು ನರಗಳಿಂದ ತಂತಿಮಾಡಿ ಇಷ್ಟು ಅಂಗಾಗಳಿಂದ ಮಾಡಿದ ವಾದ್ಯವನ್ನು ದೇವೇಂದ್ರನು ಅರ್ಜುನನಿಗೆ ಅರ್ಪಿಸಿದ.

ಅಂದು ಕಿನ್ನರಿ ವಾದ್ಯವನ್ನು ಹಿಡಿದುಕೊಂಡು ದೇವೇಂದ್ರನಿಂದ ದೀಕ್ಷೆ ಪಡೆದು ಜೋಗಿಯಾಗಿ ಹೊರಟ ಅರ್ಜುನ ಇಂದಿಗೂ ಕೂಡ ನಾವು ಅರ್ಜುನ ಜೋಗಿಗಳನ್ನು ನಾವು ಕಾಣಬಹುದು.

ಹೀಗೆ ಹಲವಾದು ವಾದ್ಯಗಳಲ್ಲಿ ಕಿನ್ನರಿವಾದ್ಯ ತನ್ನದೇ ಆದ ಪೌರಾಣಿಕ ಚಾರಿತ್ರಿಕ ಮತ್ತು ಜಾನಪದ ಹಿನ್ನೆಲೆಯನ್ನು ಪಡೆದುಕೊಂಡು ಬಂದಿದೆ.

ಒಂದೊಮ್ಮೆ ತಂದೆಯ ಆದೇಶದ ಮೇರೆಗೆ ಪಾಂಡವರು ಹದಿನಾಲ್ಕು ವರ್ಷಗಳ ಕಾಲ ವನವಾಸಕ್ಕೆ ಹೋಗಿರುತ್ತಾರೆ ವನವಾಸಕ್ಕೆ ಹೋದ ಸಂದರ್ಭದಲ್ಲಿ ಪಾಂಡವರು ಕಾಡಿನಲ್ಲಿ ಒಂದು ದೈತ್ಯ ರಾಕ್ಷಸಿ ಎದುರಾಗುತ್ತಾಳೆ. ಆ ರಾಕ್ಷಸಿಯನ್ನು ಕಂಡು ಮುಂದೆ ಸಂಚಾರ ಮಾಡುವಾಗ ಜೋಗಿಗಳು ಬೇಟೆಯಾಡುತ್ತಾರೆ. ಆಗ ಅವರ ಬಳಿ ಕಿನ್ನರಿ ವಾದ್ಯ ಇರುವುದಿಲ್ಲ. ಆಗ ತಾನೆ

ಕೊಂದಿದ್ದ ರಾಕ್ಷಸನ ಬುರುಡೆ ಹಾಗೂ ನರಗಳನ್ನು ಕಿನ್ನರಿ ಮಾಡಿ ಆ ಜೋಗಿಗಳಿಗೆ ಕಾಣಿಕೆಯಾಗಿ ಕೊಟ್ಟಿದ್ದಾನೆ ಎಂದು ಒಂದು ಕಥೆ.

ಆಧುನಿಕ ಕಾಲದಲ್ಲಿ ಹಲವಾರು ರೀತಿಯಲ್ಲಿ ಹೆಮ್ಮರವಾಗಿ ಬೆಳೆದು ಸಂಗೀತ ಕಲೆಗಳಲ್ಲಿ ಹಂಡಿಜೋಗಿ ಕಲಾವಿದರು ಅವತ್ತಿನಿಂದ ಇವತ್ತಿನವರೆಗು ಪಾಂಡವರ ಕಥೆಗಳನ್ನು ಹಾಡಿಕೊಂಡು ತಮ್ಮ ಜೀವನ ನಡೆಸುತ್ತಿದ್ದಾರೆ ಎಂದರೆ ನಿಜವಾಗಲು ಈ ಕಥೆಗಳು ಸತ್ಯವೆನಿಸುತ್ತವೆ.

**ಹಾರ್ಮೋನಿಯಂ ವಾದ್ಯ :** ಶಿಷ್ಟ ಸಂಗೀತ ಹಾಗೂ ಜಾನಪದ ಸಂಗೀತ, ಘಜಲ್, ಕವಾಲಿ, ಝುಮ್ರಿ ಇನ್ನೂ ಮುಂತಾದ ಸಂಗೀತದಲ್ಲಿ ನುಡಿಸಲ್ಪಡುವ ಈ ಹಾರ್ಮೋನಿಯಂ ವಾದ್ಯವು ಪಾಶ್ಚಾತ್ಯ ಸಂಸ್ಕೃತಿಯಿಂದ ಭಾರತಕ್ಕೆ ಬಂದು, ಭಾರತೀಯ ಸಂಗೀತದ ಒಂದು ಅವಿಭಾಜ್ಯ ಅಂಗವಾಗಿದೆ ಎಂದರೆ ತಪ್ಪಾಗಲಾರದು.

ಮೊದಲಿನಿಂದಲೂ ಕಿನ್ನರಿ ಜೋಗಿ ಕಲಾವಿದರು ತಮ್ಮ ಸಂಗೀತದಲ್ಲಿ ಕಿನ್ನರಿ, ಪಿಳ್ಳಂಗೋವಿ, ತಾಳ, ಶಂಖ ಮತ್ತು ಕಿರುಗೆಜ್ಜೆ ವಾದ್ಯಗಳನ್ನು ಬಳಸುತ್ತ ಬಂದಿದ್ದಾರೆ ಪ್ರಸ್ತುತ ಕಾಲಕ್ಕೆ ತಕ್ಕಂತೆ ತಮ್ಮ ಸಂಗೀತದಲ್ಲಿ ಬದಲಾವಣೆಯನ್ನು ತರಲು ಹಾರ್ಮೋನಿಯಂ ವಾದ್ಯವು ಕೂಡ ಬಳಸುತ್ತಿದ್ದಾರೆ.

ಹಂಡಿಜೋಗಿ ಕಲಾವಿದರಿಗೆ ಹಾರ್ಮೋನಿಯಂ ಬಳಸಲು ಕಾರಣವೇನೆಂದು ಕೇಳಿದರೆ ಅವರು ಹೇಳುತ್ತಾರೆ ಕಿನ್ನರಿ ಜೋಗಿಗಳು ನಡೆಸುವ ಸಂಗೀತ ಕಚೇರಿಯಲ್ಲಿ ಸುಮಾರು ಐದಾರು ಜನ ಕಲಾವಿದರಿರುತ್ತಾರೆ ಒಂದು ಅಥವಾ ಎರಡು ಕಿನ್ನರಿ ವಾದ್ಯಗಳು ಶ್ರುತಿ ಹಾಡುವ ಕಲಾವಿದರಿಗೆ ಕೇಳಿಸದೆ ಇರುವುದರಿಂದ ಶ್ರುತಿಗೋಸ್ಕರ ಹಾರ್ಮೋನಿಯಂ ಬಳಸುತ್ತೇವೆ ಎಂದು ಹೇಳುತ್ತಾರೆ.

ಹಾರ್ಮೋನಿಯಂ ವಾದ್ಯಗಳಲ್ಲಿ ಮುಖ್ಯವಾಗಿ ಎರಡು ತರಹದ ವಾದ್ಯಗಳನ್ನು ಗುರುತಿಸಬಹುದು ಒಂದು ಕೈ ಪೆಟ್ಟಿಗೆ ಮತ್ತೊಂದು ಕಾಲುಪೆಟ್ಟಿಗೆ ಎಂದು ಗುರುತಿಸಲಾಗಿದೆ. ಕೈ ಪಟ್ಟಿಯನ್ನು ಪೆಟ್ಟಿಗೆ ಎಂದು ಗುರುತಿಸಲಾಗಿದೆ. ಕೈ ಪಟ್ಟಿಯನ್ನು ಭಜನೆ ಸಂಗೀತ, ಶಾಸ್ತ್ರೀಯ ಸಂಗೀತ, ಘಜಲ್, ಕವಾಲಿ, ಭಾವಗೀತೆ ಭಕ್ತಿಗೀತೆ ಮತ್ತು ವಚನ ಸಂಗೀತಗಳಿಗೆ ನುಡಿಸುತ್ತಾರೆ. ಕಾಲು ಪೆಟ್ಟಿಗೆ ಎಂದರೆ ಬಾತಿಯನ್ನು ಎಡಗೈಯಿಂದ ಹಾಕುತ್ತ ಬಲಗೈನ ಬೆರಳುಗಳಿಂದ ನುಡಿಸುತ್ತಾರೆ. ಕಾಲುಪೆಟ್ಟಿಗೆಯು ಎತ್ತರವಾಗಿದ್ದು, ಈ ವಾದ್ಯವನ್ನು ಕುರ್ಚಿಯ ಮೇಲೆ ಕುಳಿತುಕೊಂಡು ಕಾಲಿನಿಂದ ಬಾತಿ ಹಾಕುತ್ತ ಎರಡು ಕೈಯಿಂದ ಕಾಲು ಪೆಟ್ಟಿಗೆಯನ್ನು ನುಡಿಸುತ್ತಾರೆ. ಈ ಕಾಲುಪೆಟ್ಟಿಗೆಯನ್ನು ದೊಡ್ಡಾಟ, ಸಣ್ಣಾಟ, ಕೃಷ್ಣ ಪಾರಿಜಾತ ಮತ್ತು ಭಜನೆ ಪದಗಳಲ್ಲಿ ನುಡಿಸುತ್ತಾರೆ. ಕೈಪೆಟ್ಟಿಗೆಗೆ ಬಾತಿ ಹಾರ್ಮೋನಿಯಂನ ಹಿಂದೆ ಇದ್ದರೆ ಕಾಲುಪೆಟ್ಟಿಗೆಯ ಬಾತಿ ಕೆಳಗೆ ಇರುತ್ತದೆ ಇನ್ನೊಂದು ರೀತಿಯ ಪೆಟ್ಟಿಗೆ ಕಂಡುಬರುತ್ತದೆ ಅದು ಬರಿ ಶ್ರುತಿ ಪೆಟ್ಟಿಗೆ ಎಂದು ಕರೆಯುತ್ತಾರೆ ಹೊರತು ಅದನ್ನು ಹಾರ್ಮೋನಿಯಂ ಎಂದು ಕರೆಯುವುದಿಲ್ಲ.

ಹಾರ್ಮೋನಿಯಂನ ಹೊರಭಾಗ ಆಯತಾಕಾರದಲ್ಲಿದ್ದು ಬೇರೆ ಬೇರೆ ತರಹದ ಮರದಿಂದ ತಯಾರಿ ಮಾಡಿರುತ್ತಾರೆ ಹಾರ್ಮೋನಿಯಂ ವಾದ್ಯಕ್ಕೆ ಸಂಬಂಧಪಟ್ಟ ವಿವಿಧ ಭಾಗಗಳು ಇದರೊಳಗೆ ಜೋಡಣೆ ಮಾಡಿರುತ್ತಾರೆ.

ಕೆಲವೊಂದು ಹಾರ್ಮೋನಿಯಂ ವಾದ್ಯಗಳ ಸಣ್ಣ ಗಾತ್ರದಲ್ಲಿ ಮುಚ್ಚುವಂತೆ ಮಾಡಿರುತ್ತಾರೆ. ಅದಕ್ಕೆ ಸೂಟುಕೇಸು ಹಾರ್ಮೋನಿಯಂ ಎಂದು ಕರೆಯುತ್ತಾರೆ.



ಈ ವಾದ್ಯದಲ್ಲಿ ಬರುವ 'ಪತ್ರಿ' ಅಥವಾ (Opeeds)ಗಳು ಆರೋಹ ಕ್ರಮ ಅಂದರೆ ಏರಿಕೆ ಕ್ರಮದಲ್ಲಿ ಜೋಡಿಸಿದ್ದು. ಇಲ್ಲಿ ಮನೆಗಳು ಸಾಲಾಗಿ ಕಂಡುಬರುತ್ತದೆ ಒಂದು ಕಪ್ಪುಮನೆ (ಮೇಲಿನ ಮನೆ) ಬಿಳಿಮನೆ (ಇದು ಕೆಳಗಿನ ಮನೆ) ಇದ್ದು, ಬಾತಿಯನ್ನು ಎಡಗೈಯಿಂದ ಒತ್ತಿದಾಗ, ಬಾತಿಯ ಮುಖಾಂತರ ಬರುವ ಗಾಳಿ ಈ ಸ್ವರ ಲಿಪಿಗಳ ಮೇಲೆ ಸಂಚರಿಸಿ, ಮುಚ್ಚಿದ ಸ್ವರಗಳ ಮೇಲೆ ನಾವು ಯಾವ ಸ್ವರಗಳ ಮೇಲೆ ಒತ್ತಲಾಗುತ್ತದೆಯೋ ಆ ಸ್ವರ ನುಡಿಯುತ್ತದೆ. ಒಟ್ಟು ಹಾರ್ಮೋನಿಯಂನ ವಾದ್ಯದಲ್ಲಿ ಸಪ್ತಕಗಳು ಮಂದ್ರ, ಮಧ್ಯ ಮತ್ತು ತಾರ ಎಂದು ಮೂರು ಸಪ್ತಕಗಳು ಕಂಡುಬರುತ್ತವೆ.

ಹಾರ್ಮೋನಿಯಂಗಳಲ್ಲಿಯೂ ಕೂಡ ಸಿಂಗಲ್, ಡಬಲ್ ಎಂದು ಗುರುತಿಸುತ್ತಾರೆ. ಹಂಡಿಜೋಗಿ ಕಲಾವಿದರು ತಮ್ಮ ಸಂಗೀತ ಕಲೆಯಲ್ಲಿ ಅಚ್ಚ ಜಾನಪದದ ಜೊತೆಗೆ ಪ್ರಸ್ತುತ ಕಾಲಕ್ಕನುಗುಣವಾಗಿ ಸಂಗೀತವನ್ನು ವಿಸ್ತಾರ ಮಾಡುವ ಕಾರಣದಿಂದ ಹಾರ್ಮೋನಿಯಂ ಕೂಡ ಬಳಸಿಕೊಳ್ಳುತ್ತಿದ್ದಾರೆ.

**ಗೆಜ್ಜೆ:** ಸಂಗೀತದ ವಿವಿಧ ಪ್ರಕಾರದ ವಾದ್ಯಗಳಲ್ಲಿ ಗೆಜ್ಜೆ ವಾದ್ಯವು ಒಂದು ಜಾನಪದ ಮತ್ತು ಶಾಸ್ತ್ರೀಯ ವಾದ್ಯವೆಂದು ಹೇಳಬಹುದು. ಕಾರಣ ಇದನ್ನು ನೃತ್ಯಕ್ಕೆ ಬಳಸುವಂತಹ ವಾದ್ಯ. ಈ ವಾದ್ಯವನ್ನು ಜಾನಪದ ನೃತ್ಯಗಳಾದ ಹಂಡಿಜೋಗಿ ನೃತ್ಯ, ಗೊಂದಳಿ ನೃತ್ಯ, ದೊಡ್ಡಾಟ, ಸಣ್ಣಾಟ ಕೃಷ್ಣ ಪಾರಿಜಾತ ಮತ್ತು ಯಕ್ಷಗಾನ ಮತ್ತು ಶಾಸ್ತ್ರೀಯ ನೃತ್ಯಗಳಾದ ಭರತನಾಟ್ಯ, ಕುಚುಪುಡಿ, ಒಡಿಸ್ಸಾ ಮತ್ತು ಕಥಕ್ ನೃತ್ಯಗಳಲ್ಲಿ ಬಳಸುತ್ತಾರೆ. ಈ ವಾದ್ಯವನ್ನು ಹಂಡಿಜೋಗಿ ಕಲಾವಿದರು ತಮ್ಮ ಸಂಗೀತ ಪ್ರದರ್ಶನ ನೀಡುವಾಗ ಈ ಗೆಜ್ಜೆಯನ್ನು ತಮ್ಮ ಕಾಲಿಗೆ ಕಟ್ಟಿಕೊಂಡು ತಾವು ಹಾಡುವ ಹಾಡಿಗೆ ಸುಮಧುರವಾಗಿ ನೃತ್ಯಮಾಡುತ್ತಾರೆ.

ಕಂಚಿನಿಂದ ತಯಾರಿಸಿದ ಸಣ್ಣ ಸಣ್ಣ ಗುಂಡುಗಳೊಳಗೆ ಮಧ್ಯಭಾಗದಲ್ಲಿ ಟೊಳ್ಳುಮಾಡಿ ಸೀಸದ ಗುಂಡುಗಳನ್ನು ಅದರೊಳಗೆ ಹಾಕಿ, ಆ ಗುಂಡುಗಳನ್ನು ಹೊರಕ್ಕೆ ಹಾಕಿ ಬಾರದ ಹಾಗೆ ಸೀಳಿದ ಬಾಯಿಯನ್ನು ಮುಚ್ಚಿರುತ್ತಾರೆ. ಗೆಜ್ಜೆಯನ್ನು ದಾರದಲ್ಲಿ ಕಟ್ಟಲು ಅನುಕೂಲವಾಗುವಂತೆ ಆ ಗೆಜ್ಜೆಯ ಹಿಂದೆ ಕೊಂಡಿ ಇರುತ್ತದೆ. ಬಿಡಿ ಬಿಡಿಯಾಗಿರುವ ಒಂದೊಂದು ಗೆಜ್ಜೆಯನ್ನು ಬಟ್ಟೆಗೆ ಪೋಣಿಸಿ ಒಂದು ಗೆಜ್ಜೆ ವಾದ್ಯವನ್ನು ತಯಾರಿ ಮಾಡಿರುತ್ತಾರೆ.



ಹಂಡಿಜೋಗಿಗಳು ಹಾಡನ್ನು ಹಾಡುತ್ತ ನೃತ್ಯ ಮಾಡುವ ಜೋಗಿಗಳು ಕಾಲಿಗೆ ಗೆಜ್ಜೆಗಳನ್ನು ಕಟ್ಟಿಕೊಳ್ಳುತ್ತಾರೆ. ಜೋಗಿಗಳು ಹಾಡಿನ ತಾಳಕ್ಕೆ ತಕ್ಕಂತೆ ಕುಣಿಯುತ್ತಾರೆ. ಜೋಗಿಗಳು ಹಾಡುವ ಹಾಡು ಯಾವ ತಾಳದಲ್ಲಿದೆ ಎಂದು ಆ ಗೆಜ್ಜೆಯ ನಾದದ ಲಯಕಾರಿಯ ಮುಖಾಂತರವೇ ನಾವು ತಿಳಿದುಕೊಳ್ಳಬಹುದು.

ಸಂಗೀತದ ವಿವಿಧ ಪ್ರಕಾರದ ವಾದ್ಯಗಳಲ್ಲಿ ಗೆಜ್ಜೆ ವಾದ್ಯವು ಒಂದು. ಈ ವಾದ್ಯವು ಶಾಸ್ತ್ರೀಯ ಮತ್ತು ಜನಪದ ಸಂಗೀತದಲ್ಲಿಯೂ ಕೂಡ ಉಪಯೋಗವಾಗುವ ವಾದ್ಯವೆಂದು ಹೇಳಬಹುದು. ಕಂಚಿನಿಂದ ತಯಾರಿಸಿದ ಸಣ್ಣ ಸಣ್ಣ ಗುಂಡುಗಳಿಗೆ ಮಧ್ಯಭಾಗದಲ್ಲಿ ಟೊಳ್ಳುಮಾಡಿ ಸೀಸದ ಗುಂಡುಗಳನ್ನು ಅದರೊಳಗೆ ಹಾಕಿ, ಆ ಗುಂಡುಗಳ ಹೊರಕ್ಕೆ ಬಾರದ ಹಾಗೆ ಸೀಳಿದ ಬಾಯಿಯನ್ನು ಮುಚ್ಚಿರುತ್ತಾರೆ. ಗೆಜ್ಜೆಯನ್ನು ದಾರದಲ್ಲಿ ಕಟ್ಟಲು ಅನುಕೂಲವಾಗುವಂತೆ ಮೇಲೆ ಕೊಂಡಿಗಳಿರುತ್ತವೆ.

**ಘನ ವಾದ್ಯ**

**ಗಗ್ಗರಿ :** ಈ ವಾದ್ಯವನ್ನು ಹಂಡಿಜೋಗಿ ಕಲಾವಿದರು ತಮ್ಮ ಕಲೆಗೆ ಪೂರಕವಾಗಿ ಬಳಸುತ್ತಿದ್ದರು. ಹಂಡಿಜೋಗಿಗಳಿಗೆ ಕಿನ್ನರಿ, ತಾಳ, ಮತ್ತು ಗೆಜ್ಜೆಗಳಂತೆ ಗಗ್ಗರಿ ವಾದ್ಯವೂ ಕೂಡ ಒಂದು ಪ್ರಮುಖ ವಾದುವಾಗಿದೆ.

ಈ ವಾದ್ಯವು ಹಿತ್ತಾಳೆಯಿಂದ ತಯಾರಿಸುತ್ತಾರೆ. ಇದು ಹೆಬ್ಬೆರಳು ತುರುಕುವಷ್ಟು ದುಂಡಾಕಾರ ದಲ್ಲಿರುತ್ತದೆ. ಗಗ್ಗರಿಯ ಒಳಭಾಗ ಟೊಳ್ಳಾಗಿರುತ್ತದೆ. ಈ ವಾದ್ಯದಿಂದ ನಾದ ಉಂಟಾಗಲು ಚಿಕ್ಕಗಾತ್ರದ ಬಾರೆ ಬಿಜ ಇಲ್ಲವೆ ಬಾಲ್‌ಗಳನ್ನು ಸೇರಿಸಿರುತ್ತಾರೆ.



**ತಾಳ:** ದಾಸ ಸಂಗೀತ, ಜಾನಪದ ಸಂಗೀತ ಹಲವಾರು ದೊಡ್ಡಾಟ, ಸಣ್ಣಾಟ, ದಪ್ಪಿನಾಟ ಇನ್ನೂ ಹಲವಾರು ಸಂಗೀತದಲ್ಲಿ ನುಡಿಸುವ ತಾಳವನ್ನು ಕಬ್ಬಿಣ, ಕಂಚು ಅಥವಾ ಹಿತ್ತಾಳೆಯಿಂದ ತಯಾರಿಸುತ್ತಾರೆ. ಬಟ್ಟಲಿನಂತೆ ಇರುವ ಎರಡು ಹೋಳುಗಳಲ್ಲಿ ಒಂದು ದೊಡ್ಡದಿದ್ದು, ಮತ್ತೊಂದು ಸ್ವಲ್ಪ ಚಿಕ್ಕದಿರುತ್ತದೆ. ದೊಡ್ಡ ತಾಳವನ್ನು ಎಡಗೈಯಲ್ಲೂ ಚಿಕ್ಕ ತಾಳವನ್ನು ಬಲಗೈಯಲ್ಲೂ ಹಿಡಿದುಕೊಳ್ಳಲಾಗುತ್ತದೆ. ಎರಡು ತಾಳಕ್ಕೆ ಮಧ್ಯದಲ್ಲಿ ರಂಧ್ರ ಮಾಡಿ ದಾರದಿಂದ ಕಟ್ಟಿರುತ್ತಾರೆ. ಬಲಗೈನ ಚಿಕ್ಕ ತಾಳವು ಎಡಗೈನ ದೊಡ್ಡ ತಾಳದೊಂದಿಗೆ ಸೇರಿಸಿ ಬೇರೆ ಬೇರೆ ರೀತಿಯಲ್ಲಿ ಬಾರಿಸುವ ಮೂಲಕವಾಗಿ ಸುಮಧುರ ನಾದವನ್ನು ಹೊಮ್ಮಿಸಲಾಗುವುದು.



ಈ ತಾಳವನ್ನು ಕಬ್ಬಿಣ, ಕಂಚು ಅಥವಾ ಹಿತ್ತಾಳೆ ಯಿಂದ ತಯಾರು ಮಾಡಿರುತ್ತಾರೆ. ಗುಂಡಾಕಾರದಲ್ಲಿ ಇರುವ ಎರಡು ಹೋಳುಗಳಲ್ಲಿ ಒಂದು ದೊಡ್ಡದಿದ್ದು, ಮತ್ತೊಂದು ಚಿಕ್ಕದಿರುತ್ತದೆ. ಕೆಲವೊಂದು ತಾಳಗಳು ಸಮನಾಗಿರುತ್ತವೆ. ಎರಡು ತಾಳಗಳ ಮಧ್ಯದಲ್ಲಿ ರಂಧ್ರ ಮಾಡಿ ದಾರದಿಂದ ಕಟ್ಟಿರುತ್ತಾರೆ. ನಾಲ್ಕು ಜನ ಕಲಾವಿದರಿರುವ ಹಂಡಿಜೋಗಿ ಮೇಳದಲ್ಲಿ ಇಬ್ಬರು ಕಿನ್ನರಿ ವಾದ್ಯವನ್ನು ನುಡಿಸಿದರೆ, ಇನ್ನೊಬ್ಬ ಕಲಾವಿದರು ಅಂದರೆ ಹಿಮ್ಮೇಳದವರು ತಾಳವನ್ನು ಎಡಗೈಯಲ್ಲಿ ಒಂದು ತಾಳ ಬಲಗೈಯಲ್ಲಿ ಒಂದು ತಾಳ ಹಿಡಿದುಕೊಂಡು ಮೂಲಗಾಯಕ ಹಾಡುವ ಹಾಡಿಗೆ ತಕ್ಕಂತೆ ತಾಳವನ್ನು ವಿವಿಧ ರೀತಿಯ ಲಯಗಳಲ್ಲಿ ನುಡಿಸಲು ಪ್ರಾರಂಭಿಸುತ್ತಾನೆ. ತಾಳ ನುಡಿಸುವ ಕಲಾವಿದನು ಗಾಯಕ ಮತ್ತು ಪಕ್ಕ ವಾದ್ಯಗಳ ತಾಳ ಅಥವಾ ಲಯಕ್ಕನುಗುಣವಾಗಿ ತಾಳ ನುಡಿಸುತ್ತಾನೆ. ಹಂಡಿಜೋಗಿಯವರು ತಾಳಗಳಲ್ಲಿ ದಾದ್ರ, ಕೆಹರವಾ ಮತ್ತು ದೀಪಚಂದಿ ತಾಳಗಳನ್ನು ಹೆಚ್ಚು ಪ್ರಯೋಗ ಮಾಡುತ್ತಾರೆ. ಈ ತಾಳವನ್ನು ದಾಸ ಸಂಗೀತ, ಜನಪದ ಸಂಗೀತ, ಭಜನೆ ಸಂಗೀತ, ದೊಡ್ಡಾಟ, ಸಣ್ಣಾಟ, ದಪ್ಪಿನಾಟ ಮತ್ತು ಇನ್ನೂ ಹಲವಾರು ಸಮುದಾಯಗಳಲ್ಲಿ ನುಡಿಸುತ್ತಾರೆ.

**ಶಂಖ:** ವಾದ್ಯದಲ್ಲೆ ಇದೊಂದು ವಿಶೇಷವಾಗಿರುವ ಶಂಖವಾದ್ಯ. ಇದನ್ನು ಸುಶಿರ ವಾದ್ಯಗಳ ಗುಂಪಿಗೆ ಸೇರಿರುವ ವಾದ್ಯ. ಇದನ್ನು ಸುಮಾರು 50 ಅಥವಾ 100 ವರ್ಷಗಳಿಂದ ಜಿಂಕೆಯ ಕೊಂಬಿನಿಂದ ತಯಾರಿಸಲಾದ ವಾದ್ಯ ಜಿಂಕೆಯ ಕೊಂಬಿಗೆ ವಿವಿಧ ಬಣ್ಣಬಣ್ಣದ ದಾರಗಳಿಂದ ಅಲಂಕಾರ ಮಾಡಿರುತ್ತಾರೆ. ಇದನ್ನು ಬಾಯಿಯಿಂದ ಊದಲಾಗುತ್ತದೆ.



ಹಂಡಿಜೋಗಿ ಕಲಾವಿದರು ತಮ್ಮ ಗಾಯನ ಪ್ರದರ್ಶನ ಮಾಡುವಾಗ ಗಾಯನದ ನಡುವೆ ಒಂದೊಂದು ಸಲ ಊದುತ್ತಾರೆ. ಮತ್ತು ಭಿಕ್ಷೆ ಬೇಡುತ್ತ ಊರೂರು ಮನೆ ಮನೆ ತಿರುಗಿ ಹಾಡುವ ಸಂದರ್ಭದಲ್ಲಿ ಭಿಕ್ಷೆ, ತೆಗೆದುಕೊಂಡ ನಂತರ ಮನೆಮುಂದೆ ನಿಂತು ಈ ಶಂಖವಾದ್ಯವನ್ನು ಊದಿ ಬರುತ್ತಾರೆ.

**ನೃತ್ಯ :** ಹಂಡಿಜೋಗಿ ಸಮುದಾಯದವರು ಕೂಡ ಗಾಯನ, ವಾದನದ ಜೊತೆಗೆ ನೃತ್ಯವೂ ಕೂಡ ಮಾಡುವುದು ವಿಶೇಷವಾಗಿ ಕಂಡುಬರುತ್ತದೆ. ಸಾಮಾನ್ಯವಾಗಿ ಐದು ಜನ ಕಲಾವಿದರು ಈ ತಂಡದಲ್ಲಿ ಇರುತ್ತಾರೆ. ಹಂಡಿಜೋಗಿ ಕಲಾಮೇಳಗಳಲ್ಲಿ ಮುಖ್ಯ ಹಾಡುಗಾರ ತಮ್ಮ ಸಹವಾದ್ಯಗಾರರ ಜೊತೆಗೆ ಹಾಡುತ್ತ ವಿವಿಧ ರೀತಿಯ ಲಯಕ್ಕನುಗುಣವಾಗಿ ಅಂದರೆ, ಕೆಹರವಾ, ದಾದರ ಮತ್ತು ದೀಪಚಂದಿ ತಾಳದ ಲಯಕ್ಕನುಗುಣವಾಗಿ ನರ್ತಿಸುತ್ತಾರೆ. ಈ ಹಂಡಿಜೋಗಿ ಕಲಾವಿದರಿಗೆ ಯಾವ ತಾಳವೆಂದು ತಿಳಿದಿರುವುದಿಲ್ಲ. ಆದರೆ ಅವರು ನುಡಿಸುವ ವಾದ್ಯಗಳ ಮೇಲಿನ ಮಾತ್ರೆಗಳು ಮಾತ್ರ ದಾದ್ರ, ಕೆಹರವಾ ಮತ್ತು ದೀಪಚಂದಿ ತಾಳಗಳಾಗಿರುತ್ತವೆ. ಇತ್ತೀಚಿನ ದಿನಗಳ ಆ ಸಮುದಾಯಗಳಲ್ಲಿ ಶಾಸ್ತ್ರೀಯ ಸಂಗೀತ ಅಭ್ಯಾಸ ಮಾಡುವ ಕಲಾವಿದರಿಂದ ಆ ತಾಳಗಳನ್ನು ಗುರುತಿಸುತ್ತಾ ಆ ಲಯಕ್ಕೆ



ತಕ್ಕಂತೆ ನೃತ್ಯ ಮಾಡುತ್ತಾನೆ. ಮುಖ್ಯ ಹಾಡುಗಾರನ ಜೊತೆಗೆ ಹಿಮ್ಮೇಳ ಕಲಾವಿದರು ಸಹ ಹಾಡುತ್ತಾ ಅವನ ಕತೆಗೆ ಹೂಗುಟ್ಟುತ್ತಾ, ಅವನು ನೃತ್ಯಮಾಡುವಾಗ ನೃತ್ಯ ಮಾಡುತ್ತಾ ನೋಡುವ ಪ್ರೇಕ್ಷರಿಗೆ ಮನರಂಜನೆ ನೀಡುವ ಕುಶಲ ಸಂಭಾಷಣೆಗಳಲ್ಲಿ ಮುಖ್ಯ ಹಾಡುಗಾರನೊಂದಿಗೆ ಸೇರುವ ಉಳಿದ ಎಲ್ಲಾ ಕಲಾವಿದರು, ಒಂದು ರೀತಿಯ ನಾಟಕೀಯ, ಸನ್ನಿವೇಶವನ್ನು ಉದ್ಭವ ಮಾಡುತ್ತಾರೆ.

ಇವರ ಎರಡು ರೀತಿಯ ಹಾಡುಗಳಲ್ಲಿ ಎರಡು ತರಹದ ನೃತ್ಯಗಳು ಕಂಡುಬರುತ್ತವೆ. ತಮಗೆ ಕಿನ್ನರಿ ವಾದ್ಯವನ್ನು ಕೊಟ್ಟ ತಮ್ಮ ಗುರುಗಳಾದ ಅರ್ಜುನನ ಕುರಿತು ಹಾಡುವಾಗ ಅವರ ನೃತ್ಯ ಸಾಧಾರಣವಾಗಿ ಇರುತ್ತದೆ.

ಉದಾ: ಹರಹರನೆ ಹರನೆ ಜಯತೊ
ಶಿವಶಿವಾ ಮುಂದ್ರಾಯಕನೆ ಜಯತು
ಮೂರು ಪುರವರನೆ ಗೆದ್ದವನೆ ಜಯತು
ಬಾರಿ ಕಿನ್ನುಡಿಯ ಮೇಲೆ ಅರ್ಜುನ
ಸಣ್ಣ ಬೆರಳಲಿ ನುಡಿಸುತ
ಹೆಚ್ಚಾದ ಬುರುಡೆಯನ್ನೇ ಅರ್ಜುನ
ಎಡಗೈಯಲ್ಲಿ ತಿದ್ದುತ ಅರ್ಜುನ
ಅರ್ಥದಲ್ಲಿ ಕುಣಿದನಾಗ । ತರನಾಗಿ ಶಿವನನ್ನು ಗುರುವನ್ನು ಹಾಗೂ ಅರ್ಜುನನ್ನು ಅಡಿಗಡಿಗೆ ನೆನಪಿಸಿಕೊಳ್ಳುತ್ತಾ ಮಧುರ ಸ್ವರದಲ್ಲಿ ಹಾಡುತ್ತ ತಮ್ಮ ಕಾಲಿಗೆ ಗೆಜ್ಜೆ ಕಟ್ಟಿಕೊಂಡು ನೃತ್ಯ ಮಾಡುತ್ತಾರೆ. ಹಂಡಿಜೋಗಿ ಕಲಾವಿದರು ತಮ್ಮ ಮೂಲ ಸಂಗೀತದ ಜೊತೆಗೆ ಆಧುನಿಕ ಕಾಲಕ್ಕೆ ತಕ್ಕಂತೆ ಆಯಾ ಸ್ಥಳ ಸಂದರ್ಭ ಹಾಗೂ ಪ್ರೇಕ್ಷಕರ ಪ್ರತಿಕ್ರಿಯೆಯನ್ನು ನೋಡಿಕೊಂಡು ನಿಂತ ನಿಂತ ಸ್ಥಳದಲ್ಲಿ ಹೊಸ ಹಾಡನ್ನು ಕಟ್ಟಿ ಹಾಡುವಾಗ ನೃತ್ಯ ಶೈಲಿ ಹಾಸ್ಯಭರಿತವಾಗಿರುತ್ತದೆ

ಉದಾ: ಏನು ಮಂತ್ರಿ ಏನು ಮಂತ್ರಣ್ಣ
ಈ ದೇಶದಾಗ ಎಷ್ಟು ಜನ ಮಂತ್ರಿ ಆಗಿ
ಹೋದ್ರಣ್ಣ ಎಂಬ ಹಾಡಿನ ಜೊತೆಗೆ ಹಾಸ್ಯಭರಿತವಾಗಿ ನೃತ್ಯ ಮಾಡುತ್ತಾರೆ.

ಇಂಥ ನೂರಾರು ಹಾಡುಗಳನ್ನು ಕಟ್ಟಿ ಆ ಹಾಡಿನ ಜೊತೆಗೆ ವಿವಿಧ ರೀತಿಯ ನೃತ್ಯ ಮಾಡುವ ಚಾತುರ್ಯ ಮೆಚ್ಚುವಂಥದ್ದು. ಇಂದಿಗೂ ಅವರ ಹಾಡು ಮತ್ತು ನೃತ್ಯ ಜನಪ್ರಿಯವಾಗಿದೆ.

**ವೇಷಭೂಷಣ:** ಹಂಡಿಜೋಗಿ ಕಲಾವಿದರು ತಮ್ಮ ವಿವಿಧ ರೀತಿಯ ವೇಷಭೂಷಣಗಳನ್ನು ತೊಟ್ಟುಕೊಂಡು ಕೈಯಲ್ಲಿ ಕಿನ್ನರಿ ವಾದ್ಯವನ್ನು ಹಿಡಿದುಕೊಂಡು ಊರ ಬೀದಿಯಲ್ಲಿ ಕಿನ್ನರಿ ನುಡಿಸುತ್ತ

ಹಾಡುತ್ತ ಹೊರಟರೆಂದರೆ ಇಂದ್ರ-ಚಂದ್ರರಿಗಿಂತ ಸುಂದರವಾಗಿ ಕಾಣುತ್ತಾರೆ. ವರ್ಷಕ್ಕೊಮ್ಮೆ ಊರಾಡುತ್ತ ಬರುವ ಈ ಕಲಾವಿದರು ವೇಷಭೂಷಣಗಳನ್ನು ತೊಟ್ಟುಕೊಂಡು ಕೈಯಲ್ಲಿ ಕಿನ್ನರಿ ವಾದ್ಯವನ್ನು ಹಿಡಿದುಕೊಂಡು ಊರ ಒಳಗೆ ಬಂದ್ರು ಎಂದರೆ ವಿವಿಧ ಬಣ್ಣದ ವೇಷದಿಂದ ಕೂಡಿದ ಈ ಕಲಾವಿದರನ್ನು ನೋಡಿದಾಗ ಯಾರಿಗಾದರೂ ಕುತೂಹಲ ಆಶ್ಚರ್ಯವಾಗುತ್ತದೆ.



ಹಂಡಿಜೋಗಿ ಕಲಾವಿದರ ವೇಷಭೂಷಣ ಕುರಿತು ಹಲವಾರು ಜಾನಪದ ಕಲಾವಿದರು ಜಾನಪದ ಹಾಡುಗಳನ್ನು ಹಾಡಿದ್ದಾರೆ. ಆ ಹಾಡು ಈ ಕೆಳಗಿನಂತಿದೆ.

ಚಲುವಯ್ಯ ಚೆಲುವೆ ತಾನಿತಂದನ್ನ
ಚಿನ್ಮಯಾ ರೂಪೆ ತಂದನ್ನ ತಾನಾ
ಕೇರಿ ಕೇರಿ ತಿರುಗುತ್ತಿಯ
ಭಾರಿ ಕಿನ್ನುಡಿ ನುಡಿಸುತೀಯ
ನಮ್ಮ ಕೇರಿಗ್ಯಾಕೆ ಬರವಲ್ಲೊ



ಚೆಲುವಯ್ಯಾ ಚೆಲುವೋ ತಾನಿ ತಂದನ್ನ
ಚಿನ್ಮಯಾ ರೂಪೆ ತಂದನ್ನ ತಾನಾ
ನಮ್ಮ ಕೇರಿಗೆ ಬಂದದಿನ್ನು
ಕರಿಯ ಕಂಬಳ ಗದ್ದುಗೆ ಹೂಡಿ
ಗಂಧ ವೀಳ್ಯ ತಂದು ಕೊಡುವನೋ

ಚೆಲುವಯ್ಯ ಚೆಲುವೊ ತಾನಿ ತಂದನ್ನ
ಚಿನ್ಮಯಾ ಪೂಪೆ ತಂದನ್ನ ತಾನಾ
ಆಗದೋನೆ ಭೋಗದೋನೆ
ನಾಗರ ನಡುಕಟ್ಟಿನೋನೆ
ಕೋಗಿಲಾಗೆ ಕೂಗುತ್ತೀಯಲ್ಲೊ
ನೋಡಿ ಜಾನಪದ ಕಲಾವಿದರು



ಜಾನಪದ ಹಾಡಿನ ಮೂಲಕ ಹಂಡಿಜೋಗಿಗಳ ವೇಷಭೂಷಣದ ಬಗ್ಗೆ ಕುರಿತು ಎಷ್ಟೊಂದು ಕೊಂಡಾಡಿದ್ದಾರೆ. ಹಂಡಿಜೋಗಿ ಕಲಾವಿದರಿಗೆ ಹಾಡುಗಾರಿಕೆ, ವಾದ್ಯಗಾರಿಕೆ, ನೃತ್ಯ ಎಷ್ಟೊಂದು ಮಹತ್ವವಾಗಿದೆಯೋ



ಅಷ್ಟೆ ಮಹತ್ವ ಅವರ ವೇಷ ಭೂಷಣಕ್ಕೂ ಇದೆ. ಇವರ ವೇಷಭೂಷಣವನ್ನು ನೋಡಿ ಇವರು ಹಂಡಿಜೋಗಿ ಕಲಾವಿದರು, ಹಂಡಿಜೋಗಿ ಸಮುದಾಯ ದವರೆಂದು ತಿಳಿದುಬರುತ್ತದೆ. ಈ ವೇಷಭೂಷಣದ ಕುರಿತು ಭರತನು ಹೀಗೆ ಹೇಳುತ್ತಾನೆ. "ಯಾವುದೇ ಒಬ್ಬ ವ್ಯಕ್ತಿ ಕಲಾವಿದನಾಗಿ ಗೋಚರವಾಗುವುದು ಆತನ ಬಾಹ್ಯರೂಪದ ಮೂಲಕವೇ" ಆದಕಾರಣ ವೇಷಭೂಷಣಕ್ಕೆ ಬಹಳ ಮಹತ್ವವನ್ನು ಕೊಟ್ಟಿದ್ದಾನೆ (ತುಳಸಿ ರಾಮಚಂದ್ರ, ಪಾದಗತಿ–ಪಾದಗತಿ, ಪು. 54). ಹಂಡಿಜೋಗಿ ಕಲಾವಿದ ವೇಷಭೂಷಣ ಹೇಗಿರುತ್ತದೆ ಅಂದರೆ ಅವರ ಪಾದದಿಂದ ಹಿಡಿದು ತಲೆಯ ನೆತ್ತಿನವರೆಗೂ ಅಲಂಕಾರ ಮಾಡಿಕೊಂಡಿರುತ್ತಾರೆ. ಇದನ್ನೇ ಭರತನು ನೇಪತ್ಯವಿಧಿಯೆಂದು ಹೇಳಿದ್ದಾನೆ. "ಆಯಾ ವೇಷಭೂಷಣಗಳ ಮೂಲಕ ಅಭಿನಯಿಸುವುದರಿಂದ ಅಹಾರ್ಯಾಭಿನಯ ಎಂದು ಹೇಳಿದ. ಭರತ ಇದನ್ನು ಚತುರ್ವಿದ ಅಭಿನಯಗಳಲ್ಲಿ ಒಂದಾಗಿ ಹೇಳಿದ್ದಾನೆ.

ಹಂಡಿಜೋಗಿಯವರ ಸಂಗೀತ ಕಲೆಯಲ್ಲಿ ಬರುವ ಹಾಡು, ವಾದ್ಯ ಮತ್ತು ನೃತ್ಯ ಕಲೆಯ ಜೊತೆಗೆ ವೇಷಭೂಷಣವು ಕೂಡ ಒಂದು ಕಲೆಯಾಗಿ ಕಂಡುಬರುತ್ತದೆ. ಇವರು ತಮ್ಮ ಸಂಗೀತ ಕಾರ್ಯಕ್ರಮ ನಡೆಸಿಕೊಡುವುದಕ್ಕಿಂತ ಮುಂಚೆ ತಾವು ತೊಟ್ಟುಕೊಂಡಿರುವ ವಿವಿಧ ರೀತಿಯ ಬಟ್ಟೆಗಳಿಂದ ನೋಡುಗರನ್ನು ಆಕರ್ಷಿಸುತ್ತಾರೆ. ತಲೆಗೆ ಬಣ್ಣಬಣ್ಣದ ಮುಂಡಾಸು. ಆ ಮುಂಡಾಸಿಗೆ ಬಗೆ ಬಗೆಯ ಬಣ್ಣದ ಗಾಜಿನ ಕಡ್ಡಿಯ ಗುಳೂಸುಗಳು ಸಿಕ್ಕಿಸಿರುತ್ತಾರೆ. ಸಂಪೂರ್ಣವಾಗಿ ತಲೆಮೇಲೆ ವಿವಿಧ ರೀತಿಯ ಬಣ್ಣ ಬಣ್ಣದ ತುರಾಂಬಗಳು ಅದರ ಮೇಲೆ ನವಿಲಿನ ಗರಿಗಳು ಸಿಕ್ಕಿಸಿರುತ್ತಾರೆ. ಮೈಮೇಲೆ ಕಪ್ಪದಾಗಿರುವ ನಿಲುವಂಗಿ, ಆ ನಿಲುವಂಗಿ ಕೆಳಗೆ ಕಚ್ಚೆಪಂಜೆ, ಕುತ್ತಿಗೆ ತುಂಬ ಉದ್ದವಾಗಿರುವ ಬಗೆ ಬಗೆಯ ಬಣ್ಣದಿಂದ ಕೂಡಿದ ಮುತ್ತಿನ ಸರಗಳು, ಮೈಮೇಲೆ ತೊಟ್ಟುಕೊಂಡಿರುವ ಕಪ್ಪುದಾರ ಕೋಟೆಯ ಮೇಲೆ ಬಣ್ಣಬಣ್ಣದಿಂದ ಕೂಡಿದ ಅಡ್ಡಶಲ್ಯ, ಹಾಕಿರುತ್ತಾರೆ. ಕಿವಿಗೆ ಕರ್ಣ ಕುಂಡಲ ಹಾಗೂ ಕಪಾಲಿ ಕೈಯಲ್ಲಿ ಕಿನ್ನರಿವಾದ್ಯ. ಕಾಲಿಗೆ ಗೆಜ್ಜೆ, ಹೆಗಲಿಗೆ ಜೋಳಿಗೆ ಹಾಕಿರುತ್ತಾರೆ. ಬಲಗಲ್ಲಕ್ಕೆ ಎಡಗಲ್ಲಕ್ಕೆ ಮತ್ತು ಹಣೆಗೆ ಕುಂಕುಮ ಮತ್ತು ವಿಭೂತಿಯ ಅಚ್ಚಿಕೊಂಡಿರುತ್ತಾರೆ. ತೀಡಿಕೊಂಡಿರುವ ಹುಬ್ಬುಗಳು, ಚಿಗುರು ಮೀಸೆಯ ಮುಖದಲ್ಲಿ ಮುಗುಳುನಗೆ ಕೈಯಲ್ಲಿ ಉಂಗುರ ಇಂಥ ವಿವಿಧ ರೀತಿಯ ಬಣ್ಣ ಬಣ್ಣದ ವೇಷಗಳನ್ನು ಧರಿಸಿಕೊಂಡು ಊರಾಡುತ್ತ ಊರ ರಸ್ತೆಗಳಲ್ಲಿ ಹೊರಬಂದರೆ ಅವರ ವೇಷಭೂಷಣಕ್ಕೆ ಮರುಳಾಗಿ ಅವರ ಕಿನ್ನರಿ ನಾದಕ್ಕೆ ಮನ ಸೋತು ಅವರ ಹಿಂದೆ ಮಕ್ಕಳ ದಂಡೋ ದಂಡು. ಹಾಡು, ಕುಣಿತ, ನೃತ್ಯ ಒಂದು ಕಡೆ ಆದರೆ ಕೇವಲ ವೇಷಭೂಷಣದಿಂದ ಸಾಮಾನ್ಯ ಜನರನ್ನು ಆಕರ್ಷಿಸುವ ಶಕ್ತಿ ಹಂಡಿಜೋಗಿ ವೇಷಭೂಷಣಕ್ಕೆ ಮಾತ್ರ ಇದೆ.

ಈ ಜೋಡಿಯ ವೇಷಭೂಷಣ ಕುರಿತು ಮತ್ತೊಂದು ಜಾನಪದ ಗೀತೆಯನ್ನು ಉದಾಹರಣೆಯಾಗಿ ನೋಡಬಹುದು. ಎಲ್ಲೋ ಜೋಗಪ್ಪ ನಿನ್ನ ಅರಮನಿ ಎಂಬ ಹಾಡು ಸಾಮಾನ್ಯ ಜನರ ಮನೆ

ಹಾಡಾಗಿದೆ. ಜೋಗಿಯ ವೇಷಭೂಷಣ ಕುರಿತು ಒಂದು ಜಾನಪದ ಕಥೆ ಜೋಗಿಯ ವೇಷಭೂಷಣಕ್ಕೆ ಹಾಡಿಗೆ ಮರುಳಾಗಿ ಗರತಿಯೊಬ್ಬಳು, ಆಡುವ ಅಸುಗೂಸನ್ನು ಬಿಟ್ಟು, ಕೂಡಿದ ಗಂಡನನ್ನು ಬಿಟ್ಟು ಜೋಗಿಯ ಹಿಂದೆ ಹೊರಟಳಂತೆ. ಹೀಗೆ ಹತ್ತು ಹಲವಾರು ಜನಪದಗಳ ಮೂಲಕ ಇವರ ವೇಷಭೂಷಣದ ಮಹತ್ವವನ್ನು ನೋಡಬಹುದು.

**೫.೨. ಕೊರಮ ಸಮುದಾಯದ ಸಂಗೀತ**

ಹೈದ್ರಾಬಾದ್ ಕರ್ನಾಟಕದಲ್ಲಿ ಸಂಗೀತವೇ ಜೀವನ, ಸಂಗೀತ ಉಸಿರು, ಸಂಗೀತದಿಂದಲೇ ತಮ್ಮ ಜೀವನ ನಡೆಸುತ್ತಿರುವ ಹಲವಾರು ವೃತ್ತಿ ಸಂಗೀತ ಸಮುದಾಯಗಳಲ್ಲಿ ಕೊರಮ ಸಮುದಾಯವು ಒಂದು ಇದೊಂದು ಅಲೆಮಾರಿ ಸಮುದಾಯವಾಗಿದೆ. ತಲ-ತಲಾಂತರಗಳಿಂದ ಶಹನಾಯಿ, ಖಣಿ ಮೇಳವನ್ನು ನುಡಿಸುತ್ತ ಬಂದಿರುವ ಈ ಕೊರಮ ಸಮುದಾಯದವರು ಯಾವ ಸಂಗೀತ ಕಲಾವಿದರಿಗಿಂತ ನಾವೇನು ಕಮ್ಮಿ ಇಲ್ಲ ಎಂದು ತಮ್ಮದೇ ಆದ ಶೈಲಿಯಲ್ಲಿ ಶಹನಾಯಿ ಅಥವಾ ಖಣಿ ಮೇಳವನ್ನು ನುಡಿಸುತ್ತ ಬಂದಿದ್ದಾರೆ. ಇವರು ಅಲೆಮಾರಿ ಸಮುದಾಯವಾಗಿದ್ದರೂ ಸಹ ತಮ್ಮ ಸಂಗೀತ ಕಲೆ ಪ್ರದರ್ಶನ ನೀಡಿ ಭಿಕ್ಷೆ ಬೇಡುವ ಕಲಾವಿದರಲ್ಲ. ತಮ್ಮ ಸಂಗೀತ ಕಲೆಗೆ ತಮ್ಮದೇ ಆದಂತಹ ಗೌರವ ಇಟ್ಟುಕೊಂಡು ಬಂದಂತ ಕಲಾವಿದರು.

ಸಮಾಜದಲ್ಲಿ ಯಾವುದೇ ಕಾರ್ಯಕ್ರಮಗಳು ಭಾಜ-ಭಜಂತ್ರಿಗಳಿಲ್ಲದೆ ನಡೆಯುವುದಿಲ್ಲವೆಂದು ಹೇಳಬಹುದು. ಕೊರಮರು ಮಂಗಳವಾದ್ಯವಾದ ಶಹನಾಯಿ ವಾದ್ಯವನ್ನು ನುಡಿಸುವುದರಿಂದ ತಾವು ಮಾಡುವ ಕಾರ್ಯಕ್ರಮಕ್ಕೆ ಒಳ್ಳೆದಾಗುತ್ತೆ ಎನ್ನುವ ನಂಬಿಕೆಯಿಂದ ಬಾಜ-ಭಜಂತ್ರಿಗಳನ್ನು ಪ್ರತಿಯೊಂದು ಕಾರ್ಯಕ್ರಮದಲ್ಲಿ ಕರೆಸುತ್ತಾರೆ.

ಇವರು ನೀಡುವ ಶಹನಾಯಿ ಅಥವಾ ಖಣಿ ಮಜಲು ನುಡಿಸುವ ವೇದಿಕೆಗಳು

೧) ಮದುವೆ, ಮುಂಜಿ, ಜವಳ, ಇಳೆವ, ರುತುಮತಿ, ಗೃಹಪ್ರವೇಶ, ಸತ್ತವರ ಮುಂದೆ, ಶ್ರೀಮಂತ ದೇವರ ಕಾರ್ಯಕ್ರಮಗಳು, ತೊಟ್ಟಿಲು ಕಾರ್ಯಕ್ರಮ, ಗುಗ್ಗಳ, ನಮ್ಮ ನಾಡಿನ ಹೆಮ್ಮೆಯ ಸಾಂಸ್ಕೃತಿಕ ನಾಡುಗಳಾದ ಹಂಪಿ ಉತ್ಸವದ ಮೆರವಣಿಗೆ, ರಾಜಕಾರಣಿಗಳ ಮೆರವಣಿಗೆ ಮುಂತಾದ ಕಾರ್ಯಕ್ರಮಗಳಲ್ಲಿ ನುಡಿಸುತ್ತಾರೆ. ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಮನುಷ್ಯ ಹುಟ್ಟಿನಿಂದ ಸಾಯುವವರೆಗೂ ಏನೇ ಕಾರ್ಯಕ್ರಮಗಳು ಮಾಡಿದರೂ ಸಹ ಆ ಕಾರ್ಯಕ್ರಮಗಳಲ್ಲಿ ಕೊರಮ ಸಮುದಾಯದ ಕಲಾವಿದರು ಇರುತ್ತಾರೆ.

ಇವರ ಸಂಗೀತದಲ್ಲಿ ಮುಖ್ಯವಾದಂತಹ ವಾದ್ಯವೆಂದರೆ ಶಹನಾಯಿ ವಾದ್ಯ. ಕೆಲವು ಸಂಗೀತ ಸಮುದಾಯಗಳು ಎಲ್ಲ ಸಮುದಾಯ ಸಂಗೀತ ಕಲೆಗಳಂತೆ ಕೊರಮ ಸಮುದಾಯದ ಸಂಗೀತ ಕಲೆ ವಿಶೇಷವಾಗಿ ಕಂಡುಬರುತ್ತದೆ. ಕಾರಣ ಬೇರೆ ಬೇರೆ ಸಮುದಾಯದ ಸಂಗೀತದಲ್ಲಿ ಕಲಾವಿದರು ಹಂಡಿಜೋಗಿ ಕಲಾವಿದರು ಮತ್ತು ಗೊಂಧಳಿ ಸಮುದಾಯದ ಕಲಾವಿದರು ಪೌರಾಣಿಕ, ಚಾರಿತ್ರಿಕ ಮತ್ತು ಸಾಮಾಜಿಕ ಕತೆಗಳಿಗೆ ಮಾತ್ರ ಹಾಡುತ್ತಾರೆ ಮತ್ತು ಅದೇ ರೀತಿಯ ವಚನದಾಸರು ದಾಸರ

ಗೀತೆಗಳು ವಚನಗಳನ್ನು ಹಾಡುತ್ತಾರೆ ಮತ್ತು ಬುಡ್ಗಜಂಗಮ ಸಮುದಾಯದ ಕಲಾವಿದರು ರಾಮಾಯಣ, ಮಹಾಭಾರತದ ಕಥೆಗಳನ್ನು ಮಾತ್ರ ಹಾಡುತ್ತಾರೆ. ಆದರೆ ಕೊರಮ ಸಮುದಾಯದ ಕಲಾವಿದರು ತಮ್ಮ ಶಹನಾಯಿ ವಾದನದಲ್ಲಿ ಸೋಬಾನ ಪದಗಳು, ಜೋಗುಳದ ಹಾಡುಗಳು, ಶಿವಶರಣರ ವಚನಗಳು, ತತ್ವಪದಗಳು ಮದುವೆ ಸಮಾರಂಭಗಳಲ್ಲಿ ವಧು-ವರನಿಗೆ ಎಣ್ಣೆ ಹಚ್ಚುವ ಅಂತಿಮ ಹಾಡುಗಳು, ದೊಡ್ಡಾಟದ ಹಾಡುಗಳು ದೇವರ ಭಕ್ತಿಗೀತೆಗಳು, ಜಾನಪದ ಗೀತೆಗಳು, ಡೊಳ್ಳಿನ ಹಾಡುಗಳು, ಭಜನಾ ಪದಗಳು ಮತ್ತು 'ಜಾನಪದ ಸಂಗೀತದ ಜೊತೆಗೆ ಶಾಸ್ತ್ರೀಯ ಸಂಗೀತದಲ್ಲಿ ಹಲವಾದು ದೊಡ್ಡ ದೊಡ್ಡ ರಾಗಗಳನ್ನು ತೋಡಿ, ಶುದ್ಧ ಸಾರಾಂಗ, ಭೈರವ ರಾಗ, ಹಂಸಧ್ವನಿ, ಆಲಾಪ, ಭೂಪವಂತಿ, ಮೂರಿಯಾ ಕಲ್ಯಾಣ, ಪೂರಿಯಾ, ಧನಶ್ರೀ, ದುರ್ಗ, ಬಹಾರ ಮತ್ತು ಮಾರುಬಿಹಾಗ ಅಂತ ರಾಗಗಳನ್ನು ಶುಶ್ರಾವ್ಯವಾಗಿ ನುಡಿಸುತ್ತಾರೆ.

ಇವರ ಶಹನಾಯಿ ವಾದನದಲ್ಲಿ ಅಚ್ಚ ಜಾನಪದಗಳಾದ ಸೋಬಾನ ಪದಗಳು, ಜೋಗುಳದ ಹಾಡುಗಳು, ತತ್ವಪದಗಳು, ಜಾನಪದ ಹಾಡುಗಳು ಭಜನ ಪದಗಳನ್ನು ನುಡಿಸುವ ಸಂದರ್ಭದಲ್ಲಿ ಯಾವುದೇ ಶಾಸ್ತ್ರೀಯ ಚೌಕಟ್ಟುಗಳಿರುವುದಿಲ್ಲ. ಆದರೆ ಯಾವುದಾದರೂ ರಾಗ ನುಡಿಸಬೇಕಾದರೆ ಶಾಸ್ತ್ರೀಯ ಚೌಕಟ್ಟು ಮೀರದೆ ಶಾಸ್ತ್ರಬದ್ಧವಾಗಿ ನುಡಿಸುವಂತಹ ಚತುರತೆ ಶಹನಾಯಿ ವಾದನಕ್ಕಿರುತ್ತದೆ.

ಇವರು ನುಡಿಸುವ ಶಹನಾಯಿ ವಾದನ ಸಾಮಾನ್ಯ ಜನ ಪಂಡಿತ, ಪಾಮರ, ವಿದ್ವಾಂಸರು ಕೇಳಿ ಮೆಚ್ಚುಗೆ ವ್ಯಕ್ತಪಡಿಸುತ್ತಾರೆ. ಉದಾಹರಣೆಗೆ ಸೋಬಾನ ಪದ ಹಾಡನ್ನು ಕೇಳುವಂತಹ ಮಹಿಳೆಯರು ಇದ್ದಲ್ಲಿ ಸೋಬಾನ ಪದದ ದಾಟಿ ನುಡಿಸುತ್ತಾರೆ. ಭಜನೆ ಪದ ಕೇಳುವಂತಹ ಜನರಿದ್ದಲ್ಲಿ ಭಜನೆ ಪದದ ದಾಟಿ ನುಡಿಸುತ್ತಾರೆ. ಜಾನಪದ ಗೀತೆಗಳು ಕೇಳುವಂತಹ ಜನರಿದ್ದರೆ ಜಾನಪದ ಗೀತೆಗಳನ್ನು ನುಡಿಸುತ್ತಾರೆ. ಕೆಲವು ಹಳ್ಳಿಗಳಲ್ಲಿ ದೊಡ್ಡಾಟ ಕಲಾವಿದರು ಕಂಡುಬರುತ್ತಾರೆ. ಅಂತವರಿಗೆ ದೊಡ್ಡಾಟ ಹಾಡುಗಳು ಇಷ್ಟ. ಅಂತವರೆದುರಿಗೆ ದೊಡ್ಡಾಟದ ಹಾಡುಗಳ ದಾಟಿ ನುಡಿಸುತ್ತಾರೆ. ಸಿನಿಮಾ ಸಂಗೀತ ಕೇಳುವಂತಹ ಜನರಿಗೆ ಸಿನಿಮಾ ಸಂಗೀತ ನುಡಿಸುತ್ತಾರೆ ಮತ್ತು ದೊಡ್ಡ ದೊಡ್ಡ ಸಂಗೀತ ವಿದ್ವಾಂಸರಿದ್ದಲ್ಲಿ ಸುಮಧುರಭರಿತ ರಾಗಗಳನ್ನು ನುಡಿಸಿ ಅಷ್ಟೂ ಅಲ್ಲದೆ ಸಮಯಕ್ಕನುಸಾರವಾಗಿ ರಾಗಗಳನ್ನು ನುಡಿಸಿ ಸಾಮಾನ್ಯ ಜನರಿಂದ ಹಿಡಿದು ಪಂಡಿರನತನ್ನು ಸಹ ಮಂತ್ರಮುಗ್ಧರನ್ನಾಗಿಸುವ ಶಕ್ತಿ ಈ ಶಹನಾಯಿ ಕಲಾವಿದರಿಗೆ ಇದೆ. ಯಾವುದೇ ಒಂದು ಸಂಗೀತದಲ್ಲಿ ಅದರದ್ದೇ ಆದ ನಿಯಮಗಳಿರುತ್ತವೆ. ಉದಾ: ಬಲಬಾಲ ಹಾಡುವ ಮುಂಚೆ ವಿಲಂಬಿತ ಲಯದಲ್ಲಿ ಆಲಾಪನೆ ಮತ್ತು ಒಂದೊಂದು ಸ್ವರಗಳ ಮೇಲೆ ನಿಂತುಕೊಂಡು ಆಲಾಪನೆ ಮಾಡುವ ಪದ್ಧತಿ ಅಥವಾ ದೃತ್, ಮಧ್ಯ ಲಯದಲ್ಲಿ ಮೊಬಯಾಟ ಹಾಡುವ ಸಂದರ್ಭದಲ್ಲಿ ದೃತ್‌ಲಯದಲ್ಲಿ ಆಲಾಪನೆ ಮಾಡುವ ಮುಖಾಂತರ ಸಂಗೀತ ಪ್ರಾರಂಭ ಮಾಡುವುದು ಕಂಡುಬರುತ್ತದೆ. ಆದರೆ ಕೊರಮ ಸಮುದಾಯದ ಶಹನಾಯಿ ವಾದಕರು ತಮ್ಮ ಸಂಗೀತ ಕಛೇರಿ ಪ್ರಾರಂಭ ಮಾಡುವ ಮುಂಚೆ ವಿಲಂಬಿತ ಮಧ್ಯ ಲಯ ಮತ್ತು ದೃತ್ ಲಯದಲ್ಲಿ ವಿವಿಧ ರೀತಿಯ ಆಲಾಪನೆಗಳನ್ನು

ಮಾಡುತ್ತಾರೆ. ಅವರ ವಿವಿಧ ರೀತಿಯ ಲಯಕಾರಿಯ ಆಲಾಪನೆಗಳನ್ನು ಶುರುಮಾಡಿದರೆಂದರೆ ಆಕಾಶದಿಂದ ಮಳೆ ಬರುತ್ತಿದೆ ಏನೋ ಎನ್ನುವಂತೆ ಭಾಸವಾಗುತ್ತದೆ. ಇವರು ಶಹನಾಯಿ ವಾದನದಲ್ಲಿ ಆಲಾಪನೆಗಳು ಶುರುಮಾಡಿದರೆ ಸಾಕು ಏನು ಸಂಗೀತ ಅರಿಯದವ ಸಾಮಾನ್ಯ ಜನರಿಂದ ಪಂಡಿತರು ಕೂಡಾ ತಲೆದೂಗುವಂತೆ ಮಾಡುತ್ತಾರೆ. ಅಂತಹ ಕಲೆಯ ನೈಪುಣ್ಯತೆ ಇವರ ಸಂಗೀತದಲ್ಲಿದೆ ಎಂದು ಹೇಳಬಹುದು.

ಕೊರಮ ಸಮುದಾಯದಲ್ಲಿ ಒಂದು ದಿನದ ೨೪ ಗಂಟೆಗಳಲ್ಲಿ ೧೮ ತಾಸು ನಿರಂತರ ಸಂಗೀತ ನಾದ ಕೇಳಿಬರುತ್ತದೆ. ಯಾವುದೇ ಕೊರಮರ ಓಣಿಯಲ್ಲಿ ಹೋದರೆ ಸಾಕು ಅಲ್ಲಿ ಯಾರಾದರು ಒಬ್ಬರು ಶಹನಾಯಿ ವಾದ್ಯ ನುಡಿಸುತ್ತ ಇರುತ್ತಾರೆ. ಈ ಸಮುದಾಯದ ಕುಟುಂಬ ಸದಸ್ಯರು, ತಮ್ಮ ಮನೆಯಲ್ಲಿ ನಿರಂತರವಾಗಿ ಸಂಗೀತ ಕೇಳುತ್ತ ಕೇಳುತ್ತ ಪ್ರತಿಯೊಬ್ಬ ಸದಸ್ಯರಿಗೂ ಕೂಡ ಸಂಗೀತ ಬರುತ್ತದೆ. ಆದರೂ ಕೊರಮ ಸಮುದಾಯದಲ್ಲಿ ಹಿರಿಯ ಸಂಗೀತ ಕಲಾವಿದರಿಂದ ಶಹನಾಯಿ ವಾದ್ಯ ಕಲಿಸತ್ತಾರೆ. ಮೊದಲೇ ಕೇಳುತ್ತ ಕೇಳುತ್ತ ಕಲಿತ ಸಂಗೀತವನ್ನು ನಂತರ ಗುರುಮುಖೇನ ಸಂಗೀತ ಕಲಿಯುವುದರಿಂದ ಸಾಮಾನ್ಯವಾಗಿ ಸಂಗೀತ ಒಲಿದು ಬರುತ್ತದೆ.

ಶಹನಾಯಿ ವಾದ್ಯ ಕೈಯಲ್ಲಿ ಹಿಡಿದುಕೊಂಡು ಯಾವುದಾದರೊಂದು ರಾಗದ ಆಲಾಪನೆ ಶುರು ಮಾಡಿದರೆಂದರೆ ಸಾಕು ದೂರ ದೂರದಲ್ಲಿ ಕುಳಿತಿರುವ ಜನರನ್ನು ತಮ್ಮ ಹತ್ತಿರ ಬರುವಂತೆ ಮಾಡುತ್ತಾರೆ. ಇವರ ನಿಂತುಕೊಳ್ಳುವ ಶೈಲಿ, ಇವರ ಗತ್ತು ನೋಡಿದರೆ ನಾವು ಯಾವ ಕಲಾವಿದರಿಗೂ ಕಮ್ಮಿ ಇಲ್ಲ ನಾವೇ ಸಂಗೀತ, ಸಂಗೀತವೇ ನಾವು ಎಂಬಂತೆ ಕಾಣಿಸುತ್ತದೆ. ಇವರ ಶಹನಾಯಿ ನುಡಿಸುವಾಗ ಇವರ ತಲೆ ಮತ್ತು ಶಹನಾಯಿ ಆಕಾಶದ ಕಡೆಗೆ ನೋಡುತ್ತಿರುತ್ತದೆ. ಭಾವನ ಪೂರ್ವಕವಾಗಿ ಮೈ ಜೋಲಿ ಹೊಡೆಯುತ್ತ ಅಭಿನಯ ಪೂರ್ವಕವಾಗಿ ತಮ್ಮ ಶಹನಾಯಿ ವಾದ್ಯದಲ್ಲಿ ವಿವಿಧ ರೀತಿಯ ಲಯಕಾರಿಗಳೊಂದಿಗೆ ಆಲಾಪನೆಗಳನ್ನು ಶುರು ಮಾಡುತ್ತಾರೆ. ಆದರೆ ಒಂದು ವಿಶೇಷವಾದಂತ ವಿಷಯವೇನೆಂದರೆ ಹಳ್ಳಿಯ ಸಾಮಾನ್ಯ ಜನರಿಗೆ ಶಾಸ್ತ್ರೀಯ ಸಂಗೀತ ತಿಳಿದಿರುವುದಿಲ್ಲ. ಆದರೆ ಈ ಶಹನಾಯಿ ವಾದಕರು ಮಾಡುವ ವಿವಿಧ ರೀತಿಯ ಆಲಾಪನೆಗಳ ಮೂಲಕ ಸಾಮಾನ್ಯ ಜನರನ್ನು ಸಹ ಮಂತ್ರ ಮುಗ್ದರನ್ನಾಗಿ ಮಾಡುತ್ತಾರೆ. ಸಾಮಾನ್ಯ ಮನುಷ್ಯನು ವ್ಹಾ ವ್ಹಾ ಶಹನಾಯಿಯಲ್ಲಿ ಎಷ್ಟೊಂದು ಕೆಲಸ ಮಾಡ್ತನಪ್ಪ ಎಂದು ಹಾಡಿಕೊಳ್ಳುತ್ತಾರೆ. ಕೆಲಸ ಅಂದರೆ? ವಿವಿಧ ರೀತಿಯ ಲಯಕಾರಿ? ಆಲಾಪನೆಗಳು ಎಂದರ್ಥ. ನಾನು ಗಮನಿಸಿದ ಪ್ರಕಾರ ಯಾವುದೆ ಸಂಗೀತದಲ್ಲಿ ಕಲಾವಿದರು. ಉದಾಹರಣೆಗೆ ಜಾನಪದ ಕಲಾವಿದ ಜಾನಪದ ಹಾಡು ಶುರು ಮಾಡಿದರೆಂದರೆ ಅದೇ ಹಾಡಿನಿಂದ ಮುಕ್ತಾಯ ಮಾಡುತ್ತಾರೆ. ಶಾಸ್ತ್ರೀಯ ಸಂಗೀತ ಕಲಾವಿದರು ಶಾಸ್ತ್ರೀಯ ಸ್ಥಳದಲ್ಲಿ ಬಡಾಖ್ಯಾಲನ್ನು ಶುರುಮಾಡಿ ಮಧ್ಯ, ದೃತ್ ಲಯದಲ್ಲಿ ತಮ್ಮ ಶಾಸ್ತ್ರೀಯ ಸಂಗೀತದ ಮೂಲಕವೆ ಮುಕ್ತಾಯ ಮಾಡಿ ನಂತರ ರುಮಾ, ವಚನ, ದಾಸವಾಣಿ ಅಥವಾ ಭಾವಗೀತೆಗಳನ್ನು ಹಾಡುವುದನ್ನು ನಾವು ಕಾಣುತ್ತೇವೆ. ಆದರೆ ಕೊರಮ ಸಮುದಾಯದ ಶಹನಾಯಿ ವಾದಕರ ಒಂದು ವಿಶೇಷವೇನೆಂದರೆ

ಒಂದು ಸಲ ಶಹನಾಯಿ ವಾದನ ಶುರುಮಾಡಿದರೆಂದರೆ ಸಾಕು ಮುಕ್ತಾಯದವರೆಗೆ ವಿವಿಧ ರೀತಿಯ ತಾಳ ಲಯಕಾರಿಗಳೊಂದಿಗೆ ಶಾಸ್ತ್ರೀಯ ಸಂಗೀತದ ಬಡಾಖ್ಯಾಲದೊಂದಿಗೆ ಶುರುಮಾಡಿ ಚೋಟ ಖ್ಯಾಲ, ಜಾನಪದ ಗೀತೆ, ಜೋಗುಳದ ಹಾಡು, ದೊಟ್ಟಾದ ಹಾಡು, ಭಜನೆ ಹಾಡು, ಸಿನಿಮಾ ಸಂಗೀತ ಇನ್ನು ಮುಂತಾದ ಸಂಗೀತವನ್ನು ತನ್ನ ಶಹನಾಯಿ ವಾದನದಲ್ಲಿ ನುಡಿಸುತ್ತಾನೆ. ಒಂದು ವಿಷಯ ಹೇಳುವುದೆಂದರೆ ಒಂದೊಂದು ಸಂಗೀತಕ್ಕೂ ಅದರದೇ ಆದ ಸಂಗೀತ ಕಲಾವಿದರು ಕಂಡುಬರುತ್ತಾರೆ. ಸಂಗೀತದಲ್ಲೆ ಜಾನಪದ ಸಂಗೀತ ಬೇರೆ ಶಾಸ್ತ್ರೀಯ ಸಂಗೀತ ಬೇರೆ, ಸಿನಿಮಾ ಸಂಗೀತ ಬೇರೆ ಮತ್ತು ರಂಗ ಸಂಗೀತ ಬೇರೆ ಎಂದು ತಿಳಿದುಬರುತ್ತದೆ. ಒಂದೊಂದು ಸಂಗೀತಕ್ಕೂ ಅದರದೇ ಆದ ಸಂಗೀತ ಕಲಾವಿದರು ವಿದ್ವಾಂಸರು ಕಂಡುಬರುತ್ತಾರೆ. ಆದರೆ ಕೊರಮ ಸಮುದಾಯ ಎಷ್ಟೆಲ್ಲ ಸಂಗೀತವನ್ನು ತಮ್ಮ ಶಹನಾಯಿ ವಾದನದ ಮುಖಾಂತರ ಜನಸಾಮಾನ್ಯರಿಗೂ ಪರಿಚಯಿಸುವ ಕೆಲಸ ಕೊರಮ ಸಮುದಾಯದ ಶಹನಾಯಿ ಕಲಾವಿದರು ಮಾಡುತ್ತಾರೆ ಎಂದರೆ ತಪ್ಪಾಗಲಾರದು.

ನಾವು ಠುಮ್ರಿ ಗಾಯನ ನೋಡಿದಾಗ ಮೂಲ ರಾಗದೊಂದಿಗೆ ಪ್ರಾರಂಭ ಮಾಡಿ ಬೇರೆ ಬೇರೆ ರಾಗಗಳ ಮುಖಾಂತರ ವಿಸ್ತಾರ ಮಾಡಿ ನಂತರ ಮೂಲ ರಾಗಕ್ಕೆ ಬರುವುದನ್ನು ನಾವು ಕಾಣುತ್ತೇವೆ ಆದರೆ ಶಹನಾಯಿ ವಾದಕರು ಶಾಸ್ತ್ರೀಯ ಸಂಗೀತದಿಂದ ಪ್ರಾರಂಭ ಮಾಡಿ ಮುಗಿಯುವವರೆಗೂ ನಡುವೆ ಎಲ್ಲ ಸಂಗೀತ ಪ್ರಕಾರಗಳನ್ನು ನುಡಿಸಿ ಮುಕ್ತಾಯ ಮಾಡುತ್ತಾರೆ. ಬಹುಶಃ ಎಲ್ಲ ಪ್ರಕಾರದ ಸಂಗೀತವನ್ನು ತನ್ನ ಶಹನಾಯಿ ವಾದ್ಯದ ಮುಖಾಂತರ ಜನಸಾಮಾನ್ಯರಿಗೂ ಪರಿಚಯಿಸುವ ಕಲಾವಿದರೆಂದರೆ ಅದು ಕೊರಮ ಸಮುದಾಯದ ಶಹನಾಯಿ ವಾದಕರು ಎಂದರೆ ತಪ್ಪಾಗಲಾರದು.

**ಮದುವೆ ಸಮಾರಂಭಗಳಲ್ಲಿ ಶಹನಾಯಿ ವಾದನ**

ಮದುವೆ ಪ್ರಾರಂಭದಲ್ಲಿ ದೇವರ ನಾಮವನ್ನು ನುಡಿಸುವುದರ ಮುಖಾಂತರ ತಮ್ಮ ಸಂಗೀತ ಕಚೇರಿ ಪ್ರಾರಂಭ ಮಾಡುತ್ತಾರೆ. ನಂತರ ಹೈರಾಣ ತರುವ ಸಂದರ್ಭದಲ್ಲಿ ಹೆಣ್ಣುಮಕ್ಕಳು ಹಾಡಿರುವ ಗಂಗಮ್ಮನ ಕುರಿತು ಹಾಡುಗಳನ್ನು ನುಡಿಸುತ್ತಾರೆ. ನಂತರ ವಧು–ವರನಿಗೆ ಎಣ್ಣೆ ಹಚ್ಚುವಾಗ ಎಣ್ಣೆ ಹಚ್ಚುವ ಹಾಡುಗಳನ್ನು ನುಡಿಸುತ್ತಾರೆ. ನಂತರ ತಾಳಿ ಕಟ್ಟುವ ಸಂದರ್ಭಗಳಲ್ಲಿ ಜೋರಾಗಿ ಶಹನಾಯಿ ವಾದ್ಯವನ್ನು ಧೃತಲಯದಲ್ಲಿ ನುಡಿಸುತ್ತಾರೆ ಇವರು ಜೋರಾಗಿ ನುಡಿಸಲು ಪ್ರಾರಂಭ ಮಾಡಿದರೆಂದರೆ ಸಾಕು ಅಕ್ಷತೆ ಬೀಳುತ್ತಿದ್ದಾವೆ ಎಂದರ್ಥ. ಎಲ್ಲ ಕಾರ್ಯಗಳು ಮುಗಿದ ನಂತರ ವಧು–ವರನ ಮೆರವಣಿಗೆಯಲ್ಲಿ ಅಲ್ಲಿ ನೃತ್ಯ ಮಾಡುವ ಯುವಕರು ಕೇಳಿದ ಹಾಡುಗಳನ್ನು ನುಡಿಸುತ್ತಾರೆ. ಜಾನಪದ, ಸಿನಿಮಾ, ಹಿಂದಿ ಸಿನಿಮಾ, ತೆಲುಗು ಸಿನಿಮಾ ಮುಂತಾದ ಹಾಡುಗಳನ್ನು ನುಡಿಸಿ ಯುವಕರನ್ನು ನೃತ್ಯ ಮಾಡುವಂತೆ ಮಾಡುತ್ತಾರೆ.

ಕೊನೆಗೆ ವಧು–ವರರ ಮೆರವಣಿಗೆ ಮುಗಿದು ಮನೆಗೆ ಬಂದು ಅವರ ಸಂಭಾವನೆ ತೆಗೆದುಕೊಂಡ ನಂತರ ಕೊನೆಯದಾಗಿ ಜೋಗುಳದ ಹಾಡನ್ನು ನುಡಿಸುತ್ತಾರೆ. ಕೊನೆಗೆ ಸಂಭಾವನೆ ಜೊತೆಗೆ ಕುಸಿ ಇಸ್ಕೊಂಡು ಬರುತ್ತಾರೆ. (ಕೊನೆಗೆ ಜೋಗುಳದ ಶಹನಾಯಿ ವಾದನದಲ್ಲಿ ನುಡಿಸಿದರೆ ಮದುವೆ ಆದ

ಒಂದು ವರ್ಷದಲ್ಲಿ ವಧು-ವರನಿಗೆ ಮಗು ಆಗುತ್ತದೆ ಎನ್ನುವ ನಂಬಿಕೆಯಿಂದ ಜೋಗುಳದ ಹಾಡನ್ನು ಹಾಡಿಸಿದ ನಂತರ ಖುಷಿಯಿಂದ ಒಂದು ಕುಪ್ಪಸ ಒಂದು ಕೊಬ್ಬರಿ ಬಟ್ಟಲು ಕೊಟ್ಟು ಮೇಲೆ ೧೦೧ ರೂಪಾಯಿ ಸಂಭಾವನೆ ಕೊಟ್ಟು ಕಳಿಸುತ್ತಾರೆ. ಮದುವೆ ಸಮಾರಂಭಗಳಲ್ಲಿ ಬರುವ ವಿವಿಧ ಆಚರಣೆಗಳಿಗನುಸಾರವಾಗಿ ಆ ಸಂದರ್ಭಕ್ಕನುಸಾರವಾಗಿ ಹಾಡುಗಳ ದಾಟಿಯನ್ನು ತಮ್ಮ ಶಹನಾಯಿ ವಾದನದಲ್ಲಿ ನುಡಿಸುವುದು ಕಂಡುಬರುತ್ತದೆ.

**ಉಡಕ್ಕಿ ಹಾಡು**

ಹಿರಿಯರ ಮದುವೆ ಸಂಪ್ರದಾಯದಂತೆ ಮದುವೆಯಾದ ನಂತರ ಮದುಮಗಳಿಗೆ ಗಂಡನ ಮನೆಗೆ ಕಳುಹಿಸುವಾಗ ಈ ಉಡಕ್ಕಿ ಹಾಡನ್ನು ನುಡಿಸಲಾಗುತ್ತದೆ. ಈ ಹಾಡು ಹಿಂದೂಸ್ತಾನಿ ಸಂಗೀತದ ರಾಗದಲ್ಲಿದ್ದು ಕೇಹರವಾ ತಾಳದಲ್ಲಿ ಹಾಡಲಾಗುತ್ತದೆ.

ಬಾಳೆಹಣ್ಣನು ತರಸಿ
ಬಾಲೆರುಡಿಯಲ್ಲಿ ದರಸಿ
ಬ್ಯಾಂಡ ಬಾಜವ ತರಿಸಿ
ಬೋಹಾರ್ಥಲಿಂದ ಮೆರಸಿ
ಎತ್ತುವೆ ನಾರುತಿಯ ಮಹಾಗಾಂಧಿ
ಮಹಾತ್ಮನರಿಗೆ

ಲಿಂಬೆ ಹಣ್ಣ ತರಸಿ
ರಂಬೆ ರೂಢಿಯಲ್ಲಿ ಧರಸಿ
ಬ್ಯಾಂಡ ಬಾಜವ ತರಿಸಿ
ಬೋಹಾರ್ಥಲಿಂದ ಮೆರಸಿ
ಎತ್ತುವೆ ನಾರುತಿಯ
ಮಹಾಗಾಂಧಿ ಮಹಾತ್ಮನರಿಗೆ

**ಜೋಗುಳದ ಹಾಡು**

ಮದುವೆ ಕಾರ್ಯಕ್ರಮಗಳಲ್ಲಿ ಎಲ್ಲ ಕಾರ್ಯಗಳು ಮುಗಿದನಂತರ ಕೊನೆಗೆ ಶಹನಾಯಿ ವಾದ್ಯದಲ್ಲಿ ಈ ರೀತಿಯಾಗಿ ಜೋಗುಳದ ಹಾಡಿನ ದಾಟಿಯನ್ನು ನುಡಿಸುತ್ತಾರೆ. ಮಂಗಳವಾದ್ಯವಾದ ಈ ಶಹನಾಯಿ ವಾದ್ಯದಲ್ಲಿ ಮದುವೆಯಾದ ಒಂದು ವರ್ಷದೊಳಗೆ ಆ ಮದುವೆಯಾದ ದಂಪತಿಗಳಿಗೆ ಒಂದು ಮಗು ಜನಿಸುತ್ತದೆ ಎನ್ನುವ ನಂಬಿಕೆ ಈ ರೀತಿಯಾಗಿ ಜೋಗುಳದ ಹಾಡನ್ನು ನುಡಿಸಿ ಖುಷಿಯಿಂದ ಬಾಜ ಇಸ್ಕೊಂಡು ಬರುತ್ತಾರೆ.

**ರಾಗ: ಪಹಾಡಿ ಮಿಶ್ರ ತಾಳ: ದೀಪಚಂದಿ**

ಕರಿಯಾಕ ದಿನ ಕಣಕಿ
ಕಡಗ ಕುಂಚಿಗಿ ತುಂಬಿ
ಹೆಗಲ ಮ್ಯಾಲಾರೆದರ
ತಗತಗದ ವಗಿತಾನ
ಕೆಳೆನ್ನ ಕಸ್ತೂರಿ ರಂಗನ ಜೋ.. ಜೋ...

ಸಣ್ಣಕ್ಕಿ ಸವಿಬಾನ
ಬೆಣ್ಣಿಕಾಸಿದ ತುಪ್ಪ
ತುತ್ತಮಾಡಿ ಉಣಸಿದರ
ಹಠಮಾಡಿ ಅಳತಾನ
ಕೆಳೆನ ಕಸ್ತೂರಿ ರಂಗನ ಜೋ.. ಜೋ...

ನೀರನ ನೆಲನೋಡಿ
ಸೂರ್ಯ ಚಂದ್ರನ ಭೇಟಿ
ಅದುರಂತೆ ಬಾ ಬೇಡಿ
ಹೊರಳಾಡಿ ಅಳುತಾನ
ಕೆಳೆನ್ನ ಕಸ್ತೂರಿ ರಂಗ ಜೋ.. ಜೋ...

ಅಕ್ಷತೆಯ ಮುಂಚೆ ಎಣ್ಣೆ ಹಚ್ಚುವ ಹಾಡು ಈ ರೀತಿಯಾಗಿ ಕಂಡುಬರುತ್ತದೆ.

ಎಣ್ಣೆಯ ಹಚ್ಚುವ ಹಾಡು
ನೈಎಣ್ಣೆ ನೆಚುಟುಗೆ
ಬಾಕಲಿಗೆ ಬಿಸಲು ಬಂದ

ಈ ಎಲ್ಲ ಹಾಡುಗಳು ಸಾಮಾನ್ಯವಾಗಿ ಹೆಣ್ಣುಮಕ್ಕಳ ಹಾಡುವಂತಹ ಹಾಡಾಗಿದ್ದರೂ ಕೂಡ ಶಹನಾಯಿ ವಾದನದಲ್ಲಿಯೂ ಕೂಡ ಈ ಎಲ್ಲ ಹಾಡುಗಳು ನುಡಿಸುವುದು ಕೂಡ ಸಂಪ್ರದಾಯವಾಗಿದೆ. ಮೇಲಿನ ಎಲ್ಲ ಹಾಡುಗಳು ಸಂಪ್ರದಾಯವಾಗಿದೆ. ಮೇಲಿನ ಎಲ್ಲ ಹಾಡುಗಳು ಶಹನಾಯಿ ವಾದ್ಯದಲ್ಲಿ ನುಡಿಸುತ್ತಿದ್ದಾರೆ. ಹೆಣ್ಣುಮಕ್ಕಳು ಹಾಡುವುದು ಅವಶ್ಯಕತೆ ಇಲ್ಲ ಎಂದೆನಿಸುತ್ತದೆ. ಅವರು ಅದ್ಭುತವಾಗಿ ನುಡಿಸುತ್ತಾರೆ.

ಈ ರೀತಿಯಾಗಿ ಶಾಸ್ತ್ರದ ಹಾಡುಗಳು ನುಡಿಸುತ್ತಾರೆ. ಈ ಹಾಡುಗಳಲ್ಲಿ ಹಲವಾರು ಹಿಂದೂಸ್ತಾನಿ ಸಂಗೀತದ ರಾಗಗಳಾದ ಬೂಪ, ದುರ್ಗ, ಬಿಲಾವಲ್ ಮತ್ತು ತಾಳಗಳಾದ ದಾದ್ರ, ಕೆಹರವಾ, ದೀಪಚಂದಿ ಮುಂತಾದ ತಾಳಗಳು ಕಂಡುಬರುತ್ತವೆ. ಈ ರೀತಿಯಾಗಿ ಶಾಸ್ತ್ರದ ಹಾಡುಗಳು ನುಡಿಸಿದ ನಂತರ ವದು-ವರರ ಮೆರವಣಿಗೆಯಲ್ಲಿ ಮನರಂಜನೆಗೋಸ್ಕರ ಪ್ರೇಕ್ಷಕರು ಕೇಳಿದ ಹಾಡುಗಳಿರಲಿ,

ಜಾನಪದ ಸಂಗೀತ, ಸಿನಿಮಾ, ತತ್ವಪದ, ಸಂಗೀತ, ದೊಡ್ಡಾಟದ ಸಂಗೀತ, ಭಜನೆ ಸಂಗೀತ ಇನ್ನು ಮುಂತಾದ ಸಂಗೀತದ ಹಾಡುಗಳನ್ನು ನುಡಿಸುತ್ತಾರೆ. ಮನರಂಜನೆಗೋಸ್ಕರ ಎಲ್ಲ ಪ್ರಕಾರದ ಸಂಗೀತ ಕಲೆಯನ್ನು ತಮ್ಮಲ್ಲಿ ಅಳವಡಿಸಿಕೊಂಡಿದ್ದಾರೆ. ಉದಾಹರಣೆಗೆ,

**ಜನಪದ ಹಾಡು**

ಚನ್ನಪ್ಪ ಚನ್ನಗೌಡ ಕುಂಬಾರ ಮಾಡಿದ
ಕೊಡನವ್ವ ಚಂದಕ ತಂದಿನಿ ತಂಗಿ ನೀರಿಗೆ ಬಂದಿನೆ
ಆರು-ಮೂರು ಒಂಬತ್ತು
ಒಂಬತ್ತು ತೂತಿನ ಕೊಡನವ್ವ
ಚಂದಕ ತಂದಿನಿ ತಂಗಿ ನೀರಿಗೆ ಬಂದಿನೆ

**ರಂಗ ಸಂಗೀತ(ದೊಡ್ಡಾಟ)**

ಮಡದಿಯ ಮಾತನ್ನು
ಬಿಡದೇ ಲಾಲಿಸೋ ಕಾಂತಾ
ಸಡಗರದಿಂದಲಿ ಸಡಗರದಿಂದಲಿ
ಹಿಡಿಯುವರೇ ಪಂಥ ರಮಣಾ ಆ (ಮು)

ಜಡಜ ನೇತ್ರನೆ ಕೇಳೊ
ಕಡುಗಲಿ ಪಾರ್ಥನೋಳು
ಒಡನೆ ಕದನವು
ಬ್ಯಾಡೋ ರಮಣಾ...

**ಭಜನ ಸಂಗೀತ**

**ತಾಳ: ಕೇಹರವಾ**

ಹಣೆಬರ ಕಥೆಯಲ್ಲಿ ಬ್ರಹ್ಮಗ
ಬಿಟ್ಟಿಲ್ಲ ಯಾರೇನು ಮಾಡಿರೊ
ಇಂದಿನ ಸುಖ ಬೇಡಿರೊ
ಮುಂದಿನ ಬಹುಫ ಕೇಳಿರೊ

ಸುಳ್ಳು ಹೇಳಿ ನುಟ್ಟುಕೊಂಡಾನೋ ಕಾಮ
ಪಗಡಿ ಆಡಿ ಮಡದಿ ಸೋತಾನೇ ಧರ್ಮ
ಪಗಡಿ ಆಡಿ ಮಡದಿ ಸೋತಾನೋ ಧರ್ಮ
ಸೀತಾನ ಕಳಕೊಂಡು ಹುಡುಕ್ಯಾನ ರಾಮ

ಈ ರೀತಿಯ ಹಾಡುಗಳು ಹಳ್ಳಿಯಲ್ಲಿ ಭಜನೆ ಮಾಡುವಂತ ಕಲಾವಿದರ ಆಕ್ಷೇಪಣೆಯ ಮೇರೆಗೆ ಈ ತೆರನಾದ ಹಾಡುಗಳು ಶಹನಾಯಿ ಮೇಳದಲ್ಲಿ ನುಡಿಸಿ ಜನರನ್ನು ರಂಜಿಸುತ್ತಾರೆ. ಶಹನಾಯಿ ವಾದ್ಯದ ಜೊತೆಗೆ ಹಿಮ್ಮೇಳ ಕಲಾವಿದರು ಸಹಿತ ಭಜನೆಯಲ್ಲಿ ನುಡಿಸುವಂತಹ ತಾಳ ದಮ್ಮಡಿ ರೆಬಾದ ತರಸಿ ನುಡಿಸುತ್ತ ಜನರನ್ನು ರಂಜಿಸುತ್ತಾರೆ.

**ಮರಾಠಿ ಹಾಡು**

ಡೊಕಾ ಪಿರಲಯಾ ಬಯಚ ಡೋಕ ಪಿರಲಯಾ

ಹತಲಾ ದರಲಯಾ ನಮಿಚೆ ಲಗಿನ ಟರಲಿಯಾ

ಅಂತರ

ಹಿತಾ ಭರಲಯಾ ನ್ಯಾರ ಪಿಸ

ಹಿ ಬಾಯಿನ ರಾತ ದಿಸ

ಸಾಡಿ ಸೊಡುನ ಇಜಾರ ನೆಸ

ಹಿ ಸೊಡುನ ಮೊಕಳೆ ಕೆಸ

ವಾರ ಭರಲಯಾ ಅಂಗಾತ ವಾರ ಭರಲಯ

ಹತಲಾ ಡರಲಯಾ ನಮಿಚೆ ವಾರೆ ಭರಲಯ.

ಇತ್ಯಾದಿ ಸಂಗೀತ ಪ್ರಕಾರದ ಹಾಡುಗಳನ್ನು ನುಡಿಸುತ್ತಾರೆ.

ವದು-ವರರ ಮೆರವಣಿಗೆಯೆಂದರೆ ಒಂದು ಸಂಪ್ರದಾಯವು ಹೌದು ಮತ್ತು ಅದರ ಜೊತೆಗೆ ಖುಷಿಗಾಗಿ ಮನರಂಜನೆ ಕೂಡ ಹೌದು. ಒಂದು ಮದುವೆ ಎಂದ ಮೇಲೆ ಅಲ್ಲಿ ಎಲ್ಲ ಪ್ರಕಾರದ ಹಾಡುಗಳನ್ನು ಕೇಳುವ ಪ್ರೇಕ್ಷಕರು ಇರುತ್ತಾರೆ. ಅವರ ಅಪೇಕ್ಷೆಯ ಮೇರೆಗೆ ಅವರು ಕೇಳುವ ಎಲ್ಲ ತರಹದ ಹಾಡುಗಳನ್ನು ಶಹನಾಯಿ ಮೇಳದಲ್ಲಿ ನುಡಿಸುತ್ತಾರೆ. ಮೂಲತಃ ಸಿನಿಮಾ ಹಾಡುಗಳನ್ನು ನುಡಿಸುವ ಕಲಾವಿದರಲ್ಲ, ಶಾಸ್ತ್ರೀಯವಾಗಿ ರಾಗಗಳನ್ನು ನುಡಿಸುವುದರ ಜೊತೆಗೆ ಜಾನಪದ ಸಂಗೀತದ ಹಾಡುಗಳನ್ನು ನುಡಿಸುತ್ತಿದ್ದರು. ಎಲ್ಲ ತರಹದ ಸಿನಿಮಾ ಹಾಡುಗಳನ್ನು ನುಡಿಸಲು ಕಾರಣ ಶಹನಾಯಿ ಮೇಳದ ಪ್ರಾರಂಭದಲ್ಲಿ ಶಾಸ್ತ್ರೀಯವಾಗಿ ರಾಗಗಳನ್ನು ನುಡಿಸುತ್ತಿದ್ದರು. ನಂತರ ಹಲವಾರು ಜಾನಪದ ಸಂಗೀತ ಹಾಡುಗಳನ್ನು ನುಡಿಸುತ್ತಾ ದೇವರ ಸೇವೆ, ಮದುವೆ, ಮುಂಜಿ ಮುಂತಾದ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ತಮ್ಮ ಕಲೆಯನ್ನು ಪ್ರದರ್ಶನ ನೀಡಿ ಜೀವನ ನಡೆಸುತ್ತಿದ್ದರು. ನಂತರ ಆಂಗ್ಲರ ವಾದ್ಯಮೇಳವಾದ ಬ್ಯಾಂಡ್ ಮೇಳ ಪಾದರ್ಪಣೆ ಮಾಡಿತು. ಈ ಬ್ಯಾಂಡ್ ಮೇಳದಲ್ಲಿ ಕಾಲಕ್ಕೆ ತಕ್ಕಂತೆ ಜನರ ಮನರಂಜನೆಗೋಸ್ಕರ ಎಲ್ಲ ತರಹದ ಸಿನಿಮಾ ಹಾಡುಗಳನ್ನು ನುಡಿಸುವುದರ ಮೂಲಕ ಯುವಕರಿಂದ ವೃದ್ಧರವರೆಗೂ ಬ್ಯಾಂಡ್ ಮೇಳವುಒಂದು ಅದ್ಭುತ ಮೇಳ ಎಂದು ಹೆಸರುವಾಸಿಯಾಯಿತು. ಎಲ್ಲ ಜನಾಂಗದವರು ಶಹನಾಯಿ ಮೇಳವನ್ನು ಬಿಟ್ಟು ಬ್ಯಾಂಡ್ ಮೇಳದವರನ್ನು ತಮ್ಮ ತಮ್ಮ ಕಾರ್ಯಕ್ರಮಗಳಿಗೆ ಆಹ್ವಾನ ನೀಡತೊಡಗಿದರು. ಶಹನಾಯಿ ಮೇಳಕ್ಕೆ ಬೇಡಿಕೆ

ಕಡಿಮೆಯಾಗಿದ್ದರಿಂದ ತಮ್ಮ ಶಹನಾಯಿ ಮೇಳದಲ್ಲಿಯೂ ಕೂಡ ಕಾಲಕ್ಕನುಗುಣವಾಗಿ ಶಾಸ್ತ್ರೀಯ ಸಂಗೀತದಿಂದ ಜಾನಪದ ಸಂಗೀತ ಹಿಡಿದು ಎಲ್ಲ ಪ್ರಕಾರದ ಸಂಗೀತ ಹಾಡುಗಳನ್ನು ನುಡಿಸಲು ಪ್ರಾರಂಭ ಮಾಡಿದರು. ಆದ್ದರಿಂದ ಈ ಪ್ರಸ್ತುತ ಕಾಲದಲ್ಲಿ ಬ್ಯಾಂಡ್ ಮೇಳಗಿಂತಲೂ ಶಹನಾಯಿ ಮೇಳಕ್ಕೆ ಬೇಡಿಕೆ ಹೆಚ್ಚಾಗಿದೆ ಎಂದು ಹೇಳಬಹುದು.

ಮದುವೆಯ ಮನೆಯಲ್ಲಿ ವದು-ವರರ ಮೆರವಣಿಗೆ ಮುಗಿದ ನಂತರ ಕೊನೆಯಲ್ಲಿ ಜೋಗುಳದ ಹಾಡನ್ನು ನುಡಿಸುತ್ತಾರೆ.

ಗೃಹಪ್ರವೇಶ ಸಂದರ್ಭದಲ್ಲಿ ದೇವರ ನಾಮಗಳನ್ನು ನುಡಿಸುತ್ತಾರೆ. ಸತ್ತವರ ಮನೆಮುಂದೆ ರಘುಪತಿ ರಾಘವ ರಾಜಾರಾಮ ಎಂಬ ಹಾಡಿನ ದಾಟಿಯನ್ನು ಮಾತ್ರ ನುಡಿಸುತ್ತಾರೆ. ಒಮ್ಮೊಮ್ಮೆ ಅಲ್ಲಿರುವ ಕುಡುಕರ ಅಪೇಕ್ಷೆ ಮೇರೆಗೆ ಭಜನೆ ಹಾಡುಗಳ ದಾಟಿ, ಸಿನಿಮಾ ಸಂಗೀತ ದಾಟಿಯನ್ನು ನುಡಿಸುತ್ತಾರೆ. ಕೊನೆಗೆ ಹೆಣ ಎತ್ತಿಕೊಂಡು ಕುಣಿಗೆ ಹೋಗುವ ತನಕ ರಘುಪತಿ ರಾಜರಾಮ ಎಂಬ ಹಾಡನ್ನು ನುಡಿಸುತ್ತಾರೆ.

**ಪುರವಂತಿಗೆ ಕಾರ್ಯಕ್ರಮದಲ್ಲಿ ಶಹನಾಯಿ ಮೇಳ**

ಶಹನಾಯಿ ಮೇಳದ ಕಲಾವಿದರು ಬೇರೆ ಯಾವುದೇ ಕಾರ್ಯಕ್ರಮಕ್ಕೆ ಹೋಗದಿದ್ದರೂ ನಡೆದು ಹೋಗುತ್ತದೆ. ಆದರೆ ಪುರವಂತಿಗೆ ಕಾರ್ಯಕ್ರಮಗಳಲ್ಲಿ ಕಡ್ಡಾಯವಾಗಿ ಶಹನಾಯಿ ಮೇಳದ ಕಲಾವಿದರೂ ಇರಲೇಬೇಕಾಗುತ್ತದೆ. ಶಹನಾಯಿ ಮೇಳದವರು ಈ ಪುರವಂತಿಗೆ ಕಾರ್ಯಕ್ರಮಗಳಲ್ಲಿ ಸಿನಿಮಾ ಸಂಗೀತ/ಹಾಡುಗಳು ನುಡಿಸುವುದಿಲ್ಲ. ವಚನಗಳು, ಭಕ್ತಿಗೀತೆ, ಶಾಸ್ತ್ರೀಯ ರಾಗಗಳು ಮಾತ್ರ ನುಡಿಸುವುದು ಕಂಡುಬರುತ್ತದೆ. ಪುರವಂತಿಗೆ ಮತ್ತು ಶಹನಾಯಿ ಮೇಳದವರಿಗೂ ನಂಟು ಎಷ್ಟು ವರ್ಷಗಳ ಹಿಂದಿನದು ಎಂದು ಯಾವ ಕಲಾವಿದರೂ ಕೂಡ ಇದರ ಬಗ್ಗೆ ಸಂಪೂರ್ಣ ಮಾಹಿತಿ ಒದಗಿಸಿಲ್ಲ. ತಾತ-ಮುತ್ತಾತನ ಕಾಲಿಂದಲೂ ಈ ಸಂಪ್ರದಾಯ ಬಂದಿದೆ ಎಂದು ಹೇಳುತ್ತಾರೆ. ಶಹನಾಯಿ ಮೇಳವಿಲ್ಲದೆ ಪುರವಂತಿಗೆ ಕಾರ್ಯಕ್ರಮ ನಡೆಯುವುದಿಲ್ಲ ಎನ್ನುವಷ್ಟರ ಮಟ್ಟಿಗೆ ಶಹನಾಯಿ ಮೇಳ ಅವಶ್ಯಕವಾಗಿರುತ್ತದೆ.

ಈ ಪುರವಂತಿಕೆ ಕಾರ್ಯಕ್ರಮ ಶಿವರಾತ್ರಿ, ನವರಾತ್ರಿ, ಕಾರ್ತಿಕ ಇತ್ಯಾದಿ ಹಬ್ಬ ಹರಿದಿನಗಳಲ್ಲಿ ಮದುವೆ, ದೇವರ ಉತ್ಸವ, ಊರ ಜಾತ್ರೆ, ಗೃಹಪ್ರವೇಶ ಮುಂತಾದ ಸಂದರ್ಭಗಳಲ್ಲಿ ನಡೆಯುತ್ತದೆ.

ಶಹನಾಯಿ, ಶ್ರುತಿ, ಖಣಿ, ದಿಮ್ಮಿ ವಾದ್ಯಗಳನ್ನು ನುಡಿಸುತ್ತ ಪುರವಂತಿಗೆ ಹಾಡುವ ಕಲಾವಿದರನ್ನು ಕರೆದುಕೊಂಡು ಬರುತ್ತಾರೆ. ಈ ಪುರವಂತಿಗೆ ಕಾರ್ಯಕ್ರಮಗಳಲ್ಲಿ ಶಹನಾಯಿ ವಾದ್ಯದ ಜೊತೆಗೆ ಖಣಿ, ದಿಮ್ಮಿ ವಾದ್ಯಗಳ ಪಾತ್ರ ಬಹಳ ಮುಖ್ಯವಾಗಿರುತ್ತದೆ. ಈ ಪುರವಂತಿಗೆಯ ಕಲಾವಿದರನ್ನು ಹೊಳೆಯ ಬಳಿಯಿಂದ ಅಥವಾ ಯಾವುದಾದರೂ ಗುಡಿಯಿಂದ ಕರೆದುಕೊಂಡು ಬರಲಾಗುತ್ತದೆ. ಹೀಗೆ ಕರೆದುಕೊಂಡು ಬರುವಾಗ ದೇವಾಲಯದ ಮುಂದೆ ನಿಂತು ಒಡಪುಗಳು ಹೇಳುತ್ತಾರೆ. ಈ ಒಡಪುಗಳು ಹೆಚ್ಚಾಗಿ ಶಿವಶರಣರ ವಚನಗಳೇ ಆಗಿರುತ್ತವೆ. ಪುರವಂತಿಗೆ ಹಾಡುವ ಕಲಾವಿದರು

ಪ್ರಾರಂಭದಲ್ಲಿ ಹಾಹಾಹಾ ಭದ್ರ ಎಂದಾಕ್ಷಣ ಸಂಬಾಳ ಅಥವಾ ಖಣಿ, ದಿಮ್ಮಿ ವಾದ್ಯಗಳಲ್ಲಿ ದಡಮ್ ಎಂದು ನುಡಿಸುತ್ತಾರೆ ನಂತರ ಪುನಃ ಹಾಹಾಹಾ ವೀರ ಎಂದಾಕ್ಷಣ ಡಗಡಗಡಗಡಗ ಎಂದು ವಾದ್ಯದಲ್ಲಿ ನುಡಿಸಲಾಗುತ್ತದೆ. ಹೀಗೆ ಅನೇಕ ಒಡಪುಗಳನ್ನು ಹೇಳಿದ ತಕ್ಷಣ ಪುರವಂತಿಗೆ ಹಾಡುವ ಕಲಾವಿದರು ವಚನ ಅಥವಾ ದೇವರನಾಮವನ್ನು ಹಾಡುತ್ತಾರೆ. ಇವರ ಹಾಡು ಹೆಚ್ಚಾಗಿ ಕೆಹರವಾ, ದೀಪಚಂದಿ, ದಾದ್ರ ತಾಳಗಳಲ್ಲಿ ಹಾಡುವುದು ಕಂಡಬುರತ್ತದೆ. ತಾಳಮೇಳದೊಂದಿಗೆ ಇವರು ಹಾಡಿದ ನಂತರ ಇವರು ಹಾಡಿದ ಹಾಡನ್ನೇ ವಾದ್ಯದಲ್ಲಿ ನುಡಿಸುತ್ತಾನೆ. ಶಹನಾಯಿ ವಾದ್ಯದಲ್ಲಿ ನುಡಿಸುವ ಸಂದರ್ಭದಲ್ಲಿ ಪುರವಂತಿಗೆ ಹಾಡುವವರು ವೀರಾವೇಷದಿಂದ ಕುಣಿಯಲು ಪ್ರಾರಂಭ ಮಾಡುತ್ತಾನೆ. ಈ ರೀತಿಯಾಗಿ ವೀರಾವೇಷದಿಂದ ಕುಣಿಯಲು ಶಹನಾಯಿ ಮೇಳದ ಪಾತ್ರ ಬಹಳ ಮುಖ್ಯವೆನಿಸುತ್ತದೆ. ಕಾರಣ ಅವರು ಹಾಡಿದ ಹಾಡನ್ನು ಮಧ್ಯ ಲಯದಲ್ಲಿ ನುಡಿಸಿ ನಂತರ ಉಠಾವ್ ಲಯದಲ್ಲಿ ನುಡಿಸುತ್ತಿದ್ದರೆ ಸಾಮಾನ್ಯ ಮನುಷ್ಯನಿಗೂ ಕೂಡ ಮೈ ಹುರಿದುಂಬುತ್ತದೆ. ಅಷ್ಟೊಂದು ಅದ್ಭುತವಾಗಿ ನುಡಿಸುತ್ತಾರೆ. ಪುರವಂತಿಗೆ ಕಲಾವಿದರೂ ಕುಣಿಯುತ್ತ ಕುಣಿಯುತ್ತ ಕೊನೆಯಲ್ಲಿ ದೇಹದ ವಿವಿಧ ಭಾಗಗಳಿಗೆ ಶಸ್ತ್ರಗಳನ್ನು ಚುಚ್ಚಿಕೊಂಡು ಮತ್ತೆ ಕುಣಿಯುತ್ತಾನೆ. ಈ ಸಂದರ್ಭದಲ್ಲಿ ಶಹನಾಯಿ ವಾದಕನ ಪಾತ್ರ ಬಹಳ ಮುಖ್ಯವಾಗಿರುತ್ತದೆ. ಶಸ್ತ್ರ ಹಾಕಿಕೊಳ್ಳುವ ಸಂದರ್ಭದಲ್ಲಿ ಶಹನಾಯಿ ವಾದಕ ಉಸಿರುಬಿಡದೇನೆ ನಿರಂತರವಾಗಿ ನುಡಿಸುತ್ತಿರುತ್ತಾನೆ. ಶಹನಾಯಿ ಜೊತೆಗೆ ಹಿಮ್ಮೇಳ ಕಲಾವಿದರೂ ಸಹ ದೃತ್ ಹಾಕಿಕೊಳ್ಳುವಾಗ ಶಹನಾಯಿ ವಾದಕ ಉಸಿರು ಬಿಡದೇನೆ ನುಡಿಸಬೇಕಾಗುತ್ತದೆ. ಒಂದುವೇಳೆ ಉಸಿರು ಬಿಟ್ಟರೆ ಪುರವಂತಿಗೆ ತಾನು ಹಾಕಿಕೊಳ್ಳುವ ಶಸ್ತ್ರಗಳನ್ನು ಕೋಪದಿಂದ ತನಗೆ ಚುಚ್ಚಿ ಬಿಡುತ್ತಾನೆ ಎನ್ನುವ ಭಯ ಶಹನಾಯಿ ವಾದಕನಲ್ಲಿ ಕಾಡುತ್ತಾ ಇರುತ್ತದೆ. ಈ ಕಾರಣ ನಿರಂತರವಾಗಿ ನುಡಿಸುತ್ತ ಇರುತ್ತಾರೆ. ಕೊನೆಗೆ ಶಸ್ತ್ರಗಳನ್ನು ತೆಗೆದ ನಂತರ ಶಹನಾಯಿ ಮೇಳದಲ್ಲಿ ತಿಹಾಯಿ(ತಾವು ನುಡಿಸುವ ಹಾಡನ್ನು ಮೂರು ಬಾರಿ ನುಡಿಸುವರು) ಮಾಡಿ ಮುಕ್ತಾಯ ಮಾಡುತ್ತಾರೆ. ಪುರವಂತಿಗೆಯಲ್ಲಿ ಅತ್ಯದ್ಭುತವಾಗಿ ನುಡಿಸುವ ಕಲಾಮೇಳವೆಂದರೆ ಕಲಬುರಗಿ ಜಿಲ್ಲೆಯ ಜೇವರ್ಗಿ ತಾಲೂಕಿನ ಕಾಸರಬೊಸಣಾ ಗ್ರಾಮದ ಶಂಕ್ರಪ್ಪ ಭಜಂತ್ರಿಯವರ ಮೇಳ. ಅದೇ ಜೇವರಗಿ ತಾಲೂಕಿನ ಪ್ರಭು ಭಜಂತ್ರಿಯವರ ಶಹನಾಯಿ ಮೇಳ, ಹಂಚಿನಾಳ ಗ್ರಾಮದ ಯಮನಪ್ಪ ಭಜಂತ್ರಿಯವರ ಶಹನಾಯಿ ಮೇಳ, ಕೂಡುರ ಗ್ರಾಮದ ತಿಪ್ಪಣ್ಣ ಭಜಂತ್ರಿಯವರ ಶಹನಾಯಿ ಮೇಳ, ಕಲಬುರಗಿ ಜಿಲ್ಲೆ ಕಲಬುರಗಿ ತಾಲೂಕಿನ ಬೆಳಗುಂಪಿ ಗ್ರಾಮದ ಮರಿಯಪ್ಪ ಭಜಂತ್ರಿಯವರ ಶಹನಾಯಿ ಮೇಳ, ಹೇರೂರು ಗ್ರಾಮದ ತಿಪ್ಪಣ್ಣ ಭಜಂತ್ರಿಯವರ ಶಹನಾಯಿ ಮೇಳ, ಬಸಪಟ್ಟಣ ಗ್ರಾಮದ ಮರೆಪ್ಪ ಭಜಂತ್ರಿಯವರ ಶಹನಾಯಿ ಮೇಳ, ಮಳ್ಳಿ ಗ್ರಾಮದ ಸಿದ್ರಾಮಪ್ಪ ಭಜಂತ್ರಿಯವರ ಶಹನಾಯಿ ಮೇಳ.

ಯಾದಗಿರಿ ಜಿಲ್ಲೆ ಶಹಪೂರ ತಾಲೂಕಿನ ಬೇವಿನಹಳ್ಳಿ ಗ್ರಾಮದ ಭೀಮರಾಯ ಭಜಂತ್ರಿಯವರ ಶಹನಾಯಿ ಮೇಳ, ಬಸಣ್ಣ ಭಜಂತ್ರಿಯವರ ಶಹನಾಯಿ ಮೇಳ, ರಸ್ತಾಪೂರ ಗ್ರಾಮದ ದೇವೇಂದ್ರಪ್ಪ ಭಜಂತ್ರಿಯವರ ಶಹನಾಯಿ ಮೇಳ, ದೊಕಿನಹಳ್ಳಿ ಗ್ರಾಮದ ಹುಸೇನಪ್ಪ ಭಜಂತ್ರಿಯವರ ಶಹನಾಯಿ ಮೇಳ, ದೊಡ್ಡ ಸಾಗರದ ಸಾಯಿಬಣ್ಣ ಭಜಂತ್ರಿಯವರ ಶಹನಾಯಿ ಮೇಳ, ಹೊಸಕೇರಿ ಗ್ರಾಮದ

ಭೀಮರಾಯ ಭಜಂತ್ರಿಯವರ ಶಹನಾಯಿ ಮೇಳ, ಹೊಸಕೇರಿ ಗ್ರಾಮದ ಭೀಮರಾಯ ಭಜಂತ್ರಿಯವರ ಶಹನಾಯಿ ಮೇಳ, ಸುರಪುರ ತಾಲೂಕಿನ ಗೂಡಿಹಾಳ ಗ್ರಾಮದ ಪರಮಣ್ಣ ಭಜಂತ್ರಿಯವರ ಶಹನಾಯಿ ಮೇಳ, ಸಾಂತಪೂರ ಗ್ರಾಮದ ಸಾಹಿಬಣ್ಣ ಭಜಂತ್ರಿಯವರ ಶಹನಾಯಿ ಮೇಳ, ಬೂಪೂರ ಗ್ರಾಮದ ಚಗದ್ದೆಪ್ಪ ಭಜಂತ್ರಿಯವರ ಶಹನಾಯಿ ಮೇಳ.

ರಾಯಚೂರು ಜಿಲ್ಲೆ ರಾಯಚೂರು ತಾಲೂಕಿನ ದೇವಸೂಗುರು ಗ್ರಾಮದ ಶರಣಪ್ಪ ಭಜಂತ್ರಿಯವರ ಶಹನಾಯಿ ಮೇಳ, ದುರ್ಗಪ್ಪ ಭಜಂತ್ರಿಯವರ ಶಹನಾಯಿ ಮೇಳ.

ಸತ್ತವರ ಮನೆಮುಂದೆ ಶಹನಾಯಿ ಮೇಳ ನುಡಿಸುವುದು ಮೊದಲಿಂದ ಬಂದಂತಹ ಸಂಪ್ರದಾಯವಾಗಿದೆ. ಮನುಷ್ಯನ ಹುಟ್ಟಿನಿಂದ ಹಿಡಿದು ಸಾಯುವವರೆಗೂ ಆಚರಿಸಿಕೊಳ್ಳುವ ಪ್ರತಿಯೊಂದು ಕಾರ್ಯಕ್ರಮದಲ್ಲಿ ಮಂಗಳವಾದ್ಯ ಅಥವಾ ಶಹನಾಯಿ ಮೇಳವನ್ನು ನುಡಿಸಲಾಗುತ್ತದೆ. ಅದೇ ರೀತಿಯಲ್ಲಿ ಸತ್ತಾಗಲೂ ಕೂಡ ಶಹನಾಯಿ ಮೇಳವನ್ನು ನುಡಿಸಲಾಗುತ್ತದೆ. ಈ ರೀತಿ ಶಹನಾಯಿ ಮೇಳವನ್ನು ನುಡಿಸುವುದರಿಂದ ಸತ್ತವರ ಆತ್ಮಕ್ಕೆ ಶಾಂತಿ ಸಿಗುತ್ತದೆ ಎನ್ನುವ ನಂಬಿಕೆ ಜನರಲ್ಲಿರುತ್ತದೆ. ಈ ಶಹನಾಯಿ ಮೇಳದವರು ಮದುವೆ ಮನೆಯಲ್ಲಿ ನುಡಿಸುವಂತಹ ಸಿನಿಮಾ ಹಾಡುಗಳು ಇಲ್ಲಿ ನುಡಿಸುವುದಿಲ್ಲ. ಸತ್ತವರ ಮನೆ ಮುಂದೆ ಶೋಕದ ವಾತಾವರಣವಿರುವುದರಿಂದ ಕೇವಲ ಭಜನೆ ಪದಗಳು, ತತ್ವಪದಗಳು ಮಾತ್ರ ತಮ್ಮ ಶಹನಾಯಿ ಮೇಳದಲ್ಲಿ ನುಡಿಸುತ್ತಾರೆ. ಶಹನಾಯಿ ಮೇಳದವರಿಗೆ ತಮ್ಮ ಕಲೆಯನ್ನು ಪ್ರದರ್ಶನ ನೀಡಲು ಸತ್ತವರ ಮನೆ ಒಂದು ವೇದಿಕೆಯನ್ನಾಗಿ ಮಾಡಿಕೊಳ್ಳುತ್ತಾರೆ. ಜಾನಪದ, ಭಜನ ಪದ, ತತ್ವಪದಗಳ ಜೊತೆಗೆ ಶಾಸ್ತ್ರೀಯವಾಗಿ ರಾಗಗಳನ್ನು ನುಡಿಸುತ್ತಾರೆ.

**ಉರುಸು ಕಾರ್ಯಕ್ರಮಗಳಲ್ಲಿ ಶಹನಾಯಿ ಮೇಳ**

ಉರುಸು ಇಸ್ಲಾಂ ಧರ್ಮದ ಧಾರ್ಮಿಕ ಕಾರ್ಯಕ್ರಮವಾಗಿರುವುದರಿಂದ ಅಲ್ಲಿ ಭಜನೆ ಸಂಗೀತ ಹಾಡುಗಳಾಗಲಿ, ಸಿನಿಮಾ ಸಂಗೀತ ಹಾಡುಗಳಾಗಲಿ ನುಡಿಸುವುದಿಲ್ಲ. ಅಲ್ಲಿ ಕೇವಲ ಖವ್ವಾಲಿ ಸಂಗೀತ ಹಾಡುಗಳು ಮತ್ತು ಮೊಹರಂ ಪದಗಳನ್ನು ಶಹನಾಯಿ ಮೇಳದಲ್ಲಿ ನುಡಿಸುತ್ತಾರೆ. ಆ ಉರುಸು ಕಾರ್ಯಕ್ರಮಗಳಲ್ಲಿ ಸಾಮಾನ್ಯವಾಗಿ ಮುಸ್ಲಿಂ ಭಾಂದವರು ಇರುವುದರಿಂದ ಖವ್ವಾಲಿ ಮತ್ತು ಮೊಹರಂ ಹಾಡುಗಳನ್ನು ಹೆಚ್ಚಾಗಿ ನುಡಿಸುವುದು ಕಂಡುಬರುತ್ತದೆ. ಯಾವುದೇ ಹಾಡಾಗಿರಲಿ ಆ ಹಾಡು ಶಹನಾಯಿ ಮೇಳದಲ್ಲಿ ನುಡಿಸುತ್ತಿದ್ದರೆ ಹಾಡುವುದೇ ಅವಶ್ಯಕತೆ ಇಲ್ಲ ಅನ್ನುವಷ್ಟರ ಮಟ್ಟಿಗೆ ಸುಮಧುರವಾಗಿ ನುಡಿಸುತ್ತಾರೆ.

**ಹಬ್ಬಹರಿದಿನ ಮತ್ತು ಜಾತ್ರೆಗಳಲ್ಲಿ ಶಹನಾಯಿ ಮೇಳ**

ಈ ಜಾತ್ರೆ ಸಂದರ್ಭಗಳಲ್ಲಿ ಶಹನಾಯಿ ಮೇಳ ಕಲಾವಿದರಿಗೆ ಇಂತಹದ್ದೇ ಹಾಡುಗಳು ನುಡಿಸಬೇಕು ಎನ್ನುವ ಯಾವುದೇ ನಿರ್ಬಂಧವಿಲ್ಲ. ಕಾರಣ ಜಾತ್ರೆ ಅಂದ ಮೇಲೆ ಎಲ್ಲ ಪ್ರಕಾರದ ಹಾಡುಗಳನ್ನು ಕೇಳುವ ಅಂದರೆ ಶಾಸ್ತ್ರೀಯ ಸಂಗೀತ ರಾಗಗಳನ್ನು ಹಿಡಿದು ಜಾನಪದ ಸಂಗೀತ, ರಂಗ ಸಂಗೀತ, ಜಾನಪದ ಸಂಗೀತ ಮತ್ತು ಶಾಸ್ತ್ರೀಯ ಸಂಗೀತದ ರಾಗಗಳನ್ನು ಸಹ ಕೇಳುವ ಜನರಿರುತ್ತಾರೆ. ಆದ್ದರಿಂದ ಜನರ ಅಪೇಕ್ಷೆ ಮೇರೆಗೆ ಎಲ್ಲ ಪ್ರಕಾರದ ಹಾಡುಗಳನ್ನು ನುಡಿಸುವುದು ಕಂಡುಬರುತ್ತದೆ.

**ಅಲಾವಿ ಕುಣಿತದಲ್ಲಿ ಶಹನಾಯಿ ಮೇಳ**

ಅಲಾವಿ ಎಂದರೆ ಕೆಂಡದಿಂದ ಮಾಡಿದ ಕೊಂಡ ಎಂದರ್ಥ. ಈ ಕೊಂಡದ ಸುತ್ತಮುತ್ತ ಕುಣಿತ ಮಾಡುವುದರಿಂದ ಅಲಾವಿ ಕುಣಿತ ಎಂದು ಕರೆಯುತ್ತಾರೆ. ಈ ಕುಣಿತದಲ್ಲಿ ಭಾಗವಹಿಸುವಂತಹ ಜನರು ಸಾಮಾನ್ಯವಾಗಿ ಮುಸ್ಲಿಂ ಸಮುದಾಯದ ಜನಾಂಗದವರೇ ಇರುತ್ತಾರೆ. ಈ ಕುಣಿತದಲ್ಲಿ ಶಹನಾಯಿ ಮೇಳದ ಕಲಾವಿದರ ಪಾತ್ರ ಬಹಳ ಮುಖ್ಯವಾಗಿ ಕಂಡುಬರುತ್ತದೆ. ಈ ಕುಣಿತದಲ್ಲಿ ಖಣಿ, ದಿಮ್ಮಿ ವಾದ್ಯಗಳನ್ನು ಹೊರತುಪಡಿಸಿ ಕೇವಲ ಶೃತಿ, ಸಾಜ್ ಮಾತ್ರ ನುಡಿಸುತ್ತಾರೆ.

ಹಿಮ್ಮೇಳವಾಗಿ ಹಲಗೆ(ತಪಡಿ) ವಾದ್ಯಗಳನ್ನು ನುಡಿಸುತ್ತಾರೆ. ಈ ಹಲಗೆ ನುಡಿಸುವ ಕಲಾವಿದರೂ ಕೊರಮ ಸಮುದಾಯದ ಕಲಾವಿದರಾಗಿರದೆ ಮಾದಿಗ ಸಮುದಾಯದ ಕಲಾವಿದರಾಗಿರುತ್ತಾರೆ. ಈ ಕುಣಿತದಲ್ಲಿ ಶಹನಾಯಿ ಕಲಾವಿದ ಸಿನಿಮಾ ಹಾಡುಗಳು, ಶಾಸ್ತ್ರೀಯ ರಾಗಗಳನ್ನು ನುಡಿಸುವುದಿಲ್ಲ. ಕುಣಿತಕ್ಕೆ ತಕ್ಕಂತೆ ಹೆಚ್ಚಾಗಿ ಮೊಹರಂ ಹಾಡುಗಳು ಮತ್ತು ಹಳೆಯ ಜಾನಪದ ಹಾಡುಗಳನ್ನು ಮಾತ್ರ ನುಡಿಸುತ್ತಾನೆ. ಹೆಚ್ಚಾಗಿ ಇವರು ನುಡಿಸುವ ಹಾಡಿನ ತಾಳ ಖವ್ವಾಲಿ ತಾಳದ ಮಾತ್ರೆಗಳದ್ದೆ ಆಗಿರುತ್ತದೆ. ಉಠಾನ್ ಲಯದಲ್ಲಿ ಇರುತ್ತದೆ. ಶಹನಾಯಿ ವಾದಕ ನುಡಿಸಿದ ಹಾಡಿನ ತಾಳಕ್ಕೆ ತಕ್ಕಂತೆ ಜನರು ಕುಣಿಯುತ್ತಾರೆ.

**ಮೊಹರಂ ಹಾಡು**

ಹಿರಿಯರು ಸುತ್ತ ಕುಂತಿಂ ನೇರದ
ಬಯಾನ ಕೇಳಿರಿ ಈ ಹುಡುಗಂದ
ಗದ್ದಲ ಮಾಡತ್ತಿರಿ ಎನ್ನ ತಿಳಿದ
ಹಲ್ಲಕಿಸಿಯತಿರಿ ಎನ ಚಂದ
ಮನುಷರ ಜನುಮಕ ಹುಟ್ಟಿಬಂದ
ಸ್ವಲ್ಪ ನೋಡಿ ನಡಿಯಬೇಕು ಹಿಂದ–ಮುಂದ

ಈ ಮೊಹರಂ ಹಾಡು ಪಟದೀಪ್ ರಾಗವಾಗಿದ್ದು ಕೆಹರವಾ ತಾಳದ್ದಾಗಿರುತ್ತದೆ. ಈ ಹಾಡಿನ ದಾಟಿಯನ್ನು ಮಾತ್ರ ಶಹನಾಯಿ ಮೇಳದಲ್ಲಿ ನುಡಿಸುತ್ತಾರೆ.

**ಜನಪದ ಗೀತೆ**

ಯಾವ ದೇಶದ ಗಂಡು ಇವನು
ರಂಗೀಲಾಲ ಕುಂತಾನ ಕುದುರಿ ಮ್ಯಾಲ
ಮಾಡತಾನ ಡೌಲ

ಕೈಯಲ್ಲಿ ಗುಣಿ ಕೋಗಿಲೆ ತಿರುಗುಸುತಾನ ಕೊಲ
ಯಾವ ತಾಯಿ ಕುಡಿಸಿದಳಪ್ಪ ಎದಿಹಾಲ
ಮಾಡತಾನ ಡೌಲ

**ಶಹನಾಯಿ ಮೇಳ/ಖಣಿ ಮೇಳ**

ಈ ಮೇಳದಲ್ಲಿ ಸುಮಾರು ಎಂಟು ಜನ ಕಲಾವಿದರು ಕಂಡುಬರುತ್ತಾರೆ. ಇಬ್ಬರು ಶಹನಾಯಿ ವಾದಕರು, ಒಬ್ಬ ಶುತಿ (ಶೃತಿ) ಇಬ್ಬರು ಖಣಿ ವಾದಕರು, ಒಬ್ಬ ದಿಮ್ಮಿವಾದಕ, ಇಬ್ಬರು ತಾಳ ವಾದಕರು ಸೇರಿ ಎಂಟು ಜನ ಕಲಾವಿದರು ಕಂಡುಬರುತ್ತಾರೆ. ಮೊದ ಮೊದಲು ಅಂದರೆ ಸುಮಾರು ೨೫ ವರ್ಷಗಳಿಂದ ಕೇವಲ ನಾಲ್ಕು ಜನ ಕಲಾವಿದರು ಕಂಡುಬರುತ್ತಿದ್ದರು. ಒಬ್ಬ ಶಹನಾಯಿ ವಾದಕ, ಶುತಿ(ಶೃತಿ) ವಾದಕ, ಖಣಿ ವಾದಕ ಮತ್ತು ಒಬ್ಬ ದಿಮ್ಮಿ ವಾದಕ. ಮೊದಲು ನಾಲ್ಕು ಜನ ಕಲಾವಿದರು ಇದ್ದರು. ಈ ಮೇಳದಲ್ಲಿ ಈಗ ಎಂಟು ಜನ ಕಲಾವಿದರು ಇರಲು ಕೆಲವು ಕಾರಣಗಳಿವೆ. ಯಾವುದೇ ಒಂದು ಧಾರ್ಮಿಕ ಕಾರ್ಯಕ್ರಮಗಳಲ್ಲಿ ಅಂದರೆ ದೇವರ ಜಾತ್ರೆಗಳಲ್ಲಿ ಉತ್ಸವಗಳಲ್ಲಿ ಹಲವಾರು ಸಮುದಾಯದ ಸಂಗೀತ ಮೇಳಗಳು ಸೇರಿರುತ್ತವೆ. ಡೊಳ್ಳುಮೇಳ, ಬ್ಯಾಂಡಿನಾ ಮೇಳ ಮತ್ತು ಜಗ್ಗಲಿಗೆ ಅಂತಹ ವಾದ್ಯಗಳ ಮೇಳದ ಆರ್ಭಟದಲ್ಲಿ ಶಹನಾಯಿ ಮೇಳಗಳ ಶಬ್ದ ಕೇಳಿಸದೆ ಇರುವುದರಿಂದ, ಎರಡು ಖಣಿ, ಎರಡು ಶಹನಾಯಿ, ಎರಡು ತಾಳಗಳು ಹಾಕಿರುತ್ತಾರೆ ಎನ್ನುವುದು ಒಂದು ಉದಾಹರಣೆ. ಹಲವಾರು ಸಂಗೀತ ಪ್ರಕಾರಗಳಲ್ಲಿ ಬದಲಾವಣೆ ಮತ್ತು ಮನೋರಂಜನೆಗಾಗಿ ಹಲವಾರು ಸಂಗೀತ ಪ್ರಕಾರಗಳು ಹುಟ್ಟಿಕೊಂಡಿರುವುದರಿಂದ ನಮ್ಮ ಶಹನಾಯಿ ಮೇಳಕ್ಕೆ ಬೇಡಿಕೆ ಕಡಿಮೆಯಾಗಬಾರದೆಂದು ಇಬ್ಬರು ಶಹನಾಯಿ ವಾದಕರು, ಇಬ್ಬರು ಖಣಿ ವಾದಕರು, ಒಬ್ಬ ಶುತಿ(ಶೃತಿ) ಇಬ್ಬರು ತಾಳದ ಕಲಾವಿದರು ಸೇರಿ ಎಂಟು ಜನ ಕಲಾವಿದರ ಮೇಳವಾಗಿದೆ. ಮೊದ ಮೊದಲು ಈ ಶಹನಾಯಿ ಮೇಳದಲ್ಲಿ ತಾಳ ಇರಲಿಲ್ಲ ವಿಜಯಪುರ ಜಿಲ್ಲೆಯ ಇಂಡಿ ತಾಲೂಕಿನ ಹಿರೇರೂಗಿ ಗ್ರಾಮದ ಕೊರಮ ಸಮುದಾಯ ಶಹನಾಯಿ ಮೇಳ ಕಲಾವಿದರು ತಾಳವನ್ನು ತಮ್ಮ ಶಹನಾಯಿ ಮೇಳದಲ್ಲಿ ಅಳವಡಿಸಿಕೊಂಡು ನುಡಿಸಿದ್ದಾರೆ ಎಂದು ಹೇಳುತ್ತಾರೆ. ಈ ವಾದ್ಯವನ್ನು ಬೇರೆ ಬೇರೆ ಕುರುಬ ಸಮಾಜದ ಕಲಾವಿದರಿಗೆ ಕಲಿಸುತ್ತಾರೆ. ಈ ಡೊಳ್ಳು ಪೆಟ್ಟು ಬಾರಿಸುವುದು ಮೂಲ ವೃತ್ತಿಯಲ್ಲದಿದ್ದರೂ ತಾವು ನುಡಿಸುವ ದಿಮ್ಮಿಯ ಪೆಟ್ಟುಗಳೆ ಡೊಳ್ಳಿನಲ್ಲಿ ಅಳವಡಿಸಿಕೊಂಡು ಬಾಯಾಡಿಕೆಯಲ್ಲಿ ನುಡಿಸಲು ಹೋಗುತ್ತಿದ್ದರು. (ಪ್ರಾರಂಭ ಮಾಡಿದರು) ಡೊಳ್ಳಿನ ಪೆಟ್ಟುಗಳಲ್ಲಿ ತಾಳ ಇರುವುದರಿಂದ ಈ ತಾಳ ನಮ್ಮ ಶಹನಾಯಿ ಮೇಳದಲ್ಲಿ ಅಳವಡಿಸಿ ಅದಕ್ಕೊಂದು ಹೊಸ ರೂಪ ಕೊಟ್ಟವರು ರೂಗಿ ಶಹನಾಯಿ ಮೇಳ ಕಲಾವಿದರು ಎಂದು ಹೇಳಬಹುದು.



ಕೊರಮ ಸಂಪ್ರದಾಯದವರು ತಾಳಕ್ಕಾಗಿ ಖಣಿ, ದಿಮ್ಮಿ ಮತ್ತು ತಾಳ ವಾದ್ಯವನ್ನು ಬಳಸುತ್ತಾರೆ. ಈ ಶಹನಾಯಿ ಮೇಳದಲ್ಲಿ ಎಲ್ಲ ಕಲಾವಿದರಿಗೂ ತಮ್ಮ ತಮ್ಮ ಕಲೆಯ ಪ್ರವೀಣತೆ ತೋರಿಸಲು ಅವಕಾಶವಿರುತ್ತದೆ. ಎಲ್ಲ ಸಂಗೀತ ಮೇಳಗಳು ದೇವರ ನಾಮದಿಂದ ಪ್ರಾರಂಭ ಮಾಡುವಂತೆ ಶಹನಾಯಿ ಮೇಳ ಕಲಾವಿದರು ಕೂಡ ಯಾವುದಾದರು ಒಂದು ದೇವರ ನಾಮದಿಂದ ಪ್ರಾರಂಭ ಮಾಡುತ್ತಾರೆ. ಇವರು ಶಹನಾಯಿ ಮೇಳ ಪ್ರಾರಂಭ ಮಾಡುವ ಮುಂಚೆ ಶ್ರುತಿ ವಾದಕ ಶ್ರುತಿ ಹಾಕಲು ಪ್ರಾರಂಭ ಮಾಡುತ್ತಾರೆ. ನಂತರ ಖಣಿ, ದಿಮ್ಮಿ, ಮತ್ತು ತಾಳದ ವಾದ್ಯದ ಕಲಾವಿದರು, ತಬಲಾದ ಸ್ವತಂತ್ರ ವಾದನದಲ್ಲಿ ಮೊದಲಿಗೆ ಉಠಾಣ್ (ಯಾವುದಾದರೊಂದು ತಾಳದ ಬೋಲನ್ನು ಮೂರು ಸಲ ನುಡಿಸಿ ಸಮ್‌ನ ಮೇಲೆ ಬರುವಂತೆ)ನ್ನು ನುಡಿಸಿದಂತೆ. ಶಹನಾಯಿ ಮೇಳದಲ್ಲಿ ಖಣಿ, ದಿಮ್ಮಿ ಮತ್ತು ತಾಳದ ಕಲಾವಿದರು ವಿಲಂಬಿತ ಲಯದಲ್ಲಿ ಬೋಲುಗಳನ್ನು ಪ್ರಾರಂಭ ಮಾಡಿ ಮಧ್ಯಲಯ, ದೃತ್ ಮತ್ತು ಅತಿದೃತ್ ಲಯಕಾರಿಯಲ್ಲಿ ಅಂದರೆ ಒಂದು ಪೆಟ್ಟು ಎರಡು ಪೆಟ್ಟು ಮೂರು ಪೆಟ್ಟು ನಾಲ್ಕು ಪೆಟ್ಟು ಮತ್ತು ಎಂಟು ಪೆಟ್ಟು ಮಾಡಿ ಕೊನೆಗೆ ಅದೆ ಪೆಟ್ಟು ಮೂರು ಸಲ ನುಡಿಸಿ ಸಮ್‌ನ ಮೇಲೆ ನಂತರ ಬರುತ್ತಾರೆ. ಖಣಿ, ದಿಮ್ಮಿ ಮತ್ತು ತಾಳದ ಈ ಮೂರು ಕಲಾವಿದರು ಸೇರಿ ಉಠಾಣ್ ನುಡಿಸಲು ಪ್ರಾರಂಭ ಮಾಡಿದರೆಂದರೆ ಗುಡುಗು, ಸಿಡಿಲು, ಮಳೆಯಂತೆ ಆರ್ಭಟಿಸುವ ಖಣಿ, ದಿಮ್ಮಿ, ತಾಳದ ನಾದ, ಉಠಾಣದಲ್ಲಿ ವಿವಿಧ ರೀತಿಯ ಲಯಕಾರಿ ಹಾಡಿ, ಕುಹಾಡಿ ಮತ್ತು ವಿಹಾಡಿ (ಹಾಡಿ ಲಯ ಎಂದರೆ ೪ ಮಾತ್ರೆಯ ಕಾಲಖಂಡದಲ್ಲಿ ೫ ಮಾತ್ರೆಗಳು, ಕುಹಾಡಿ ಎಂದರೆ ೪ ಮಾತ್ರದ ಕಾಲಖಂಡದಲ್ಲಿ ೬ ಮಾತ್ರಗಳು ಸೇರಿಸುವುದು ವಿಹಾಡಿ ಎಂದರೆ ೪ ಮಾತ್ರೆಯ ಕಾಲಖಂಡದಲ್ಲಿ ೭ ಮಾತ್ರವನ್ನು ನುಡಿಸುವುದು) ಲಯಕಾರಿಯನ್ನು ಮಾಡಿ ಕೊನೆಯ ಬೊಲುಗಳನ್ನು ಮೂರು ಸಲ ನುಡಿಸಿ ಸಮ್‌ಗೆ ಬಂದರೆಂದರೆ ಸಾಕು ಎಂತ ಮುಗ್ದ ಮನುಷ್ಯ ಕೂಡ ತಲೆದೂಗದೆ ಬಿಡುವುದಿಲ್ಲ. ಅಷ್ಟು ಅದ್ಭುತವಾಗಿ ನುಡಿಸುತ್ತಾರೆ ಇದಾದ ನಂತರ ಶಹನಾಯಿ ವಾದಕರು ಶುತಿ(ಶ್ರುತಿ)ಯ ನಾದಕ್ಕೆ ಶುರುಕ್ಷಿ ಯಾವುದಾದರೊಂದು ರಾಗದ ಆಲಾಪನೆ ಶುರು ಮಾಡುತ್ತಾರೆ. ಜೋಡಿ ಶಹನಾಯಿ ವಾದಕರ ಆಲಾಪನೆ ಕೇಳುಗರಿಗೆ ಮೈ ಝುಮ್ಮೆನಿಸುತ್ತದೆ. ಈ ಜೋಡಿ ಶಹನಾಯಿ ವಾದಕರ ಆಲಾಪನೆಗಳು ವಿಧ ವಿಧದ ಲಯಕಾರಿಯ ಆಲಾಪನೆ, ಜಂಟಿ ಸ್ವರಗಳು ಒಬ್ಬರು ಬಿಟ್ಟು ಒಬ್ಬರು ಶಹನಾಯಿ ವಾದ್ಯವನ್ನು ನುಡಿಸುವುದನ್ನು ನೋಡಿದರೆ ಸಾಕು ಇದೊಂದು ಜುಗಲ್‌ಬಂದಿ ಕಾರ್ಯಕ್ರಮ ಎನಿಸುತ್ತದೆ. ಅಷ್ಟೊಂದು ಅದ್ಭುತವಾಗಿ ನುಡಿಸುತ್ತಾರೆ. ಇವರು ನುಡಿಸುವ ವಿವಿಧ ಲಯಕಾರದಲ್ಲಿ ಆಲಾಪನೆ, ಸರಪಳಿಯಂತೆ ವಿವಿಧ ರೀತಿಯ ಜಂಟಿಸ್ವರಗಳು, ಅಲಂಕಾರಗಳ ನುಡಿಸುತ್ತಿದ್ದರೆ ಪಂಡಿತ ಪಾಮರರಿಂದ ಹಿಡಿದು ಸಾಮಾನ್ಯ ಜನರನ್ನು ಕೂಡ ಮಂತ್ರಮುಗ್ಧರನ್ನಾಗಿಸುತ್ತಾರೆ. ಈ ಶಹನಾಯಿ ಕಲಾವಿದರು ಪ್ರಾರಂಭದಲ್ಲಿ ಯಾವುದಾದರೊಂದು ರಾಗದಲ್ಲಿ ಛೋಟಾಖ್ಯಾಲನ್ನು ನುಡಿಸಿ, ಆ ಛೋಟಾಖ್ಯಾಲದಲ್ಲಿ ವಿವಿಧ ರೀತಿಯ ಆಲಾಪನೆಗಳನ್ನು ಮಾಡಿ ನಂತರ ಅದಕ್ಕೆ ಸಂಬಂಧಿಸಿದಂತೆ ಜಾನಪದ ಗೀತೆ ನುಡಿಸಿ ಅದರಲ್ಲಿಯೂ ಕೂಡ ವಿವಿಧ ಆಲಾಪನೆ ಮಾಡಿ ನಂತರ ಭಜನಾ ಪದಗಳನ್ನು ನುಡಿಸುತ್ತಾರೆ. ಹೀಗೆ ದೊಡ್ಡಾಟ ಹಾಡುಗಳು, ಡೊಳ್ಳಿನ ಹಾಡುಗಳು ಮತ್ತು ಕೊನೆಯದಾಗಿ ಕನ್ನಡ ಸಿನಿಮಾ ಹಾಡು, ತೆಲುಗು ಸಿನಿಮಾ ಹಾಡು ಮತ್ತು ಹಿಂದಿ ಸಿನಿಮಾ ಹಾಡುಗಳನ್ನು

ನುಡಿಸುತ್ತಾರೆ. ಇದರ ಮಧ್ಯ ಖಣಿ, ದಿಮ್ಮಿ ಮತ್ತು ಲಾಳ ಕಲಾವಿದರು ಸಹ ವಿವಿಧ ರೀತಿಯ ಗತ್ತುಗಳನ್ನು ನುಡಿಸುತ್ತಾರೆ. ಹೀಗೆ ಭೋಟಖ್ಯಾಲದಿಂದ ಪ್ರಾರಂಭ ಮಾಡಿ ನಡುವೆ ನಿಲ್ಲಿಸದೆ ಜಾನಪದಗೀತೆ, ಭಜನೆ ಪದ, ಡೊಳ್ಳಿನ ಹಾಡು, ದೊಡ್ಡಾಟದ ಹಾಡುಗಳು ಕೊನೆಗೆ ಸಿನಿಮಾ ಸಂಗೀತ ನುಡಿಸಿ, ಕೊನೆಯ ಹಾಡು ಮೂರು ಸಲ ನುಡಿಸಿ ಮುಕ್ತಾಯ ಮಾಡುತ್ತಾರೆ. ಶಹನಾಯಿ ವಾದಕರ ಸಹಾಯ ಜೊತೆಗೆ ಖಣಿ, ದಿಮ್ಮಿ ಮತ್ತು ತಾಳದವರು ಕೂಡ ಚಕ್ರದಾರ ತಿಹಾಯಿ ಮಾಡಿ ಸಂಗೀತ ಕಛೇರಿಯನ್ನು ಮುಕ್ತಾಯ ಮಾಡುತ್ತಾರೆ.

ಕೊರಮ ಸಮುದಾಯದವರು ಶಹನಾಯಿ ಮೇಳದ ಜೊತೆಗೆ ಬ್ಯಾಂಡ್‌ಮೇಳ ಕೂಡ ನುಡಿಸುತ್ತಾರೆ. ಈ ಬ್ಯಾಂಡ್ ಮೇಳ ನಮ್ಮ ದೇಶದಲ್ಲ, ಪರದೇಶದ್ದು. ಪ್ರಾರಂಭದಲ್ಲಿ ಶಹನಾಯಿ ಮೇಳವನ್ನು ನುಡಿಸುತ್ತಿದ್ದ ೧೯೫೦ರ ಸಂದರ್ಭದಲ್ಲಿ ಇವರು ಶಹನಾಯಿ ಜೊತೆಗೆ ಬ್ಯಾಂಡ್ ನುಡಿಸಲು ಕಾರಣಗಳಿವೆ. ಹಡಪದ ಜನಾಂಗದವರು ನಮ್ಮ ಹೈದ್ರಾಬಾದ್-ಕರ್ನಾಟಕದಲ್ಲಿ ಬ್ಯಾಂಡ್ ಮೇಳ ನುಡಿಸಲು ಪ್ರಾರಂಭ ಮಾಡಿದರೆಂದು ತಿಳಿದು ಬರುತ್ತದೆ. ಶಹನಾಯಿ ಮೇಳದಲ್ಲಿ ತುಂಬ ಪರಿಣಿತಿ ಹೊಂದಿದ್ದ ಕಲಾವಿದರಾಗಿದ್ದರು ಕೂಡ ಹಲವಾರು ಕಾರ್ಯಕ್ರಮಗಳಲ್ಲಿ ತಮ್ಮ ಸಂಗೀತ ಕಛೇರಿ ನೀಡಿ ತಮ್ಮ ಜೀವನ ನಡೆಸುತ್ತಿದ್ದರು. ಬ್ಯಾಂಡ್ ಮೇಳ ಬಂದ ನಂತರ ಎಲ್ಲ ಜನರು ಈ ಬ್ಯಾಂಡ್ ಮೇಳಕ್ಕೆ ಮೊರೆ ಹೋಗುತ್ತಿದ್ದರು. ಎಲ್ಲರೂ ಬ್ಯಾಂಡ್ ಮೇಳಕ್ಕೆ ಮೊರೆ ಹೋಗುತ್ತಿದ್ದ ಕಾರಣದಿಂದ, ಶಹನಾಯಿ ಮೇಳಕ್ಕೆ ಬೇಡಿಕೆ ಕಡಿಮೆಯಾಗಿ ಜೀವನ ನಡೆಸುವುದು ತುಂಬ ಕಷ್ಟವಾಗತೊಡಗಿತು. ಕುಟುಂಬ ಸದಸ್ಯರೆಲ್ಲ ಈ ಶಹನಾಯಿ ಮೇಳದ ಆದಾಯದಲ್ಲಿ ಜೀವನ ನಡೆಸುತ್ತಿದ್ದರು. ಈ ಶಹನಾಯಿ ಮೇಳಕ್ಕೆ ಬೇಡಿಕೆ ಕಡಿಮೆಯಾಗಿ ಎಲ್ಲ ಸಮುದಾಯದವರು ಎಲ್ಲ ಕಾರ್ಯಕ್ರಮಗಳಿಗೆ ಬ್ಯಾಂಡ್ ಮೇಳವನ್ನು ಆಹ್ವಾನ ಮಾಡುತ್ತಿದ್ದ ಕಾರಣ, ಅನಿವಾರ್ಯವಾಗಿ ಬ್ಯಾಂಡ್ ಮೇಳ ಕಲಿಯಬೇಕಾಯಿತು ಎಂದು ಇದರ ವಿಷಯ ಕುರಿತು ಮಾಹಿತಿ ನೀಡಿದ ಕಲಾವಿದರು (ಕಲಬುರ್ಗಿ ಜಿಲ್ಲೆಯ ಜೇವರ್ಗಿ ತಾಲೂಕಿನ ಮಳ ಗ್ರಾಮದ ಕೊರಮ ಸಮುದಾಯದ ಹಿರಿಯ ಕಲಾವಿದರಾದ ಸಿದ್ರಾಮಪ್ಪ ಭಜಂತ್ರಿ ಮಳಿ, ಅದೇ ತೆರನಾಗಿ ಯಾದಗಿರಿ ಜಿಲ್ಲೆಯ ಶಹಾಪುರ ತಾಲೂಕಿನ ಬೇವಿನಹಳ್ಳಿ ಗ್ರಾಮದ ಹಿರಿಯ ಕಲಾವಿದರಾದ ಭೀಮರಾಯ ಭಜಂತ್ರಿ, ಬಸವರಾಜ ಭಜಂತ್ರಿ) ಕೊರಮ ಸಮುದಾಯದ ಕಲಾವಿದರು ನಿಜವಾಗಲು ಸ್ವಾಭಿಮಾನಿಗಳು ಎಂದು ಹೇಳಬಹುದು ಎಷ್ಟೆ ಕಷ್ಟಬಂದರು ಸಹ ಭಿಕ್ಷೆ ಬೇಡಿ ತಿನ್ನುವುದಿಲ್ಲ. ಸ್ವಾಭಿಮಾನದಿಂದ ಆ ಬ್ಯಾಂಡ್‌ಮೇಳದಲ್ಲಿ ಕಂಡುಬರುವ ಕ್ಲಾರಿಯೋನೆಟ್, ಟ್ರಂಪೆಟ್, ಡೋಲು, ಶಾರ್ಟೌಡ್ರಮ್ ಮತ್ತು ತಾಳ ಈ ಎಲ್ಲ ವಾದ್ಯಗಳನ್ನು ಹಗಲು ರಾತ್ರಿ ಅಭ್ಯಾಸ ಮಾಡಿ ಬ್ಯಾಂಡ್ ಮೇಳವನ್ನು ಕೂಡ ಸುಶ್ರಾವ್ಯವಾಗಿ ನುಡಿಸುವಂತ ಕಲಾವಿದರಾಗಿದ್ದಾರೆ. ಕೊರಮ ಸಮುದಾಯದ ಕಲಾವಿದರೆಂದರೆ ಸಕಲಕಲಾಪಾರಂಗತರು ಎಂದರೆ ತಪ್ಪಾಗಲಾರದು.

ಯಾವುದೇ ಒಬ್ಬ ಕಲಾವಿದರು ಒಂದು ವಾದ್ಯ ಅಥವಾ ಎರಡು ವಾದ್ಯ ನುಡಿಸುವುದು ಬಹಳ ಕಷ್ಟಕರವಾದಂತಹ ವಿಷಯ. ಅಂತದರಲ್ಲಿ ಕೊರಮ ಸಮುದಾಯದ ಕಲಾವಿದರು ಶಹನಾಯಿ, ಶೃತಿ, ಖಣಿ, ದಿಮ್ಮಿ, ತಾಳ, ಕ್ಲಾರಿಯೋನೆಟ್, ಟ್ರಾಂಪೇಟ್, ಡೋಲು, ತಾಪ ಮತ್ತು ಶಾರ್ಟೌಡ್ರಮ್

ವಾದ್ಯಗಳನ್ನು ಸುಶ್ರಾವ್ಯವಾಗಿ ಅದ್ಭುತವಾಗಿ ನುಡಿಸುತ್ತಾರೆ. ಬಹುಶ ಸಮಾಜದಲ್ಲಿ ಇಷ್ಟೆಲ್ಲ ವಾದ್ಯಗಳನ್ನು ನುಡಿಸುವ ಕಲಾವಿದರೆಂದರೆ ಅದು ಕೊರಮ ಸಮುದಾಯ ಕಲಾವಿದರೆಂದು ಹೇಳಿದರೆ ತಪ್ಪಾಗಲಾರದು. ಕೊರಮ ಸಮುದಾಯದ ಕಲಾವಿದರು ಶಹನಾಯಿ ಮೇಳವನ್ನು ಮತ್ತು ಬ್ಯಾಂಡ್ ಮೇಳವನ್ನು ಕೂಡ ನುಡಿಸುತ್ತಾರೆ. ಯಾವ ಪ್ರೇಕ್ಷರಿಗೆ ಯಾವ ಮೇಳ ಬೇಕೋ ಆ ಮೇಳವನ್ನು ತೆಗೆದುಕೊಂಡು ತಮ್ಮ ಸಂಗೀತ ಕಚೇರಿ ಕೊಟ್ಟು ಬರುತ್ತಾರೆ. ಆದರೆ ಸಮಾಜದ ಜನರಲ್ಲಿ ಎರಡು ಪಂಗಡಗಳು ಬರುತ್ತವೆ ೧) ವಯಸ್ಸಾದವರು ೨) ಯುವಕರು ಒಂದು ಮನೆಯಲ್ಲಿ ಹಿರಿಯರ ಮಾತು ನಡೆಯುತ್ತಿದ್ದರೆ ಅಂತವರು ಸಾಮಾನ್ಯವಾಗಿ ಶೃಂಗಾರವಾಗಿ ಆನಂದವಾಗಿ ನುಡಿಸುವ ಶಹನಾಯಿ ಮೇಳದವರನ್ನು ಕರೆಸುತ್ತಾರೆ. ಆ ಮನೆಯ ಮಕ್ಕಳದ್ದೆ ದರ್ಬಾರ ನಡೆಯುತ್ತಿದ್ದರೆ ಅಂತವರು ಬ್ಯಾಂಡ್ ಮೇಳವನ್ನು ಕರೆಸುತ್ತಾರೆ. ಕಾರಣ ಬ್ಯಾಂಡ್ ಮೇಳದ ನಾದ ಆಡಂಬರ, ಹೆಚ್ಚುನಾದ ಇರುವುದರಿಂದ ಈ ಬ್ಯಾಂಡ್ ಮೇಳದಲ್ಲಿ ಯುವಕರು ಕುಣಿದು ಕುಪ್ಪಳಿಸುತ್ತಾರೆ ಆದ ಕಾರಣ ಎಲ್ಲ ಯುವಕರು ಬ್ಯಾಂಡ್ ಮೇಳವನ್ನು ತಮ್ಮ ಕಾರ್ಯಕ್ರಮಗಳಿಗೆ ಕರೆಸುತ್ತಾರೆ. ಇದನ್ನು ಕಂಡ ಶಹನಾಯಿ ಮೇಳದ ಕಲಾವಿದರೂ ಕೂಡ ವಯಸ್ಕರ ಜನರಿಂದ ಯುವಕರವರೆಗೆ ಇಷ್ಟವಾಗುವಂತಹ ರೀತಿಯಲ್ಲೆ ತಮ್ಮ ಕಲೆಯನ್ನು ಪ್ರದರ್ಶನ ಮಾಡುತ್ತಿದ್ದಾರೆ ಆದಕಾರಣ ಈ ಪ್ರಸ್ತುತ ಕಾಲದಲ್ಲಿ ಬ್ಯಾಂಡ್‌ಮೇಳಗಳಿಗಿಂತ ಶಹನಾಯಿ ಮೇಳಕ್ಕೆ ಬೇಡಿಕೆ ಜಾಸ್ತಿ ಆಗಿದೆ ಎಂದು ಹೇಳಬಹುದು.

### ವಾದ್ಯ ಪ್ರಕಾರಗಳು ಅವುಗಳ ತಯಾರಿಕೆ ಮತ್ತು ನುಡಿಸುವ ಕ್ರಮ

ವಾದ್ಯಗಳು ಶಹನಾಯಿ ಮೇಳದ ಒಂದು ಅವಿಭಾಜ್ಯ ಅಂಗ ಎಂದು ಹೇಳಬಹುದು. ವಾದ್ಯಗಳ ಕುರಿತು ಹಲವು ವಿದ್ವಾಂಸರು ಕೆಲವು ವಿಚಾರಗಳನ್ನು ಪ್ರಸ್ತುತ ಪಡಿಸಿದ್ದಾರೆ.

ಗಾಯನ ಮತ್ತು ನರ್ತನ ಭಾವವು ಲಯಬದ್ಧವಾಗಿ ಹೊರಹಾಕುವ ಗುರುತರ ಕಾರ್ಯವನ್ನು ವಾದ್ಯಗಳ ನಿಬಾಯಿಸುತ್ತವೆ. ಗೀತ ವಾದ್ಯ ಹಾಗೂ ನೃತ್ಯದ ಸಾಹಚಾರ್ಯವನ್ನು ಸಾರಂಗದೇವ ಸಂಗೀತವೆಂದು ಹೆಸರು ನೋಡಿದರೆ ಸೋಮೇಶ್ವರನು ಮಾನಸೋಲ್ಲಾಸದಲ್ಲಿ ಈ ತ್ರಿಕಲೆಗಳನ್ನು ತೂರ್ಯ ಎಂದಿದ್ದಾನೆ. ಸೋಮೇಶ್ವರನ ಪ್ರಕಾರ ವಾದ್ಯಗಳಿಲ್ಲದೆ ಗೀತವಿಲ್ಲ, ನೃತ್ಯವಿಲ್ಲವೆಂದು ಹೇಳುತ್ತಾರೆ. (ಡಾ. ತುಳಸಿ ರಾಮಚಂದ್ರ ಪದಗತಿ–ಪಾರಗತಿ ಕವಿವಿ ಹಂಪಿ. ೨೦೦೧ ಪು.೩) ನರ್ತನದಲ್ಲಿ ವಾದ್ಯಗಳ ವಾದನವು ದ್ವಿವಿಧಾತ್ಮಕ ಆನಂದವನ್ನು ಕೊಡುತ್ತದೆ ಎಂದು ಕಲಾ ತಜ್ಞರು ಅಭಿಪ್ರಾಯಪಡುತ್ತಾರೆ. ವಾದನ ಹಾಡುಗಾರಿಕೆ ಎರಡೂ ಹಿತವಾಗಿ ಮೇಳೈಸಿ ಅದರ ನಾದ ತರಂಗಗಳು ಕಿವಿಗಳ ಮೂಲಕ ಮಸ್ತಕದ ಮೇಲೆ ಪರಿಣಾಮವನ್ನು ಬೀರಿ ಮನೋವಿಕಾಸವನ್ನು ತಂದುಕೊಟ್ಟರೆ, ನೃತ್ಯವು ಕಣ್ಣುಗಳ ಮೂಲಕ ದರ್ಶಿಸುವಾಗ ಮನದಂತರಾಳವನ್ನು ಮುಟ್ಟಿ ಮನಸ್ಸನ್ನು ಆವರಿಸಿ ಚಿಂತೆ ದುಃಖಗಳನ್ನು ನಿವಾರಿಸಿ ಮನವು ಮುದಗೊಳಿಸುವಲ್ಲಿ ಸಹಾಯವಾಗುತ್ತದೆ ಹೀಗೆ ಶ್ರವಣೇಂದ್ರಿಯ ಹಾಗೂ ದರ್ಶನೇಂದ್ರಿಯಗಳೆರಡು ವಾದನ ವೀಕ್ಷಣೆಯಲ್ಲಿ ಸಮನಾಗಿ ಪಾಲ್ಗೊಂಡು ವೀಕ್ಷಕನ ಆತ್ಮಾನಂದದತ್ತ ಕರೆದೊಯ್ಯುವ ಕಾರ್ಯವನ್ನು ವಾದ್ಯಗಳು ನಿರ್ವಹಿಸುತ್ತವೆ.

ಕೊರಮ ಸಮುದಾಯದ ಶಹನಾಯಿ ಮೇಳದಲ್ಲಿ ಕಂಡುಬರುವ ವಾದ್ಯಗಳು, ಶಹನಾಯಿ ಶುತಿ (ಶೃತಿ) ಖಣಿ, ದಿಮ್ಮಿ ಮತ್ತು ತಾಳ. ಇವುಗಳಲ್ಲಿ ಮೂರು ಪ್ರಕಾರದ ವಾದ್ಯಗಳಾಗಿ ವಿಂಗಡಿಸಲಾಗಿದೆ.

ಸುಶಿರ ವಾದ್ಯಗಳು : ಶಹನಾಯಿ, ಶುತಿ

ಅವನದ್ಧ ವಾದ್ಯಗಳು : ಖಣಿ, ದಿಮ್ಮಿ

ಘನ ವಾದ್ಯಗಳು : ತಾಳ

ಈ ಕೊರಮ ಸಮುದಾಯದ ಶಹನಾಯಿ ವಾದನದಲ್ಲಿ ತಂತಿ ವಾದ್ಯ ಕಂಡುಬರುವುದಿಲ್ಲ.

**ಶಹನಾಯಿ ವಾದ್ಯದ ಬಿಡಿ ಬಿಡಿ ಭಾಗಗಳು**

೧) ಕೊಳವೆ, ಲಳಿ, ಜೀವಾಳ ಮತ್ತು ಬಟ್ಲ



ಎರಡು ಅಥವಾ ಮೂರಡಿ ಉದ್ದದ ಕೊಳವೆಯನ್ನು ಸಾಗುವಾನಿ ಅಥವಾ ಬೇವಿನ ಮರದಿಂದ ತಯಾರಿಸಲಾಗಿರುತ್ತದೆ. ಈ ಕೊಳವೆಯ ಮೇಲಿನ ಭಾಗ ಚೂಪಾಗಿ, ಕೆಳಗಿನ ಭಾಗ ನಳಿಕೆಯ ತರಹ ಅಗಲವಾಗಿರುತ್ತದೆ. ಇದರ ಮೇಲೆ ಹತ್ತು ರಂಧ್ರಗಳಿರುತ್ತವೆ. ಚೂಪಾಗಿದ್ದ ಕೊಳವೆಯ ಮೇಲ್ಭಾಗದಲ್ಲಿ 'ಲಳಿ' ಕೂಡಿಸಿರುತ್ತಾರೆ. 'ಲಳಿ'ಯನ್ನು ಕಂಚಿನಿಂದ ತಯಾರಿಸಲಾಗಿರುತ್ತದೆ. ಕೊಳವೆಯ ಮೇಲ್ಭಾಗದಲ್ಲಿ ಲಾಳಿಯನ್ನು ಕೂಡಿಸಲು ಈ ಲಳಿಯ ಮೇಲೆ ದಾರವನ್ನು ಸುತ್ತಿರುತ್ತಾರೆ. ಈ ಲಳಿಗೆ ಪೀಪಿಯನ್ನು ಕೂಡಿಸಿರುತ್ತಾರೆ. ಈ ಶಹನಾಯಿ ವಾದ್ಯ ನಾದ ಬರಲು ಈ ಪೀಪಿ ಬಹಳ ಮುಖ್ಯ ಪಾತ್ರವಹಿಸುತ್ತದೆ. ಆದ ಕಾರಣ ಈ ಪೀಪಿಯನ್ನು ಜೀವಾಳ ಎಂದು ಕರೆಯುತ್ತಾರೆ.

"ಜೀವಾಳ" ಇದನ್ನು ತಾಳೆಮರದ ಎಲೆಯಿಂದ ತಯಾರಿಸಲಾಗಿರುತ್ತದೆ. ಈ ಜೀವಾಳವನ್ನು ಕೊರಮ ಸಮುದಾಯದ ಕಲಾವಿದರೆ ತಯಾರಿಸುತ್ತಾರೆ. ಅಗಲವಾಗಿರುವ ಕೊಳವೆಯ ಕೆಳಭಾಗದ ಅಗಲವಾಗಿರುವ ಬಟ್ಲ ಕೂಡಿಸಿರುತ್ತಾರೆ. "ಬಟ್ಲ" ಈ ಬಟ್ಲವನ್ನು ಕಂಚು, ಹಿತ್ತಾಳೆ ಅಥವಾ ಬೆಳ್ಳಿಯಿಂದಲೂ ತಯಾರಿಸಲಾಗುತ್ತದೆ.

ಸುತಿ(ಶೃತಿ) ಎಂಬುದೆ 'ಸುತಿ'(ಶೃತಿ)ಯಾಗಿದೆ. ಶುತಿ ವಾದ್ಯ ಇಲ್ಲದೆ ಶಹನಾಯಿ ನಾದಕ್ಕೆ ಬೆಲೆ ಬರುವುದಿಲ್ಲ. ಶ್ರುತಿ ಮಾತಾ ಎಂಬಂತೆ, ಸಂಗೀತ ಎಂಬ ಕುಟುಂಬಕ್ಕೆ ಶ್ರುತಿ ಎನ್ನುವ ತಾಯಿ ಇರಬೇಕು. ಶ್ರುತಿ ಇರದಿದ್ದ ಸಂಗೀತ ಅಪೂರ್ಣವಾಗುತ್ತದೆ ಎಂದರೆ ತಪ್ಪಾಗಲಾರದು. ಸನಾದಿ ವಾದ್ಯ ಇದ್ದಲ್ಲಿ ಶುತಿ ವಾದ್ಯ ಇರಲೇಬೇಕು. ಸನಾದಿ ಆಕಾರವನ್ನು ಹೊಂದಿರುವ ಶ್ರುತಿ ವಾದ್ಯದ ಮೇಲೆ ರಂಧ್ರಗಳಿರುವುದಿಲ್ಲ. ಆದ್ದರಿಂದ ಸನಾದಿ ವಾದ್ಯಕ್ಕೆ ಹೊಂದುವಂತಹ ಶ್ರುತಿಯನ್ನು ಇದು ನೀಡುತ್ತದೆ. ಮಂದ್ರಸ್ತಾಯಿಯಲ್ಲಿ ನಾದವನ್ನು ಹೊಮ್ಮಿಸುತ್ತದೆ. ಶ್ರುತಿಯ ವಾದ್ಯದ ಭಾಗಗಳು

**೧) ಕೊಳವೆ, ಲಳಿ ಮತ್ತು ಜೀವಾಳ**



೫ ಅಥವಾ ೬ ಅಡಿ ಉದ್ದವಿರುವ ಕೊಳವೆಯನ್ನು ಕಬ್ಬಿಣದ ತಗಡಿನಿಂದ ತಯಾರಿಸಲಾಗಿರುತ್ತದೆ. ಈ ಕೊಳವೆಯ ಮೇಲ್ಭಾಗ ಚೂಪಾಗಿ ಇರುತ್ತದೆ. ಕೆಳಗಿನ ಭಾಗ ಅಗಲವಾಗಿರುತ್ತದೆ. ಶಹನಾಯಿ ವಾದ್ಯಕ್ಕೆ ಇರುವಂತಹ ರಂಧ್ರಗಳು ಇರುವುದಿಲ್ಲ. ಮೇಲೆ ಚೂಪಾಗಿರುವ ಕೊಳವೆ ಬಾಯಿಗೆ ೬ ಇಂಚಿನ ಲಳಿ ಇಟ್ಟಿರುತ್ತಾರೆ. ಈ ಲಳಿಯನ್ನು ಕಂಚು, ತಾಮ್ರ ಅಥವಾ ಹಿತ್ತಾಳೆಯಿಂದ ತಯಾರಿಸಲಾಗುತ್ತದೆ. ಆ ಕೊಳವೆಯ ಬಾಯಿಗೆ ಗಟ್ಟಿಯಾಗಿ ಇಡಲು ಆ ಲಳಿಗೆ ದಾರ ಸುತ್ತಿರುತ್ತಾರೆ. ಈ ಶುತಿ ನಾದ ಬರಲು "ಲಳಿಗೆ" "ಪೀಪಿ" ಸಿಕ್ಕಿಸಿರುತ್ತಾರೆ. ಈ "ಪೀಪಿ" ಇರದಿದ್ದರೆ ನಾದವೆ ಹೊರಹೊಮ್ಮುವುದಿಲ್ಲ. ಅದಕ್ಕಾಗಿ ಈ "ಪೀಪಿ"ಯನ್ನು "ಜೀವಾಳ" ಎಂದು ಕರೆಯುತ್ತಾರೆ.

**ಜೀವಾಳ : ತಯಾರಿಕೆ**

ಈ ಜೀವಾಳವನ್ನು ತಾಳೆಮರದ ಎಲೆಯಿಂದ ತಯಾರಿಸಲಾಗುತ್ತದೆ ಒಂದು ಬೆರಳಗಲದ ಸುಮಾರು ಸುಮಾರು ಎರಡು ಅಡಿ ಉದ್ದವಿರುವ ಎಲೆಯನ್ನು ತೆಗೆದುಕೊಂಡು ಸುಮಾರು ಐದಾರು ತಾಸುಗಳ ಕಾಲ ನೀರಲ್ಲಿ ನೆನೆಹಾಕಿ ಅದು ಮೆತ್ತಗೆ ಆದ ನಂತರ ಆ ಎಲೆಯನ್ನು ಅರ್ಧಕ್ಕೆ ಮಡಿಚಿ, ಆ ಮಡಿಚಿದ ಎರಡು ಪದರಗಳ ಮಧ್ಯಭಾಗಕ್ಕೆ ಒಂದು ದಾರ ಕಟ್ಟಬೇಕು ದಾರಕಟ್ಟಿದ ಭಾಗ ಮಡಿಚಿ ನಾಲ್ಕು ಪದರಗಳು ಸೇರಿದಂತೆ ಕಬ್ಬಿಣದ ಅಥವಾ ಮರದ ಕಡ್ಡಿಯನ್ನು ಆ ನಾಲ್ಕು ಪದರದ ಒಳಗೆ ತೂರಿಸಿ ಮತ್ತೆ ಮೇಲೆ ದಾರ ಕಟ್ಟಬೇಕು. ದಾರ ಕಟ್ಟದೆ ಅಗಲವಾಗಿರುವ ತಾಳೆಎಲೆಯ ಭಾಗವನ್ನು ಎಷ್ಟು ಬೇಕು ಅಷ್ಟು ಬಿಟ್ಟು ಉಳಿದ ಭಾಗವನ್ನು ಕತ್ತರಿಸಿ ಒಳಗೆ ಸೇರಿಸಿದ ಕಡ್ಡಿಯನ್ನು ತೆಗೆಯಬೇಕು. ನಂತರ ನಾಲಿಗೆಯಂತಿರುವ



ಅಗಲ ಭಾಗದ ನಾಲ್ಕು ಪದರಗಳ ನಡುವೆ ಊದಿ ಬರುವ ನಾದವನ್ನು ಶ್ರುತಿಯಲ್ಲಿ ಇದೆಯೋ? ಇಲ್ಲವೋ? ಎಂಬುದನ್ನು ನೋಡಬಹುದು. ಸರಿಯಾಗಿ ಶ್ರುತಿಯಲ್ಲಿದ್ದರೆ ಸರಿ, ಸರಿಯಾಗಿ ಶ್ರುತಿಯಲ್ಲಿ ಇರದಿದ್ದರೆ, ಜೀವಾಳದ ಮುಂದಿನ ತುದಿಯನ್ನು ಕತ್ತರಿಸಿ ಸರಿಯಾಗಿ ಶ್ರುತಿಗೆ ಬರುವಂತೆ ಮಾಡುತ್ತಾರೆ. ಹೀಗೆ ತಯಾರಿಸಿ ಮೂರು ನಾಲ್ಕು ಜೀವಾಳಗಳಿಗೆ ಮರದ ಅಥವಾ ಕಬ್ಬಿಣದ ಕಡ್ಡಿಯನ್ನು ದಾರಕ್ಕೆ ಕಟ್ಟಿ ಈ ದಾರವನ್ನು ಲಾಳಿಗೆ ಕಟ್ಟಿ ಇಳೆ ಬಿಟ್ಟಿರುತ್ತಾರೆ. ಈ ಜೀವಾಳವನ್ನು ಸ್ವತಃ ಕೊರಮ ಸಮುದಾಯದ ಕಲಾವಿದರೆ ತಯಾರಿಸುತ್ತಾರೆ.

**ಖಣಿ:** ಈ ವಾದ್ಯವು ತಮಟೆ ವಾದ್ಯವನ್ನು ಹೋಲುತ್ತಿದ್ದು ಅದು ಆಕಾರದಲ್ಲಿ ತಮಟೆ ವಾದ್ಯಗಿಂತ ಚಿಕ್ಕದಾಗಿರುತ್ತದೆ. ಒಂದು ಕಾಲು ಅಡಿ ಅಗಲ ವ್ಯಾಸವುಳ್ಳ ಕಬ್ಬಿಣದ ಚಕ್ರಕ್ಕೆ (ಇದನ್ನು "ಪಡಗ" ಅಂತನು ಕರೆಯುತ್ತಾರೆ) ಎಮ್ಮೆ ಅಥವಾ ಆಡಿನ ಚರ್ಮದಿಂದ ಮುಚ್ಚಿರುತ್ತಾರೆ. ಈ ಚರ್ಮ

ಪಡಗದ ಒಳಗೆ ಬಿಗಿ ಹಿಡಿದುಕೊಳ್ಳಲು ಒಂದು ಕಬ್ಬಿಣದ ರಾಡಿನಿಂದ ಒಂದು ಗೋಲಾಕಾರದ ಗಾಲಿ ತಯಾರಿಸಿ ಆ ಚರ್ಮಕ್ಕು ಮತ್ತು ಗಾಲಿಗೆ ಬಿಗಿಯಲು ಚರ್ಮದಿಂದ ತಯಾರಿಸಲಾದ ಎಳೆಯಿಂದ ಬಿಗಿದಿರುತ್ತಾರೆ. ಖಣಿ ವಾದ್ಯವನ್ನು ಎಮ್ಮೆ ಅಥವಾ ಆಡಿನ ಹಸಿ ಚರ್ಮದಿಂದ ಮಾತ್ರ ಬಿಗಿಯಲು ಸಾಧ್ಯ. ಈ ಹಸಿ ಚರ್ಮದಿಂದ ತಯಾರಿಸಿದ ನಂತರ ಒಂದು ವಾರ ಬಿಸಿಲಲ್ಲಿ ಇಟ್ಟಿರುತ್ತಾರೆ.



ದಿಮ್ಮಿ : ಈ ವಾದ್ಯ ಚಿಕ್ಕ ಆಕಾರದಲ್ಲಿದ್ದು, ಶಾಸ್ತ್ರೀಯ ಸಂಗೀತದ "ಡಗಾ" ವಾದ್ಯವನ್ನು ಹೋಲುತ್ತದೆ. ಡಗ್ಗಾ ವಾದ್ಯಕ್ಕೆ ಕರಣಿ ಚರ್ಮದ ಮೇಲೆ ಮೆತ್ತಿದ್ದರೆ, ಈ ದಿಮ್ಮಿಯಲ್ಲಿ ಚರ್ಮದ ಒಳ ಭಾಗದಲ್ಲಿ ಮೆತ್ತಿರುತ್ತಾರೆ. ಕಬ್ಬಿಣದಿಂದ ತಯಾರಿಸಲಾದ ಗುಂಡಾಕಾರದ ಗಾಲಿಗೆ ಎಮ್ಮೆ ಅಥವಾ ಆಡಿನ ಚರ್ಮವನ್ನು ಮುಚ್ಚಿ ನಂತರ ಹಗ್ಗ ಹಾಕಿ ಎಳೆಯಲು ಆ ಚರ್ಮದ ಸುತ್ತ ೧೨ ರಂಧ್ರಗಳು ಹಾಕಿರುತ್ತಾರೆ. ಈ ಪಡಗದ ಮೇಲೆ ಚರ್ಮ ಗಟ್ಟಿಯಾಗಿ ಕೂಡಿಸಲು ಆ ಪಡಗದ ಕೆಳಭಾಗದಲ್ಲಿ, ಕಬ್ಬಿಣದ ರಾಡಿನಿಂದ ಗುಂಡಾಕಾರದ ಚಕ್ರವನ್ನು ತಯಾರಿಸಿ, ಆ ಚಕ್ರಕ್ಕೆ ಹಗ್ಗ ಹಾಕಿ ಎಳೆಯಲು ಪಡಗ ಮತ್ತು ಆ ಚಕ್ರದ ನಡುವೆ ಅಂತರವಿರಲು ಕಟ್ಟಿಗೆಯಿಂದ ತಯಾರಿಸಲಾದ ೩ ಕುದುರೆಗಳನ್ನು ಇಟ್ಟಿರುತ್ತಾರೆ. ನಂತರ ಮೇಲಿನ ಚರ್ಮದ ಮುಚ್ಚಳಿಗೆ ಮತ್ತು ಪಡಗದ ಕೆಳಗಿನ ಗಾಲಿಗೆ ಹಗ್ಗ ಹಾಕಿ ಎಳೆದು ಆ ಮುಚ್ಚಳಿಕೆಯನ್ನು ಬಿಗಿಗೊಳಿಸಿ ಸುಮಧುರವಾಗಿ ನಾದ ಬರುವಂತೆ ಮಾಡುತ್ತಾರೆ. ಈ ದಿಮ್ಮಿ ಶ್ರುತಿಗೊಳಿಸಲು ಆ ದಿಮ್ಮಿಯ ನಡುವೆ ಎರಡೆರಡು ರೌಂಡು ಹಗ್ಗದಿಂದ ಸರಪಳಿ ತರ ಎಳೆದಿರುತ್ತಾರೆ.



**ತಾಳ:** ಘನವಾದ್ಯಗಳಲ್ಲೆ 'ತಾಳ' ಹೆಚ್ಚು ಜನಪ್ರಿಯ ವಾದ್ಯವಾಗಿದೆ. ಈ ಶಹನಾಯಿ ಮೇಳದಲ್ಲಿ ನುಡಿಸುವಂತಹ ತಾಳಗಳು ಭಜನೆ ಮೇಳ ಮತ್ತು ಸುಗಮ ಸಂಗೀತ ಮತ್ತು ಗೊಂದಲ ಸಮುದಾಯದವರು ನುಡಿಸುವ ತಾಳಕ್ಕಿಂತ ಆಕಾರದಲ್ಲಿ ಅಗಲವಾಗಿರುತ್ತದೆ ಮತ್ತು ದೊಡ್ಡದಾಗಿರುತ್ತದೆ. ಕೊರಮ ಸಮುದಾಯದವರು ನುಡಿಸುವ ತಾಳಗಳನ್ನು ಡೊಳ್ಳಿನ ಪೆಟ್ಟಿನಲ್ಲಿ ನುಡಿಸುವ ಲಾಳಗಳನ್ನು ಹೋಲು ವಂತಿದ್ದು, ಆಕಾರದಲ್ಲಿ ಡೊಳ್ಳಿನ ತಾಳಗಳಿಗಿಂತ ಚಿಕ್ಕದಾಗಿರುತ್ತದೆ. ಈ ತಾಳವನ್ನು ಹಿತ್ತಾಳೆ ಅಥವಾ ಲೋಹದಿಂದ ಗುಂಡಾಕಾರ ದಲ್ಲಿ ತಯಾರಿಸುತ್ತಾರೆ. ಆ ಗುಂಡಾಕಾರದ ತಾಳದ ನಡುವೆ ಒಂದು ರಂಧ್ರವನ್ನು ಬಿಟ್ಟು ಅದಕ್ಕೆ ಒಂದು ದಾರವನ್ನು ಸೇರಿಸಿ ಕೈಯಲ್ಲಿ ದಾರ ಹಿಡಿದುಕೊಳ್ಳುವ ಸಲುವಾಗಿ ಮರದಿಂದ ತಯಾರಿಸಲಾದ ಒಂದು ಚಕ್ಕೆಯನ್ನು ಕಟ್ಟಿ ಎಡಗೈಯಲ್ಲಿ ಒಂದು, ಬಲಗೈಯಲ್ಲಿ ಒಂದು ಹಿಡಿದುಕೊಳ್ಳುವ ಹಾಗೇ ಮಾಡುತ್ತಾರೆ.



**ವಾದ್ಯಗಳು ನುಡಿಸುವ ವಿಧಾನ**

ಈ ಶಹನಾಯಿ ವಾದ್ಯ ಸುಶಿರ ವಾದ್ಯ ಅಂದರೆ ಗಾಳಿಯ ವಾದ್ಯವಾಗಿರುವುದರಿಂದ ಈ ಶಹನಾಯಿ ಬಾಯಿಯಲ್ಲಿ ಇಟ್ಕೊಂಡು, ಬಾಯಿಯಿಂದ ಊದಿ ನುಡಿಸುತ್ತಾರೆ. ಈ ಶಹನಾಯಿಯ ಕೊಳವೆಯ ಮೇಲೆ ಏಳು ರಂಧ್ರಗಳಿರುತ್ತವೆ. ಬಲಗೈನ ಮೂರು ಬೆರಳು ಮೇಲಿನ ಮೂರು ರಂಧ್ರಗಳ ಮೇಲೆ ಇಟ್ಟು ಎಡಗೈಯನ ಮೂರು ಬೆರಳು ಕೆಳಗಿನ ರಂಧ್ರಗಳ ಮೇಲೆ ಇಟ್ಟು ನುಡಿಸುತ್ತಾರೆ. ಏಳನೇ ರಂಧ್ರ ಆ ರಂಧ್ರಬಿಟ್ಟು ಸ್ವಲ್ಪ ದೂರದಲ್ಲಿ ಇರುತ್ತದೆ. ಈ ಏಳನೇ ರಂಧ್ರವನ್ನು ಕೊನೆಯ ಬೆರಳಿನಿಂದ ಮುಚ್ಚಿರುತ್ತಾರೆ.



ಆ ಏಳು ರಂಧ್ರಗಳಲ್ಲೇ ಮೂರು ಸಪ್ತಕ, ೫ ಕೋಮಲ ಸ್ವರ, ೫ ಶುದ್ಧ ಸ್ವರ, ಎರಡು ಅಚಲ ಸ್ವರಗಳು ನುಡಿಯುವಂತೆ ಮಾಡುತ್ತಾರೆ. ಯಾವುದೇ ಒಂದು ರಂಧ್ರದ ಮೇಲೆ ಪೂರ್ಣ ಬೆರಳು ಮುಚ್ಚಿದರೆ ಅದು ಶುದ್ದಸ್ವರವಾಗುತ್ತದೆ. ಅದೇ ಬೆರಳು ಅರ್ಧ ರಂಧ್ರದ ಮೇಲೆ ಮುಚ್ಚಿ ಅರ್ಧ ಬೆರಳು ಹೊರಗಿಡೊದ್ರಿಂದ ಅದು ಕೋಮಲ ಸ್ವರವಾಗುತ್ತದೆ. ಏಳು ರಂಧ್ರಗಳಲ್ಲೇ ಮೂರು ಸಪ್ತಕಗಳನ್ನು ನುಡಿಸುತ್ತಾರೆ. ಸಾಮಾನ್ಯ ಉಸಿರಿನಿಂದ ಊದಿದರೆ ಅದು ಮಧ್ಯಸಪ್ತಕ ಸ್ವರ, ಕಡಿಮೆ ಊದಿದರೆ ಅದು ಮಂದ್ರ ಸಪ್ತಕ ಮತ್ತು ಜೋರಾಗಿ ಊದಿದಾಗ ತಾರಸಪ್ತಕ ಸ್ವರಗಳು ಹೊರಹೊಮ್ಮುತ್ತವೆ.

ಶುತಿ (ಶ್ರುತಿ) ಆಕಾರದಲ್ಲಿ ಶಹನಾಯಿ ವಾದ್ಯ ಹೋಲುವಂತಿದ್ದು, ಶಹನಾಯಿಗೆ ರಂಧ್ರಗಳಿರುತ್ತವೆ. ಈ ಶುತಿಗೆ ರಂಧ್ರಗಳಿರುವುದಿಲ್ಲ. ಈ ಶಾಸ್ತ್ರೀಯ ಸಂಗೀತದಲ್ಲಿ ತಂಬೂರಿ, ಭಜನೆ ಸಂಗೀತದಲ್ಲಿ ಏಕತಾರಿ ಇರುವಂತೆ ಶಹನಾಯಿಗೆ ಈ ಶ್ರುತಿ ವಾದ್ಯ. ಈ ಶುತಿ ಕೂಡ ಗಾಳಿವಾದ್ಯವಾಗಿರುವುದರಿಂದ ಇದನ್ನು ಉಸಿರು ಬಿಡದೆ ಇಪ್ಪತ್ತನಾಲ್ಕು ಗಂಟೆಗಳವರೆಗೂ ಬಾಯಿಯಿಂದ ನುಡಿಸ್ತಾರೆ ಈ ಶುತಿವಾದ್ಯ ನುಡಿಸುವುದು ತುಂಬ ಕಷ್ಟಕರವಾದಂತ ವಿಷಯವಾಗಿರುವುದರಿಂದ ಇದನ್ನು ನುಡಿಸುವ ಕಲಾವಿದರು ಬೆರಳೆಣಿಕೆಯಷ್ಟು ಮಾತ್ರ. ವಿಶೇಷವಾಗಿ ಒಂದು ಮಾತು ಹೇಳಬೇಕೆಂದರೆ ಒಂದು ಎರಡು ನಿಮಿಷ ಉಸಿರು ಹಿಡಿದು ಹಾಡಿದರೆ, ಒಂದು ಐದು ನಿಮಿಷ ಉಸಿರು ಬಿಗಿದು ಹಿಡಿದು ಯೋಗಾಸನ ಮಾಡಿದರೆ ಸಾಕು ಯೋಗ ಗುರು ಆಗುವರು. ಒಂದು ಎರಡು ನಿಮಿಷ ಉಸಿರು ಹಿಡಿದು ಹಾಡಿದರೆ ಸಾಕು ಜಗತ್ ಪ್ರಖ್ಯಾತ ಗಾಯಕರಾಗುತ್ತಾರೆ.೧ ಆದರೆ ಈ ಕೊರಮ ಸಮುದಾಯ ಕಲಾವಿದ ೨೪ ಗಂಟೆವರೆಗೂ ಉಸಿರು ಬಿಡದೆ ಶುತಿ ಹಾಕಿದರೂ ಯಾರೂ ಗಮನಕ್ಕೆ ತೆಗೆದುಕೊಳ್ಳುವುದಿಲ್ಲ. ಯಾವ ಸರ್ಕಾರ ಗುಂಪಿಗೂ ಸೇರಿಸುವುದಿಲ್ಲ. ನಿಜವಾದ ಕಲೆಗೆ ಬೆಲೆ ಇಲ್ಲವೆಂದು ಹೇಳಬಹುದು.

**ಖಣಿ** : ಈ ಖಣಿ ವಾದ್ಯ ಹೆಗಲಿಗೆ ಹಾಕಿಕೊಂಡು ಎರಡು ಕೈಗಳಿಂದ ನುಡಿಸುತ್ತಾರೆ. ಈ ಖಣಿಯನ್ನು ಗುಣಿಗಳಿಂದ ನುಡಿಸುತ್ತಾರೆ. ಈ ಖಣಿಯನ್ನು ಎಡಬಗಲಿಗೆ ಹಾಕೊಂಡು, ಎಡಗೈ ಖಣಿಯ ಮೇಲೆ ಇಟ್ಟು, ಬಲಗೈ ಅತ್ತ ಎಡಗೈನ ಎದುರಿಗೆ ಅಂದರೆ ಕೆಳಗಿಂದ ನುಡಿಸುತ್ತಾರೆ.

ಎಡಗೈಯಲ್ಲಿರುವ ಗುಣಿಯನ್ನು ಬಿದಿರಿಂದ ಹಾಕಿರುತ್ತಾರೆ. ಇದನ್ನು "ಸಾಬತ್ತು" ಎಂದು ಕರೆಯುತ್ತಾರೆ. ಬಲಗೈಯಲ್ಲಿರುವ ಗುಣಿಯನ್ನು ಸಾಗುವಾನಿ ಬಿಟ್ಲ ಅಥವಾ ಬೇವಿನಮರದಿಂದ ತಯಾರಿಸಲಾಗಿರುತ್ತದೆ. ಎಡಗೈಯಲ್ಲಿರುವ ಗುಣಿ ಉದ್ದವಿದ್ದು, ಬಲಗೈಯಲ್ಲಿನ ಗುಣಿ ಚಿಕ್ಕದಾಗಿರುತ್ತದೆ.

ಈ ಖಣಿಯಲ್ಲಿ ಜಾನಪದ ಶಿಷ್ಟಕಾರದ ತಾಳಗಳಿಂದ ಹಿಡಿದು ಶಾಸ್ತ್ರೀಯ ಚೌಕಟ್ಟಿನ ತಾಳಗಳಾದ ತೀನತಾಲ್, ಝುಪ್ತಾಲ್, ಏಕತಾಲ್, ರೂಪಕ್, ದೀಪಚಂದಿ ಇನ್ನು ಮುಂತಾದ ತಾಳಗಳನ್ನು ನುಡಿಸುತ್ತಾರೆ. ಯಾವ ಪಂಡಿತರಿಗಿಂತ ನಾವೆನು ಕಮ್ಮಿ ಇಲ್ಲದಂತೆ ಹಾಡಿ, ಅಂದರೆ ೪ ಮಾತ್ರೆಯಲ್ಲಿ ೫ ಮಾತ್ರೆಗಳು, ೪ ಮಾತ್ರೆಯಲ್ಲಿ ೬ ಮಾತ್ರೆಗಳು, ೪ ಮಾತ್ರೆಗಳಲ್ಲಿ ೭ ಮಾತ್ರೆಗಳು ಇದೆ ತೆರನಾಗಿ ೫ ಮಾತ್ರೆಗಳಲ್ಲಿ ೪ ಮಾತ್ರೆಗಳು, ೫ ಮಾತ್ರೆಗಳಲ್ಲಿ ೬ ಮಾತ್ರೆಗಳು, ೫ ಮಾತ್ರೆಗಳಲ್ಲಿ ೭ ಮಾತ್ರೆಗಳನ್ನು ಸೇರಿಸಿ ನುಡಿಸುವ ಚತುರತೆ ಈ ಖಣಿ ನುಡಿಸುವ ಕಲಾವಿದರಿಂದ ನಾವೆನಾದರೂ ನಿಸರ್ಗದ ಗುಡುಗು ಸಿಡಿಲಿನ ಆರ್ಭಟ ನೋಡ್ಬೇಕು ಅಂದರೆ ಅದು ಇವರ ಖಣಿಯ ವಾದನದಲ್ಲಿ ಕೇಳಬೇಕು. ವಿಲಂಬಿತ ಲಯದಿಂದ ಪ್ರಾರಂಭ ಮಾಡಿ ಮಧ್ಯ ದೃತ್ ಮತ್ತು ಅತಿಧೃತ ಲಯದಲ್ಲಿ ನುಡಿಸುವಂತ ತಯಾರಿಕೆ ಈ ಖಣಿ ಕಲಾವಿದರಲ್ಲಿರುತ್ತದೆ.

ಈ ಖಣಿಯಲ್ಲಿ ತಿಹಾಯಿ (ಕೊನೆಯ ಬೋಲ್ ಹಿಡ್ಕೊಂಡು ಅದನ್ನು ಮೂರು ಸಲ ನುಡಿಸುವುದು) ಚಕ್ರಧಾರ (ತಿಹಾಯಿಯುಕ್ತ ಬೋಲುಗಳನ್ನು ಮೂರು ಸಲ ನುಡಿಸಿ ಸಲುಗೆ ಬರುವುದು) ಮತ್ತು ತುಕಡ, ಮುಖಡಾಗಳನ್ನು ನುಡಿಸುತ್ತಾರೆ. ಯಾವುದೆ ಒಂದು ವಾದ್ಯ ನುಡಿಸಿ ಸಾಮಾನ್ಯ ಜನರಿಂದ ಪಂಡಿತರನ್ನು ತೃಪ್ತಿಸಲು ಸಾಧ್ಯವಿಲ್ಲ. ಆದರೆ ಈ ಖಣಿ ವಾದ್ಯ ಕಲಾವಿದ "ಖಣಿ" ನುಡಿಸಲು ಪ್ರಾರಂಭ ಮಾಡಿದರೆ ಸಾಕು ಸಂಗೀತ ಅರಿಯದ ಸಾಮಾನ್ಯ ಮನುಷ್ಯ ಕೂಡ ತಲೆ ತೂಗುವಂತೆ ಮಾಡುತ್ತಾರೆ. ಖಣಿ ನುಡಿಸುವ ಸಂದರ್ಭದಲ್ಲಿ ಯಾರಾದರೂ ಪಂಡಿತರು ನಿಂತಿದ್ದರೆ ಸಾಕು ಅವರು ಕೂಡ "ಖಣಿ"ಯ ನಾದಕ್ಕೆ ಪೆಟ್ಟು ಹಾಕುತ್ತ ತಲೆತೂಗುತ್ತ ನಿಂತಿರುತ್ತಾರೆ. ಅಂತ ಅದ್ಭುತ ಕಲಾವಿದರು ಈ ಖಣಿ ವಾದಕರು ಎಂದು ಹೇಳಬಹುದು. ಇಷ್ಟೆಲ್ಲ ಕಲೆಯಿದ್ದರೂ ಸಹ ಇವರನ್ನು ಮದುವೆ ಮುಂಜಿಗಾಗಿ ಬಾರಿಸುವ ಕಲಾವಿದರೆನ್ನುತಾರೆ ಹೊರತು ಇವರಲ್ಲಿ ಒಂದು ದೊಡ್ಡ ಅದ್ಭುತ ಕಲೆಯಿದೆ ಎಂದು ಯಾವ ಸರ್ಕಾರ ಗುರುತಿಸಿ ಪ್ರಶಸ್ತಿ ಪತ್ರಗಳು, ಸರ್ಕಾರದ ಕಾರ್ಯಕ್ರಮಗಳು ನೀಡುವುದಿಲ್ಲ.

**ದಿಮ್ಮಿ :** ಈ ದಿಮ್ಮಿ ವಾದ್ಯ ಚರ್ಮವಾದ್ಯವಾಗಿದ್ದು ಶಹನಾಯಿ ಮೇಳದಲ್ಲಿ ಖಣಿವಾದ್ಯ ಖಾಯಂ ಆಗಿ ನುಡಿಸುವ ವಾದ್ಯ. ಆಕಾರದಲ್ಲಿ ಚಿಕ್ಕದಾಗಿದ್ದು ಈ ದಿಮ್ಮಿಯನ್ನು ಹೆಗಲಿಗೆ ಹಾಕೊಂಡು ಎಡಗೈನ ಹೆಸ್ತ ಅಚ್ಚಿ ಬಲಗೈಯಲ್ಲಿ ಗುಣಿಯ ಸಹಾಯದಿಂದ ಬಾರಿಸುತ್ತಾರೆ. ಎಡಗೈ ದಿಮ್ಮಿಯ ಮೇಲೆ ಇಟ್ಟು ಬಲಗೈಯಲ್ಲಿನ ಗುಣಿಯಿಂದ ನುಡಿಸಿದಾಗ ವಿವಿಧ ರೀತಿಯ ನಾದ ಹೊರಹೊಮ್ಮಿದೆ. ಖಣಿಯ ವಾದ್ಯಕಲಾವಿದ ಮಾಡುವ ಎಲ್ಲ ತರಹದ ಜಾನಪದ ಶೈಲಿಯ ತಾಳಗಳು, ಶಾಸ್ತ್ರೀಯ ಸಂಗೀತ ತಾಳಗಳನ್ನು ನುಡಿಸ್ತಾರೆ.

ಶಹನಾಯಿ ಮೇಳದಲ್ಲಿ ಖಣಿ ಮತ್ತು ದಿಮ್ಮಿ ಒಂದು ನಾಣ್ಯದ ಎರಡು ಮುಖಗಳಿದ್ದಂತೆ ಒಂದು ಬಿಟ್ಟು ಒಂದಿರುವುದಿಲ್ಲ. (ವಿವಿಧ ಬಗೆ ಬಗೆಯ ನಾದ ಹೊರಹೊಮ್ಮುತ್ತದೆ) ಎಡಗೈ ದಿಮ್ಮಿ ಮೇಲೆ ಇಟ್ಟು ತೀಡಿ, ಬಲಗೈಯಲ್ಲಿರುವ ಗುಣಿಯಿಂದ ಬಡಿಯುವುದರಿಂದ ವಿವಿಧ ರೀತಿಯ ನಾದ ಹೊರಹೊಮ್ಮುತ್ತದೆ. ಈ ದಿಮ್ಮಿ ವಾದ್ಯ ಗೊಂದಲಿಗರು ನುಡಿಸುವ ಸಂಬಾಳ ಆಕಾರದ ಹೋಲುವಂತಿದ್ದು, ಆದರೆ ಗೊಂದಲಿಗರು ಸಮ್ಮಾಳ ಚಿಕ್ಕಗಾತ್ರದಲ್ಲಿ ಮತ್ತು ಅವರು ಯಾವುದೇ ಗುಣಿ ಉಪಯೋಗಿಸದೆ ಎರಡು ಕೈಗಳಿಂದ ನುಡಿಸಿದರೆ, ಈ ದಿಮ್ಮಿ ವಾದ್ಯವನ್ನು ಎಡಗೈ ಆಸ್ತದಿಂದ, ಬಲಗೈಯಲ್ಲಿ ಗುಣಿ ಹಿಡ್ಕೊಂಡು ನುಡಿಸುತ್ತಾರೆ. ಖಣಿ ಯಾವ ಶೃತಿಯಲ್ಲಿರುತ್ತದೆ ಆ ಶೃತಿಗೆ ದಿಮ್ಮಿ ಶೃತಿಗೊಳಿಸಿ ನುಡಿಸುತ್ತಾರೆ. ಖಣಿ ಮತ್ತು ದಿಮ್ಮಿ ಒಂದು ಮನೆಯಲ್ಲಿ ಸತಿ–ಪತಿಗಳಿದ್ದಂತೆ ಎಂದರೆ ತಪ್ಪಾಗಲಾರದು ಕಾರಣ ಖಣಿಯಲ್ಲಿ ನುಡಿಸುವ ಎಲ್ಲ ಬೋಲ್‌ಗಳನ್ನು ದಿಮ್ಮಿ ಕಲಾವಿದನು ಕುಡ ನುಡಿಸುತ್ತಾನೆ.

**ತಾಳ** : ಎಂಟು ಇಂಚು ಸುತ್ತಳತೆಯ ಮೇಲೆ ಉಬ್ಬಿಕೊಂಡ ಕಂಚಿನ ತಾಳಗಳು ಸಾಮಾನ್ಯವಾಗಿ ಡೊಳ್ಳಿನ ಹಾಡಿನ ಜೊತೆಗೆ ನುಡಿಸುತ್ತಾರೆ. ಅದೇ ತೆರನಾಗಿ ಶಹನಾಯಿ ಮೇಳದಲ್ಲಿ ಖಣಿ, ದಿಮ್ಮಿ ಜೊತೆಯಲ್ಲಿ ಖಣಿ ಮತ್ತು ದಿಮ್ಮಿ ಪೆಟ್ಟಿಗೆ ತಕ್ಕಂತೆ, ಖಣಿ ದಿಮ್ಮಿಯ ಕಲಾವಿದರು ಮಾಡುವ ಎಲ್ಲ ಬೋಲುಗಳನ್ನು ತಾಳ ಕಲಾವಿದನು ನುಡಿಸುತ್ತಾನೆ ಎಡಗೈಲಿ ಒಂದು ಬಲಗೈಯಲ್ಲಿ ಒಂದು ತಾಳ ಹಿಡಿದು ಅವೆರಡರ ಘರ್ಷಣೆ ಮಾಡುವುದರಿಂದ ನಾದ ಹೊರಹೊಮ್ಮುತ್ತದೆ.

**ನರ್ತನ ಪ್ರಕಾರಗಳು** : ಸಮಾಜದಲ್ಲಿರುವ ಪ್ರತಿಯೊಬ್ಬ ಮನುಷ್ಯನ ಸ್ವಾಭಾವಿಕ ಸ್ಪಂದನವೇ ಈ ನೃತ್ಯ ಎಂದರೆ ತಪ್ಪಾಗಲಾರದು. ತಾಯಿಯ ಗರ್ಭದಿಂದ ಭೂಮಿಗೆ ಬಂದ ಮಗು ತನ್ನ ಶಾರೀರಿಕ ಸಮತೋಲನವನ್ನು ಪಡೆಯುವ ಮೊದಲೇ ಮಾನವ ಶಿಶು ಕುಣಿಯುವುದು ಒಂದು ಸಹಜ ಚಟುವಟಿಕೆ. ನೃತ್ಯವು ಕೂಡ ಮಾನವ ಬದುಕಿನಲ್ಲಿ ಅನೇಕ ಬಾರಿ ನಡೆಯುವಂತದ್ದು. ಮದುವೆ, ಮುಂಜಿ, ಪುತ್ರಜನನ, ನಾಮಕರಣ, ವಿಜಯೋತ್ಸವ ಮತ್ತು ದೇವಾಲಯ ಜಾತ್ರೆಗಳಲ್ಲಿ ಸಾಮೂಹಿಕ ಚಟುವಟಿಕೆಯಾಗಿ ಬಂದಿದೆ. ಕುಣಿತದ ಉದ್ದೇಶ ಆನಂದ ಅಥವಾ ಮನರಂಜನೆಗೋಸ್ಕರ ಎಂದರೆ ತಪ್ಪಾಗಲಾರದು. ಇದೇ ರೀತಿಯಲ್ಲಿ ಕೊರಮ ಸಮುದಾಯದ ಶಹನಾಯಿ ಮೇಲಿನ ನೃತ್ಯವು ಕೂಡ ಮೇಲಿನ ಹೇಳಿಕೆಗಳಿಗೆ ಏನು ಹೊರತಲ್ಲ. ಸಾಮಾನ್ಯವಾಗಿ ಎಂಟು ಜನ ಕಲಾವಿದರು ಈ ಶಹನಾಯಿ ಮೇಳದಲ್ಲಿ ಕಂಡುಬರುತ್ತಾರೆ. ಈ ಶಹನಾಯಿ ಮೇಳದಲ್ಲಿ ಮುಖ್ಯವಾದ್ಯವೆಂದರೆ ಅದು ಶಹನಾಯಿ ವಾದ್ಯ. ನಂತರ ಶಹನಾಯಿಗೆ ಶ್ರುತಿಗೆ "ಶುತಿ" ವಾದ್ಯವಿರುತ್ತದೆ. ಎರಡು ಖಣಿ ಒಂದು ದಿಮ್ಮಿ ಮತ್ತು ತಾಳ ಒಟ್ಟು ಎಂಟು ಜನ ಕಲಾವಿದರು ಕಂಡುಬರುತ್ತಾರೆ. ಈ ಶಹನಾಯಿ ಮೇಳದವರು ವಾದ್ಯಗಳನ್ನು ನುಡಿಸುವುದರ ಜೊತೆಗೆ ನೃತ್ಯವು ಕೂಡ ಮಾಡುತ್ತಾರೆ. ಆದರೆ ಇವರ ನೃತ್ಯ ಭರತನಾಟ್ಯ, ಕುಚುಪುಡಿ ಒಡಿಸ್ಸಾ ಮತ್ತು ಕಥಕ್ ನೃತ್ಯಗಳಿಗೆ ಇರುವಂತ ಯಾವುದೆ ಶಾಸ್ತ್ರೀಯ ನಿಯಮಗಳೂ ಈ ಶಹನಾಯಿ ಮೇಳದ ನೃತ್ಯದಲ್ಲಿ ಕಂಡುಬರುವುದಿಲ್ಲ. ಆದರೂ ಸಹ ಶಹನಾಯಿ ಮೇಳದ ಕಲಾವಿದರು ತಮ್ಮದೇ ಆದ ಶೈಲಿಯಲ್ಲಿ ತಾಳಕ್ಕನುಗುಣವಾಗಿ ನೃತ್ಯಮಾಡುತ್ತಾರೆ. ಇವರು ಎರಡು ಪ್ರಕಾರ ನೃತ್ಯಗಳನ್ನು ಮಾಡುತ್ತಾರೆ.

೧) ಒಂದು ತಮ್ಮ ಸಂಗೀತ ಕಚೇರಿ ಸಂದರ್ಭದಲ್ಲಿ ತಮ್ಮದೇ ಆದ ವಿವಿಧ ಪ್ರಕಾರದ ಹೆಜ್ಜೆಗಳನ್ನು ಹಾಕುತ್ತ ನೃತ್ಯ ಮಾಡುವುದು ಕಂಡುಬರುತ್ತದೆ.

೨) ಇನ್ನೊಂದು ತಾವು ಪ್ರದರ್ಶನ ಮಾಡುವಾಗ ಇವರ ಸಂಗೀತ ಕೇಳಿ ಪ್ರೇಕ್ಷಕರು ಬಂದು ಕುಣಿಯುವಾಗ ಅವರ ಮನರಂಜನೆಗೋಸ್ಕರ ಅವರಂತೆ ಕುಣಿಯುವುದು ಕಂಡುಬರುತ್ತದೆ.

ಎಂಟು ಜನರಿರುವ ಈ ಶಹನಾಯಿ ಮೇಳದಲ್ಲಿ ಇಬ್ಬರು ಶಹನಾಯಿ ವಾದಕರು ಒಬ್ಬ ಶೃತಿ ವಾದಕ ಒಂದು ಕಡೆ ನಿಂತಿರುತ್ತಾರೆ. ಒಬ್ಬ ದಿಮ್ಮಿವಾದಕ ಮತ್ತು ಖಣಿವಾದಕನ ಪಕ್ಕದಲ್ಲಿ ದಿಮ್ಮಿ ನುಡಿಸುವವನ ಪಕ್ಕದಲ್ಲಿ ಇಬ್ಬರು ತಾಳವಾದಕರು ನಿಂತಿರುತ್ತಾರೆ. ತಮ್ಮ ಸಂಗೀತ ಕಚೇರಿ ಪ್ರಾರಂಭ ಮಾಡುವ ಮುಂಚೆ ಶ್ರುತಿ ವಾದಕ ಶ್ರುತಿ ಹಾಕುತ್ತಾನೆ. ಈ ಶ್ರುತಿ ನಾದಕ್ಕೆ ಶಹನಾಯಿವಾದಕ.

ಭಾವನಪೂರ್ವಕವಾಗಿ ನಿಂತಲೇ ತಲೆದೂಗುತ್ತ ಯಾವುದಾದರೊಂದು ರಾಗದಲ್ಲಿ ಆಲಾಪನೆ ಮಾಡಿಬಿಟ್ಟ ನಂತರ, ಖಣಿ, ದಿಮ್ಮಿ ಮತ್ತು ತಾಳದ ಕಲಾವಿದರು ನಿಂತ ಜಾಗಬಿಟ್ಟು ಲಯಕ್ಕನುಗುಣವಾಗಿ ಮೂರು ನಾಲ್ಕು ಹೆಜ್ಜೆ ಮುಂದೆ ಬಂದು ಮೊಳಕಾಲು ನೆಲಕ್ಕೆ ಊರಿ 'ಮುಗುತಾ' ನುಡಿಸುತ್ತಾರೆ. "ಮುಗುತಾ" ಎಂದರೆ ಶಾಸ್ತ್ರೀಯ ಚೌಕಟ್ಟಿನಲ್ಲಿ 'ಉಠಾನ' ಎಂದು ಕರೆಯುತ್ತಾರೆ. ದೀಮ(ವಿಲಂಬಿತ)ದಲ್ಲಿ ಪ್ರಾರಂಭ ಮಾಡಿದ ತಾಳವನ್ನು ಎರಡು ಪಟ್ಟು ಮೂರು ಪಟ್ಟು ೪ ಪಟ್ಟು ಕೊನೆಗೆ ಎಂಟು ಪೆಟ್ಟು (ಅತಿದೃತ್) ಚಾತಿ ಮಾಡಿ, ಕೊನೆ ಕೊನೆಯ ಬೋಲನ್ನು ಮೂರು ಬಾರಿ ನುಡಿಸಿ ಮುಕ್ತಾಯ ಮಾಡ್ತಾರೆ. ನಂತರ ಶಹನಾಯಿ ವಾದಕರು ಯಾವುದಾದರೊಂದು ರಾಗದಲ್ಲಿ ಆಲಾಪನೆ ಶುರುಮಾಡಿದರೆ ಸಾಕು ಎದೇನೆ ಮಳೆ ಬರ್ತಿದೆ ಏನೋ ಅನ್ನುವ ಹಾಗೆ ಆಲಾಪನೆಗಳ ಸುರಿಮಳೆ, ಎರಡು ಶಹನಾಯಿ ವಾದಕರ ಆಲಾಪನೆ ತಾನುಗಳು ಕೇಳುಗರನ್ನು ಮಂತ್ರಮುಗ್ಧರನ್ನಾಗಿಸುತ್ತದೆ. ನಂತರ ಯಾವುದಾದರೊಂದು ಹಾಡು ಶುರುಮಾಡಿದ ಮೇಲೆ ಖಣಿ, ದಿಮ್ಮಿ ಮತ್ತು ತಾಳವಾದಕರು ಒಂದೇ ಸಾಲಿನಲ್ಲಿ ನಿಂತು ಲಯಕ್ಕನುಗುಣವಾಗಿ ಹೆಜ್ಜೆ ಹಾಕುತ್ತ ಹಾಕುತ್ತ ಮುಂದೆ ಬರುತ್ತಾರೆ. ಮತ್ತೆ ಅದೇ ಹೆಜ್ಜೆ ಹಾಕುತ್ತ ವಿವಿಧ ಭಂಗಿಯಲ್ಲಿ ಹಿಂದಕ್ಕೆ ಹೋಗುತ್ತಾರೆ. ನಂತರ ಗೋಲಾಖಾರದಲ್ಲಿ ಒಬ್ಬರಿಂದ ಒಬ್ಬರು ವಿವಿಧ ರೀತಿಯಲ್ಲಿ "ಮೈವಳ್ಳಿಸುತ್ತ, ಸೊಂಟವಳ್ಳಿಸುತ್ತ ಮತ್ತು ಗೋಣು ಹಾಕುತ್ತ ಬಗೆಬಗೆಯ ಲಯಕ್ಕನುಗುಣವಾಗಿ ಹೆಜ್ಜೆ ಹಾಕುತ್ತ ಹಾಕುತ್ತಾರೆ.

ನಿರಂತರವಾಗಿ ಶಹನಾಯಿ ವಾದಕ ತಾನು ಶಹನಾಯಿ ನುಡಿಸ್ತಾನೆ ಇರ್ತಾನೆ. ಮತ್ತು ಖಣಿ ದಿಮ್ಮಿ ಮತ್ತು ತಾಳ ವಾದಕರು ನಾಲ್ಕು ಕಡೆ ಒಬ್ಬೊಬ್ಬರು ನಿಂತುಕೊಂಡು ವಿವಿಧ ರೀತಿಯ ಬಗೆ ಬಗೆಯ ಹೆಜ್ಜೆಗಳನ್ನು ನಾಲ್ಕು ಮೂಲೆಯಿಂದ ಒಂದೆ ಕಡೆ ಬಂದು ನಂತರ ಅದೆ ಹೆಜ್ಜೆ ಹಾಕುತ್ತ ಹಿಂದಕ್ಕೆ ಸರಿದು ಅವರವರ ನಿಂತ ಜಾಗದಲ್ಲೆ ಮೈ ಜೋಲಿ ಹಾಕುತ್ತ ಭಾವಪೂರ್ಣವಾಗಿ ನುಡಿಸುತ್ತಾರೆ. ಆಮೇಲೆ ನೃತ್ಯವೆಲ್ಲ ಮಧ್ಯ ತಾಳದಲ್ಲಿ ನಡೆಯುವಂತದ್ದು. ನಂತರ ಧೃತ ಲಯಕಾರಿಯಲ್ಲಿ ನಾಲ್ಕು ಮಂದಿ ಕಲಾವಿದರು ತಾಳವನ್ನು ನುಡಿಸುತ್ತ ಗೋಲಾಕಾರದಲ್ಲಿ ಜೋರಾಗಿ ಕುಣಿಯುತ್ತ ಸುತ್ತುತ್ತ ಇರ್ತಾರೆ ಲಯಕ್ಕನುಗುಣವಾಗಿ ನಿಂತ ನಿಂತಲೇ ಮೇಲಕ್ಕೆ ಜಿಗಿಯುವುದು ಕೂರುವುದು,

ಜಿಗಿಯುವುದು, ಕೂರುವುದು ಜಿಗಯುವುದು ಮಾಡಿ (ಕೊನೆಗೆ ಮತ್ತೆ ಒಂದೆ ಸಾಲಿಗೆ ಬಂದು ನಿಂತು ಕೊನೆಗೆ ಮೂರು ಸಲ ಮುಕ್ತಾಯ ಮಾಡಿ ಕಾರ್ಯಕ್ರಮ ಮುಕ್ತಾಯ ಮಾಡ್ತಾರೆ) ವಿವಿಧ ರೀತಿಯ ನೃತ್ಯದಿಂದ ನೋಡುವ ಪ್ರೇಕ್ಷಕರಿಗೆ ಮನರಂಜನೆ ನೀಡುವ ಶಹನಾಯಿ ವಾದಕರೊಂದಿಗೆ ಉಳಿದೆಲ್ಲ ಖಣಿ, ದಿಮ್ಮಿ ತಾಳದ ಕಲಾವಿದರು ಒಂದು ನಾಟಕೀಯ ಸನ್ನಿವೇಶವನ್ನು ಉದ್ಭವ ಮಾಡುತ್ತಾರೆ.

ಇವರು ನೃತ್ಯ ಮಾಡುವ ತಾಳಗಳು

೧) ಕೆಹರವಾ

೨) ಕುದುರೆ ಠೇಖಾ (ದಾದರ)

೩) ಭಜನ್ ಮತ್ತು ಝುಪ್ತಾಲ್ ತಾಳದಲ್ಲಿಯು ನೃತ್ಯವನ್ನು ಮಾಡುತ್ತಾರೆ. ಆದರೆ ಶಹನಾಯಿ ವಾದಕ ಯಾವುದಾದರೊಂದು ರಾಗವನ್ನು ನುಡಿಸುತ್ತಿದ್ದರೆ ಆ ನುಡಿಸುವ ಲಯಕ್ಕನುಗುಣವಾಗಿ ವಿವಿಧ ರೀತಿಯಲ್ಲಿ ಬಗೆಬಗೆಯ ಹಲವಾರು ಹೆಜ್ಜೆಗಳನ್ನು ಇಡುತ್ತಾ, ನೋಡುಗರನ್ನು ಮಂತ್ರಮುಗ್ಧರನ್ನಾಗಿಸುತ್ತಾರೆ. ಶಹನಾಯಿ ಮೇಳ ಕಲಾವಿದರು ತಾವು ಕುಣಿಯುವುದರ ಜೊತೆಗೆ ಪ್ರೇಕ್ಷಕರನ್ನು ಕುಣಿಸುತ್ತಾರೆ.

ಸಾಮಾನ್ಯವಾಗಿ ಹಳ್ಳಿಗಳಲ್ಲಿ ಎಲ್ಲ ರೀತಿಯ ಜಾನಪದ ಸಂಗೀತ ಕಲಾವಿದರು ಸಿಗುತ್ತಾರೆ. ಅಂತವರಲ್ಲಿ ಭಜನೆ ಸಂಗೀತ ಕಲಾವಿದರು ದೊಡ್ಡಾಟದಲ್ಲಿ ಪಾತ್ರಗಳನ್ನು ಮಾಡಿದ ಕಲಾವಿದರು, ಸಿನಿಮಾ ಸಂಗೀತ ಕಲಾವಿದರು ಕಂಡುಬರುತ್ತಾರೆ. ದೇವರ ಜಾತ್ರೆ ಅಥವಾ ಮದುವೆಯಂತ ಮೆರವಣಿಗೆಯಲ್ಲಿ ಈ ಎಲ್ಲ ರೀತಿಯ ಅಭಿರುಚಿ ಇದ್ದು ಜನಗಳಿಗೆ ಅವರಿಗೆ ಬೇಕಾದಂತ ಸಂಗೀತವನ್ನು ನುಡಿಸಿ ಪ್ರೇಕ್ಷಕರ ಕುಣಿತಕ್ಕೆ ತಕ್ಕಂತೆ, ಪ್ರೇಕ್ಷಕರ ಜೊತೆಗೆ ತಾವು ಕುಣಿದು ಕುಪ್ಪಳಿಸುತ್ತಾರೆ. ಬಹುಶಃ ಈ ರೀತಿ ಸಾಮಾನ್ಯ ಜನರಿಗೆ ಮನೋರಂಜನೆ ನೀಡುವಂತ ಶಹನಾಯಿ ಕಲಾವಿದರು ಕಲೆಯ ನೈಪುಣ್ಯತೆ ಮೆಚ್ಚುವಂತದ್ದು.

ಕಾಲಕಾಲಕ್ಕೆ ಪ್ರೇಕ್ಷಕರ ಕಲೆಯ ಅಭಿರುಚಿ ಹೇಗೆ ಬದಲಾವಣೆಯಾಗುತ್ತೆ ಮತ್ತು ಕಲಾವಿದರಲ್ಲಿ ಕಾಲಕಾಲಕ್ಕೆ ಹೇಗೆ ತಮ್ಮ ಕಲೆಯಲ್ಲಿ ಹೇಗೆ ಬದಲಾವಣೆಯಾಗುತ್ತೆ ಎನ್ನುವುದು ಕುರಿತು ಒಂದು ಉದಾಹರಣೆಗೆ ನಾನು ಒಬ್ಬ ಶಹನಾಯಿ ಮೇಳದ ಕಲಾವಿದನಾಗಿದ್ದು ೧೯೯೦ ಇಸ್ವಿಯಲ್ಲಿ ಮದುವೆ, ದೇವರ ಜಾತ್ರೆಗಳಲ್ಲಿ ಮತ್ತು ವಿಧಿವಶವಾದವರ ಮನೆಯಲ್ಲಿ ಸಾಮಾನ್ಯವಾಗಿ ಶಹನಾಯಿ ಮೇಳ ಮತ್ತು ಬ್ಯಾಂಡ್ ಮೇಳಗಳು ಸೇರುತ್ತಿದ್ದವು. ಶಹನಾಯಿ ಮೇಳದಲ್ಲಿ ಕೇವಲ ನಾಲ್ಕು ಜನ ಕಲಾವಿದರು ಮಾತ್ರ ಕಂಡುಬರುತ್ತಿದ್ದರು. ಬ್ಯಾಂಡ್ ಮೇಳದಲ್ಲಿ ಸುಮಾರು ಐದಾರು ಜನ ಕಲಾವಿದರು ಕಂಡುಬರುತ್ತಿದ್ದರು.
೧) ಮೊದಲಿಗೆ ಪಾಳೆಯ ಪ್ರಕಾರ ಒಂದೊಂದು ಕಲಾಮೇಳಗಳು ಪ್ರದರ್ಶನ ನೀಡಿದವು.

೧) ಬ್ಯಾಂಡ್ ಮೇಳದ ಕಲಾವಿದರು ನೃತ್ಯ ಮಾಡೋದಿಲ್ಲ ಅವರು ಪ್ರೇಕ್ಷಕರನ್ನು ಕುಣಿಸುತ್ತಾರೆ.

ಶಹನಾಯಿ ಮೇಳದ ಕಲಾವಿದರು, ವಾದ್ಯಗಳನ್ನು ನುಡಿಸುವುದರ ಜೊತೆಗೆ ನೃತ್ಯಕೂಡ ಮಾಡುತ್ತಿದ್ದೆವು. ಮೆರವಣಿಗೆಯಂತ ಸಂದರ್ಭದಲ್ಲಿ ಎರಡು ಮೇಳಗಳು ತಮ್ಮ ಪ್ರದರ್ಶನ ನೀಡಲು ಶುರು ಮಾಡಿದವು.

ಆದರೆ ಎಲ್ಲ ಪ್ರೇಕ್ಷಕರ ಬ್ಯಾಂಡಿನ ಮೇಳದ ಮುಂದೆ ಮಾತ್ರ ಕುಣಿಯುತ್ತಿದ್ದರು ಇದನ್ನು ನೋಡಿದ ನಮ್ಮ ಮನಸ್ಸಿಗೆ ತುಂಬ ನೋವಾಗುತ್ತಿತ್ತು. ನಂತರ ನಾವು ಬ್ಯಾಂಡ್ ಕಲೆಯನ್ನು ಕಲಿತು ಬ್ಯಾಂಡ್ ಮೇಳವನ್ನು ನುಡಿಸುತ್ತ ಕಾಲ ಕಳೆದವು. ಆದರೆ ಶಹನಾಯಿ ಕಲಾವಿದರು ತಮ್ಮ ಕಲೆಯಲ್ಲಿ ಒಂದು ಶಹನಾಯಿ ಬದಲಾಗಿ ಎರಡು ಶಹನಾಯಿ, ಒಂದು ಖಣಿ ಬದಲಾಗಿ ಎರಡು ಖಣಿ ಮತ್ತು ಒಂದು ತಾಳದ ಬದಲಾಗಿ ಎರಡು ತಾಳಗಳು ಶಹನಾಯಿ ಮೇಳದಲ್ಲಿ ಅಳವಡಿಸಿಕೊಂಡು ಸಮಾಜ ಜನರಿಗೆ ಯಾವ ರೀತಿ ಸಂಗೀತ ಬೇಕು ಯಾವ ರೀತಿ ನೃತ್ಯ ಬೇಕೋ ಅದೇ ರೀತಿ ಕಲೆಯನ್ನು ಪ್ರದರ್ಶನ ಮಾಡಲು ಪ್ರಾರಂಭ ಮಾಡಿ ತಾವು ಕುಣಿಯುವುದರ ಜೊತೆಗೆ ನೋಡುವ ಪ್ರೇಕ್ಷಕರನ್ನು ಕುಣಿಸಲು ಪ್ರಾರಂಭ ಮಾಡಿದರು.

೧.೧.೨೦೧೮ರಂದು ಶಹಾಪುರ ತಾಲೂಕಿನ ಬೇವಿನಹಳ್ಳಿ ಗ್ರಾಮದಲ್ಲಿ ಗ್ರಾಮದೇವತೆಯ ಜಾತ್ರೆಯಲ್ಲಿ ಬ್ಯಾಂಡ್ ಮೇಳ ಮ್ಯೂಜಿಕಲ್ ಮೇಳ ಮತ್ತು ಶಹನಾಯಿ ಮೇಳಗಳು ಕಲಿಯುತ್ತಿದ್ದರು. ೧೯೯೦ರಲ್ಲಿ ಶಹನಾಯಿ ಮೇಳವಿಟ್ಟು ಬ್ಯಾಂಡಿನ ಮೇಳದಲ್ಲಿ ಕುಣಿಯುತ್ತಿದ್ದ ಯುವಕರು ೧.೧.೨೦೧೮ರಂದು ಗ್ರಾಮದೇವತೆ ಜಾತ್ರೆಯಲ್ಲಿ ಮ್ಯೂಜಿಕಲ್, ಬ್ಯಾಂಡ್ ಮೇಳ ಬಿಟ್ಟ ಇಡಿ ಊರಿನ ಜನ ಶಹನಾಯಿ ಮೇಳದ ಮುಂದೆ ಕುಣಿಯುತ್ತಿದ್ದರು ಕೇವಲ ಮಂಗಳ ವಾದ್ಯಕ್ಕೆ ದೇವರ ಪೂಜೆಗೆ ಮೀಸಲಾಗಿದ್ದ ಈ ಶಹನಾಯಿ ಮೇಳ ಸಾರ್ವಜನಿಕರ ಪ್ರೇಕ್ಷಕರ ಭಾವನೆಗಳಿಗೆ ಬೇಕಾಗುವ ಹಾಗೆ ಎಲ್ಲ ರೀತಿಯ ಸಂಗೀತ ಕಲೆಯನ್ನು ತಮ್ಮ ಸಂಗೀತ ಕಲೆಯಲ್ಲಿ ಅಳವಡಿಸಿ ಸಾಮಾನ್ಯ ಜನರಿಂದ ಹಿಡಿದ ಪಂಡಿತರಿಗೂ ಖುಷಿ ಪಡುವಂತ ರೀತಿಯಲ್ಲಿ ತಮ್ಮ ಕಲೆಯನ್ನು ಪ್ರದರ್ಶನ ಮಾಡುತ್ತಿದ್ದಾರೆ ಎಂದರೆ ನಿಜವಾಗಲೂ ಇವರು ಸಂಗೀತರ ಸಾಧಕರು, ಸರಸ್ವತಿ ಪುತ್ರರು ಎಂದೆ ಹೇಳಬಹುದು.

ಈ ಶಹನಾಯಿ ಕಲಾವಿದರು ಎಲ್ಲ ಕಾರ್ಯಕ್ರಮಗಳಲ್ಲಿ ನೃತ್ಯ ಮಾಡುವುದಿಲ್ಲ. ಉದಾಹರಣೆಗೆ "ಗುಗ್ಗಳ"(ಪುರವಂತಿಗೆ) ಎನ್ನುವ ಕಾರ್ಯಕ್ರಮಗಳಲ್ಲಿ ಇವರು ನೃತ್ಯಮಾಡುವುದಿಲ್ಲ. ಅಲ್ಲಿ ವೀರಭದ್ರನ ಕುಣಿತಕ್ಕೆ ಮಾತ್ರ ಅವಕಾಶವಿರುತ್ತದೆ. ಆದಕಾರಣ ತಮ್ಮ ವಾದ್ಯಗಳನ್ನು ಮಾತ್ರ ನುಡಿಸಲು ಅವಕಾಶವಿರುತ್ತದೆ. ಹಾಗಂತ ಸುಮ್ಮನೆ ನಿಂತು ನುಡಿಸುವುದಿಲ್ಲ ನಿಂತಲ್ಲೆ ಭಾವಪೂರ್ಣವಾಗಿ ಮೈ ಕೈ ಜೋಲಿ ಹಾಕುತ್ತ ನುಡಿಸುತ್ತಾರೆ.

**ವೇಷಭೂಷಣ** : ಹಂಡಿಜೋಗಿ, ಗೊಂದಳ ಮತ್ತು ಬುಡ್ಗಜಂಗಮ ಸಮುದಾಯದ ಕಲಾವಿದರಲ್ಲಿ ಕಂಡುಬರುವ ವಿಶೇಷವಾದಂತ ವೇಷಭೂಷಣಗಳು. ಈ ಕೊರಮ ಸಮುದಾಯ ಶಹನಾಯಿ ಮೇಳದ ಕಲಾವಿದರ ವೇಷಭೂಷಣಗಳಲ್ಲಿ ಅಂತ ವಿಶೇಷತೆ ಏನು ಕಂಡುಬರುವುದಿಲ್ಲ. ಆದರೆ ಶಹನಾಯಿ ಮೇಳದಲ್ಲಿರುವ ಎಂಟು ಜನ ಕಲಾವಿದರು ಒಂದೇ ರೀತಿಯ ಉಡುಪುಗಳನ್ನು ಧರಿಸುತ್ತಾರೆ. ಬೇರೆ ಬೇರೆ ಕಲಾಮೇಳಗಳಲ್ಲಿ ಮುಖ್ಯ ಹಾಡುಗಾರ ಅಥವಾ ಮುಖ್ಯಕಲಾವಿದರಿಗೆ ವಿಶೇಷವಾದಂತ ವೇಷಭೂಷಣ ಗಳನ್ನು ಹಾಕಿರುತ್ತಾರೆ.

ಆದರೆ ಶಹನಾಯಿ ಮೇಳದ ಕಲಾವಿದರನ್ನು ನೋಡಿದರೆ ಎಲ್ಲ ಕಲಾವಿದರು ಸರಿಸಮಾನರು ಎಂಬಂತೆ ಕಂಡುಬರುತ್ತದೆ. ಎಲ್ಲ ಕಲಾವಿದರು ತಮ್ಮ ತಮ್ಮ ಕಲೆಯಲ್ಲಿ ಪಾಂಡಿತ್ಯವನ್ನು ಹೊಂದಿದಂತ ಕಲಾವಿದರಿದ್ದಾರೆ. ಆದ್ದರಿಂದ ಎಲ್ಲ ಒಂದೇ ರೀತಿಯ ವೇಷಭೂಷಣಗಳನ್ನು ಧರಿಸಿರುತ್ತಾರೆ. ಇವರ ವೇಷಭೂಷಣಗಳಲ್ಲಿ ಆಡಂಬರ ಕಾಣಸಿಗುವುದಿಲ್ಲ. ಸಾಮಾನ್ಯವಾಗಿ ತಲೆಯ ಮೇಲೆ ಗಾಂಧಿ ಟೋಪಿ ಅಥವಾ ರುಮಾಲ, ಬಿಳಿಯ ಧೋತ್ರ ಮತ್ತು ಜುಬ್ಬದ ತರಹ ಇರುವ ಕಮೀಜ್(ಅಂಗಿ) ಮತ್ತು ಕೊರಳಿಗೆ ಶೆಲ್ಯಾ. ಇವರು ತೊಟ್ಟುಕೊಳ್ಳುವ ಅಂಗಿ ಇದೇ ಬಣ್ಣದ್ದಾಗಿರಬೇಕು ಎಂಬುದು ಏನು ನಿಯಮವಿಲ್ಲ. ಯಾವುದೇ ಬಣ್ಣದ ಅಂಗಿ ಹಾಕಿಕೊಂಡ್ರು ಎಲ್ಲರೂ ಒಂದೆ ಹಾಕ್ತಾರೆ ಆ ಕಾರಣದಿಂದ ಇವರ ವೇಷಭೂಷಣವು ಕೂಡ ಒಂದು ವಿಶೇಷ ರೀತಿಯಲ್ಲಿ ಕಂಡುಬರುತ್ತಾರೆ.

### ೫.೩. ಬುಡ್ಗ ಜಂಗಮ ಸಂಗೀತ

ಹೈದ್ರಾಬಾದ್-ಕರ್ನಾಟಕದ ಜಿಲ್ಲೆಗಳಾದ ಬೀದರ, ಕಲಬುರಗಿ, ಯಾದಗಿರಿ, ಬಳ್ಳಾರಿ, ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳಲ್ಲಿ 'ಬುರ್ರಕಥೆ' ಹೇಳುವ 'ಬುಡ್ಗಜಂಗಮ' ಸಮುದಾಯಗಳು ಕಂಡುಬರುತ್ತದೆ. ಈ ಬುಡ್ಗ ಜಂಗಮ ಸಮುದಾಯದಲ್ಲಿ ಕಂಡುಬರುವ ಹಲವಾರು ಪ್ರದರ್ಶಕಗಳಾದ ಹಗಲು ವೇಷಗಾರಿಕೆ, ಬೈರಾಗಿ ವೇಷ, ಸನ್ಯಾಸಿ, ಜಗಹಗಾಲಿ, ಬಾವಚ, ಕೊಂಡಮಾಮ ಇನ್ನು ಮುಂತಾದ ಕಲೆಗಳಲ್ಲಿ 'ಬುರ್ರಕಥಾ'ಮೇಳವು ಒಂದು. ಈ ಕಲೆ ಮೂಲತಃ ಆಂಧ್ರಪ್ರದೇಶದಿಂದ ಬಂದಂತ ಕಲೆಯಾಗಿದೆ. ಈ ಬುರ್ರಕಥಾ ಕಲೆ ಆಂಧ್ರಪ್ರದೇಶದಲ್ಲಿ ಜನಮನ್ನಣೆಯಿಂದ ಪ್ರಸಿದ್ಧ ಪಡೆದಂತೆ ಸಂಗೀತ ಕಲೆಯಾಗಿದೆ. ಆಂಧ್ರಪ್ರದೇಶದಲ್ಲಿ ಕಂಡುಬರುವ ಅಲೆಮಾರಿ ಸಮುದಾಯದ ಜಂಗಾಲಗರೇ ಈ ಬುರ್ರಕಥೆ ಸಂಗೀತವನ್ನು ಹಲವಾರು ತಲೆಮಾರುಗಳಿಂದ ಹಾಡಿಕೊಂಡು ಬಂದಿದ್ದಾರೆ. ಈ ಜಂಗಾಲಿಗರನ್ನು "ಬುಡ್ಗಜಂಗಮ" ಎಂದು ಕರೆಯುತ್ತಾರೆ.

ಹೈದ್ರಾಬಾದ್-ಕರ್ನಾಟಕದಲ್ಲಿ ಕಂಡುಬರುವ ಬುಡ್ಗಜಂಗಮ ಕಲಾವಿದರು ತಮ್ಮ ಜೀವನ ನಡೆಸುವುದಕ್ಕಾಗಿ ಹೊಟ್ಟೆಪಾಡಿಗೊಸ್ಕರ ಹಾಡಿಕೊಂಡು ಹಲವಾರು ಕಥೆಗಳನ್ನು ಹೇಳಿಕೊಂಡು ಊರಿಂದುರಿಗೆ ಅಲೆಯುವುದರ ಜೊತೆಗೆ ಆಮಂತ್ರಿಸಿದವರ ಮನೆಗೆ ಹೋಗಿ ತಮ್ಮ ಕಲೆ ಪ್ರದರ್ಶನ ಮಾಡುತ್ತಾರೆ.

**ಈ ಬುಡ್ಗಜಂಗಮ ಸಮುದಾಯದವರು ಹೇಳುವ ಕಥೆಗಳು**

೧) **ಹಾಡುಗಾರಿಕೆ:** ಬುಡ್ಗಜಂಗಮ ಕಲಾವಿದರು ಕಿನ್ನಾರಿ ಜೋಗಿ, ಗೊಂಧಳಿ, ನೀಲಗಾರ ಮತ್ತು ಕರೆಪಾಲ ಮೇಳದವರಂತೆ ಪದ್ಯಗಳಂತೆ ಗದ್ಯನು ಅಂದರೆ ಹಾಡುವುದರ ಜೊತೆಗೆ ಹಲವಾರು ಕಥೆಗಳನ್ನು ಹಾಡುತ್ತಾರೆ. ಇವರ ಹಾಡುಗಾರಿಕೆ ತುಂಬ ಸರಳವಾಗಿದ್ದು ಯಾವುದೆ ಶಾಸ್ತ್ರಿಯ ಸಂಗೀತದ ಆಲಾಪನೆಗಳು ಕಂಡುಬರುವುದಿಲ್ಲ ಗೊಂಧಳಿ ಅಥವಾ ಹಂಡಿ ಜೋಗಿಯವರ ಹಾಡುಗಾರಿಕೆ ಪ್ರಾರಂಭದಲ್ಲಿ ಮಧ್ಯದಲ್ಲಿ ಮತ್ತು ಕೊನೆಯಲ್ಲಿ ಹಾಡುತ್ತ ಹಾಡುತ್ತ ಅಲಾಪನೆ ಮಾಡುವುದು ಕಂಡುಬರುತ್ತದೆ. ಈ ಬುರ್ರಕಥೆಯ ಹಾಡುಗಾರಿಕೆಯಲ್ಲಿ ಆಲಾಪನೆ ಕಂಡುಬರುವದಿಲ್ಲ. ಹೆಚ್ಚಾಗಿ ದೃತ್ ಲಯದಲ್ಲಿ ಹಾಡುವುದು ಕಂಡುಬರುತ್ತದೆ. ಬೇರೆ ಬೇರೆ ಸಂಗೀತದ ಹಾಡುಗಾರಿಕೆಯಲ್ಲಿ ಮುಖ್ಯಗಾಯಕ ಹಾಡಿದ ಸಾಲನ್ನು

ಹಿಮ್ಮೇಳ ಗಾಯಕರು ಹಾಡುವುದು ಕಂಡುಬರುತ್ತದೆ. ಆದರೆ ಈ ಬುರ್ರಕಥಾ ಹಾಡುಗಾರಿಕೆಯಲ್ಲಿ ಮುಖ್ಯ ಗಾಯಕ ಹಾಡಿದ ಸಾಲನ್ನು ಹಿಮ್ಮೇಳ ಗಾಯಕರು ಹಾಡುವುದಿಲ್ಲ. ಮುಖ್ಯ ಗಾಯಕ ಹಾಡಿದ ಸಾಹಿತ್ಯದ ಬದಲಾಗಿ 'ತಾನಿತಾನಿ ತಂದಾನ' ಎಂದು ಹಾಡುತ್ತಾರೆ.

ಮುಖ್ಯಗಾಯಕ ಹಾಡುವಾಗ ಒಂದೊಂದು ನುಡಿಯಿಂದ ಹಿಮ್ಮೇಳ ಗಾಯಕ ತಾನಿ ತಂದಾನ ತಂದಾನ ಎಂದು ಹಾಡುತ್ತಾರೆ. ಬಹುಶಃ ಈ ರೀತಿ ಹಾಡುವುದು ವಿಶೇಷವೆಂದು ಹೇಳಬಹುದು.

ಬುರ್ರಕಥಾ ಹಾಡುಗಾರಿಕೆಯಲ್ಲಿ ಕೆಲವು ಕಥೆಗಳು ಹಾಡಿನ ರೂಪದಿಂದಲೇ ನಮಗೆ ದೊರಕುತ್ತವೆ. ಹಾಡುಗಳೇ ಮುಖ್ಯವಾಗಿ ಮಾತು ಹಾಡನ್ನೇ ಅರ್ಥಗಾರಿಕೆ ಎತ್ತಿಕೊಂಡು ಸಂಭಾಷಣೆಗಳನ್ನು ಅನಂತರ ರೂಪಿಸಿಕೊಂಡಿರುವುದು ಕಂಡುಬರುತ್ತದೆ. ಒಟ್ಟಾರೆಯಾಗಿ ಹೇಳಬೇಕೆಂದರೆ ಬುರ್ರಕಥೆ ಮುಕ್ಕಾಲೂ ಪಾಲು ಹಾಡುಗಳಿಂದ ತುಂಬಿರುತ್ತದೆ. ಆದುದರಿಂದ ಇಲ್ಲಿ ಬುರ್ರಕಥೆಯ ಮುಖ್ಯಗಾಯಕ ತನ್ನ ಹಾಡುಗಾರಿಕೆಯ ಮೂಲಕವಾಗಿ ತನ್ನಲ್ಲಿರುವ ಪ್ರತಿಭೆಯನ್ನು ಪ್ರದರ್ಶಿಸಲು ಹೆಚ್ಚು ಅವಕಾಶವಿರುತ್ತದೆ. ಹಾಡುತ್ತಾ ಹಾಡುತ್ತಾ ಮುಖ್ಯಗಾಯಕ ಕಥೆ ಹೇಳುವಾಗ ಕಥೆಯಲ್ಲಿ ಹಲವಾರು ಪಾತ್ರಗಳನ್ನು ತನ್ನಲ್ಲಿ ಅಳವಡಿಸಿಕೊಂಡು ಪಾತ್ರಗಳ ಅನುಗುಣವಾಗಿ ಧ್ವನಿಯಲ್ಲಿ ಏಳಿತರಗಳನ್ನು ಮಾಡುವುದು ಕಂಡುಬರುತ್ತದೆ. ಕಥೆ ಹೇಳುವಾಗ ರಾಜನ ಸನ್ನಿವೇಶ ಬಂದ ಸಂದರ್ಭದಲ್ಲಿ ಜೋರಾಗಿ ಎತ್ತರದ ಧ್ವನಿಯಲ್ಲಿ ಹೇಳುವುದು ಸೇವಕನ ಪಾತ್ರದ ಸನ್ನಿವೇಶ ಬಂದಲ್ಲಿ ಸಣ್ಣದಾದ ಧ್ವನಿಯಲ್ಲಿ ಹೇಳುವುದು ಕಂಡುಬರುತ್ತದೆ. ಇವರು ಹಾಡುವ ಪ್ರತಿಯೊಂದು ಹಾಡಿಗೂ ರಾಗ-ತಾಳವಿರುತ್ತದೆ. ಆದರೆ ಬುರ್ರಕಥಾ ಹಾಡುಗಾರನಿಗೆ ಅಥವಾ ಸೂತ್ರಧಾರನಿಗೆ ರಾಗಗಳ ತಾಳಗಳ ಸ್ಪಷ್ಟ ಪರಿಚಯವಿರುವುದಿಲ್ಲ. ಈ ಸಂಪ್ರದಾಯಬದ್ಧವಾದ ಧಾಟಿಗಳನ್ನು ಗುರುವಿನ ಮುಖಾಂತರ ಕಲಿತವರು ರಾಗ-ತಾಳಗಳನ್ನು ಅರಿತುಕೊಳ್ಳಲು ಹೊದವರಲ್ಲ ಎಂದು ತಿಳಿದುಬರುತ್ತದೆ. ಇವರು ಹೆಚ್ಚಾಗಿ ಎಂಟು ಮಾತ್ರೆ ತಾಳದ ಭಜನ್ ಮತ್ತು ಕೆಹರವಾ, ಆರು ಮಾತ್ರೆಯ ದಾದ್ರ ತಾಳಗಳಲ್ಲಿ ಹಾಡುವುದು ಕಂಡುಬರುತ್ತದೆ. ಈ ಹಾಡುಗಾರಿಕೆಗೆ ತಾವು ಹಾಡುವ ಹಾಡು ಯಾವ ತಾಳ ಎಷ್ಟು ಮಾತ್ರೆ ಎಂದು ತಿಳಿದಿರುವುದಿಲ್ಲ. ಆದರೆ ಅವರು ಹಾಡುವ ಮಾತ್ರೆಗಳು ಲೆಕ್ಕ ಹಾಕಿದರೆ ಅದು ದಾದ್ರ, ಕೆಹರವಾ ಮತ್ತು ಭಜನ ತಾಳ ಎಂದು ತಿಳಿದುಬರುತ್ತದೆ.

ಪ್ರಾರಂಭದಲ್ಲಿ ಯಾವುದಾದರೂ ಒಂದು ಕಥೆಯನ್ನು ತೆಗೆದುಕೊಂಡು ಹದಿನೈದು-ಹದಿನಾರು ಸಾಲುಗಳು ಒಂದೇ ದಾಟಿಯಲ್ಲಿ ಹಾಡುವುದು ಕಂಡುಬರುತ್ತದೆ. ಹದಿನೈದು-ಹದಿನಾರು ಸಾಲುಗಳು ಒಂದೇ ದಾಟಿಯಲ್ಲಿದ್ದರೂ ಕೂಡಾ ಸಾಹಿತ್ಯ ಮಾತ್ರ ಬೇರೆ ಬೇರೆಯಾಗಿರುತ್ತದೆ. ಹೀಗೆ ಒಂದೇ ದಾಟಿಯಲ್ಲಿ ಹಾಡುತ್ತಾ ಹಾಡುತ್ತಾ ಕೊನೆಗೆ ತಾರ ಸಪ್ತಕಕ್ಕೆ ಹೋಗಿ ಮಂದ್ರಕ್ಕೆ ಬಂದು ಕಥೆಯ ಸಾರಂಶವನ್ನು ಬಿಡಿಬಿಡಿಯಾಗಿ ಹೇಳುವುದು ಕಂಡುಬರುತ್ತದೆ. ಹೀಗೆ ಬಿಡಿ ಬಿಡಿಯಾಗಿ ಹೇಳುತ್ತಾ ಹೇಳುತ್ತ ಕೊನೆಯ ಸಾಲನ್ನು ಹಾಡಿನ ಮುಖಾಂತರ ಮುಂದೆ ಕುಳಿತ ಪ್ರೇಕ್ಷಕರಿಗೆ ಸಂದೇಶವನ್ನು ನೀಡುವ ಕೆಲಸ ಈ ಮುಖ್ಯ ಗಾಯಕ ಮಾಡುತ್ತಾನೆ.

**ಮೇಳ** : ಕರ್ನಾಟಕದ ಕರಪಾಲ ಮೇಳದಂತೆ ಹೈದ್ರಾಬಾದ್-ಕರ್ನಾಟಕದಲ್ಲಿ 'ಬುರ್ರಕಥಾ ಮೇಳ' ಕಂಡುಬರುತ್ತದೆ. ಆಂಧ್ರಪ್ರದೇಶದಲ್ಲಿ ಜನಮನ್ನಣೆಯಿಂದ ಪ್ರಸಿದ್ಧಿ ಪಡೆದ ಈ ಬುರ್ರಕಥಾ ಸಂಗೀತ ಆಂಧ್ರ ಮೂಲದಿಂದ ಹೈದ್ರಾಬಾದ್-ಕರ್ನಾಟಕಕ್ಕೆ ಬಂದಂತಹ ಕಲೆಯಾಗಿದೆ.

'ಬುರ್ರ' ಎಂದರೆ ಬುರುಡೆ ಎಂದರ್ಥವಾಗುತ್ತದೆ. ನೋಡುವುದಕ್ಕೆ ಆಕಾರದಲ್ಲಿ ಗುಂಡಾಗಿದ್ದು ಅದರೊಳಗಡೆ ಟೊಳ್ಳಾಗಿರುವಂತಹ ವಸ್ತು ಸೊರೆಬುರುಡೆ. ಬುರ್ರಕಥೆಯನ್ನು ತಂಬೂರಿ ಕಥೆ ಎಂತಲೂ ಕರೆಯುತ್ತಾರೆ. ತಂತಿ + ಬುರ್ರಿ = ತಂಬೂರಿ ಆಗಿದೆ ಎಂದು ತಿಳಿದುಕೊಳ್ಳಲಾಗಿದೆ.

ಈ ಬುರ್ರಕಥಾ ಮೇಳದಲ್ಲಿ ಮೂರು ಜನ ಕಲಾವಿದರು ಕಂಡುಬರುತ್ತಾರೆ. ಮುಖ್ಯ ಗಾಯಕ, ಮತ್ತು ಇಬ್ಬರು ಸಹ ಗಾಯಕರು. ಮುಖ್ಯಗಾಯಕ ಹಾಡುವದು, ಕಥೆ ಹೇಳುವುದು ಅಷ್ಟೇ ಅಲ್ಲದೆ ತಂಬೂರಿಯನ್ನು ಕೊರಳೊಳಗೆ ನೇತು ಹಾಕಿಕೊಂಡು ನುಡಿಸುತ್ತಾ ನಡುವೆ ನಿಂತುಕೊಂಡು ಹಾಡುತ್ತಾರೆ. ಮುಖ್ಯಗಾಯಕನ ಬಲಗಡೆಗೆ ನಿಂತುಕೊಂಡು ಗುಮ್ಮಟೆ ವಾದ್ಯವನ್ನು ನುಡಿಸುತ್ತಾ ಮುಖ್ಯಗಾಯಕನಿಗೆ ಧ್ವನಿಗೂಡಿಸುವ ಕೆಲಸ ಮಾಡಿದರೆ ಮತ್ತೊರ್ವ ಕಲಾವಿದ ಮುಖ್ಯಗಾಯಕನ ಎಡಭಾಗಕ್ಕೆ ನಿಂತುಕೊಂಡು ತಾಳ ಹಾಕುತ್ತಾ ಮುಖ್ಯಗಾಯಕನ ಹಾಡಿಗೆ ಧ್ವನಿಗೂಡಿಸುವ ಕೆಲಸ ಮಾಡುತ್ತಾನೆ. ಒಂದೊಂದು ವೇದಿಕೆಗಳಲ್ಲಿ ನಾಲ್ಕೈದು ಜನ ಕಲಾವಿದರು ಇರುವುದು ಕಂಡುಬರುತ್ತದೆ. ಐದು ಜನ ಕಲಾವಿದರು ಇದ್ದಲ್ಲಿ ಒಬ್ಬ ಮುಖ್ಯಗಾಯಕ(ತಂಬೂರಿಯನ್ನು ಎಡಗೈಯಲ್ಲಿ ಗಗ್ಗರಿ ವಾದ್ಯಗಳನ್ನು ಹಾಕಿಕೊಂಡು ಕೊರಳೊಳಗೆ ತಂಬೂರಿಯನ್ನು ನೇತು ಹಾಕಿ ಕೊಂಡು ಬಲಗೈಯಿಂದ ತಂಬೂರಿಯನ್ನು ನುಡಿಸುತ್ತಾ ನಡುವೆ ನಿಂತು ಹಾಡಿದರೆ ಬಲಗಡೆ ಒಬ್ಬ ಗುಮ್ಮಟೆ ನುಡಿಸುವ ಕಲಾವಿದ ಮತ್ತು ತಾಳ ನುಡಿಸುವ ಕಲಾವಿದ ಇದೇ ತೆರನಾಗಿ) ಜೊತೆಗೆ ಇಬ್ಬರು ಗುಮ್ಮಟೆ ಕಲಾವಿದರು ಇಬ್ಬರು ತಾಳದ ಕಲಾವಿದರು ಕಂಡುಬರುತ್ತಾರೆ. ಈ ಬುರ್ರಕಥಾ




ಮೇಳದಲ್ಲಿ ಮುಖ್ಯಗಾಯಕನ ಪಾತ್ರ ಬಹಳ ಮಹತ್ವದಾಗಿದೆ. ಮುಖ್ಯಗಾಯಕ ತಂಬೂರಿಯನ್ನು ತಮ್ಮ ಧ್ವನಿಗನು ಗುಣವಾಗಿ ಶ್ರುತಿಗೊಳಿಸಿ ಎಡಗೈಯ ಬೆರಳುಗಳಿಗೆ ಗಗ್ಗರಿ ವಾದ್ಯವನ್ನು ಸೇರಿಸಿಕೊಂಡು ಬಲಗೈ ಯಿಂದಲೇ ತಂಬೂರಿಯನ್ನು ನುಡಿಸಿಕೊಂಡು ಹಾಡುವುದರ ಜೊತೆಗೆ ಹಲವಾರು ಕಥೆಗಳನ್ನು ಹೇಳುತ್ತಾರೆ.

**ಬುರ್ರಕಥಾ ಮೇಳದಲ್ಲಿ ಹಾಡುವ ಕಥೆಗಳು**

೧. ಕುಮಾರರಾಮನ ಕಥೆ ೨. ಬಾಲನಾಗಮ್ಮ ಕಥೆ, ೩. ಶ್ರೀ ಮಾಳ ಕಥೆ, ೪. ಹೇಮರೆಡ್ಡಿ ಮಲ್ಲಮನ ಕಥೆ, ೫. ಕಾಂಬೋಜಿರಾಜನ ಕಥೆ, ೬. ಪೆದ್ದ ಬೊಟ್ಟಿಲರಾಜ, ೭. ಮುಗ್ಗುರು ಮರುಟಿಲು, ೮. ಕಾಮಮ್ಮ ಕಥೆ, ೯. ಕಾಟಮರಾಜ ಕಥೆ, ೧೦. ಪರ್ಯಾಯ ಪಾಪುಡು, ೧೧. ದೇಶಂಗರಾಜನ ಕಥೆ, ೧೨. ಬಲ್ಲಾಳ ರಾಜನ ಕಥೆ, ೧೩. ಅಪರೂಪ ರಾಜರ ಕಥೆ, ೧೪. ಅರಮ ಮೇಘ ಮಹಾರಾಜ ಕಥೆ, ೧೫. ಅಲ್ಲಿ ರಾಣಿ ಕಥೆ, ೧೬. ಅಡಬಿಡ್ಡ ಶಂಕರಮ್ಮ ಕಥೆ, ೧೭. ಅರುಟ್ಲ ರಾಮಚಂದ್ರ ಕಥೆ, ೧೮. ಆರು ಮರಾಟೀಲು ಕಥೆ, ೧೯. ಈಡಿಗೋಲ್ಲ ಸತ್ಯಮ್ಮ ಕಥೆ, ೨೦.

ಯರಕುಲ ಮಾಚಾಳ ಕಥೆ, ೨೧. ಯಲ್ಲಮ್ಮ ಕಥಾ, ೨೨. ಏಕ ಚಕ್ರವರ್ತಿ ಕಥಾ, ೨೩. ಕನಕಧಾರ ಕಥಾ, ೨೪. ಕಮಲ ಸಂಗಯ್ಯ ಕಥಾ, ೨೫. ಕಮ್ಮವಾರಿ ಪಡಿತಿ ಕಥಾ, ೨೬. ಕಲಿಯುಗ ಪನ್ನಕಥಾ, ೨೭. ಕಾಂತಾಮಲೆ ಕಥಾ, ೨೮. ಕಾಶಿ ಮಹಾರಾಜಕಥಾ, ೨೯. ರುಂಬಂ ಚೆನ್ನರೆಡ್ಡಿ ಕಥಾ, ೩೦. ಕುಸು ಕೋಮಲ ಕಥಾ, ೩೧. ಗಾರ್ಲಮುನಿ ಕೋಟ ಕಥಾ, ೩೨. ಗೊಲಸು ಮಹಾರಾಜ ಕಥಾ, ೩೩. ಜಗೊಂಡ್ಗ ಅಂಜ್ಯೆಯವ ಕಥಾ, ೩೪. ಚಿನ್ನಮ್ಮನ ಕಥಾ, ೩೫. ಜರಾಸಂದುರ ಕಥಾ, ೩೬. ದೇಶಿಂಗ ಮಹಾರಾಜ ಕಥಾ, ೩೭. ನರಕಾಸುರ ವಧಾ ಕಥಾ, ೩೮. ನಲ್ಲ ಚಕ್ರವರ್ತಿ ಕಥಾ, ೩೯. ನಲ್ಲತಂಗ ಮಹಾರಾಜ ಕಥಾ, ೪೦. ನವಬೋಜ ರಾಜ ಕಥಾ, ೪೧. ನಾಗಿರೆಡ್ಡಿ ಕಥಾ, ೪೨. ನೀಲಸೇನಾ ನೀಲರೂಪ ಕಥಾ, ೪೩. ಪಂಚಪಾಂಡವುಲ ಕಥಾ, ೪೪. ಪೂರ್ವ ಚಕ್ರವರ್ತಿ ಕಥಾ, ೪೫. ಬಂಗಾರು ತಿಮ್ಮರಾಜ ಕಥಾ, ೪೬. ಬಲಗೂರಿ ಕೊಂಡಯ್ಯ ಕಥಾ, ೪೭. ಬೀರಪ್ಪ ಕಥಾ, ೪೮. ಬುಡ್ಗ ವೆಂಗಳರೆಡ್ಡಿ ಕಥಾ, ೪೯. ಬೊಬ್ಬಿಲಿ ಯುದ್ಧಂ ಕಥಾ, ೫೦. ಬಬ್ರುವಾಹನ ಕಥಾ, ೫೧. ಮಂದಾತ ಕಥಾ, ೫೨. ಮುದ್ದು ರಾಮನ ಕಥಾ, ೫೩. ಮುಗು ಮೋಹನ ಮಹಾರಾಜ ಕಥಾ, ೫೪. ರತ್ನಸೇನಾ ಮಹಾರಾಜ ಕಥಾ, ೫೫. ರಾಜ ರಾಂಪುಲಕ ಕಥಾ, ೫೬. ರಾಮುಲಮ್ಮ ಲಂಬಾಡಿ ಕಥಾ, ೫೭. ಲಕ್ಷ ಕೋಟಿ ವೀರಲು ಕಥಾ, ೫೮. ಲಕ್ಷ್ಮಮ್ಮ ಕಥಾ, ೫೯. ಒಕ್ಕನೂರಿ ವೆಂಕಟರೆಡ್ಡಿ ಕಥಾ, ೬೦. ವೀರ ಬಲವಂತ ಕಥಾ, ೬೧. ವೇಣಿ ನಾಗಮ್ಮ ಕಥಾ, ೬೨. ಶ್ಕು ಮಹಾರಾಮನ ಕಥಾ, ೬೩. ಶಿವಕುಮಾರುಣಿ ಕಥಾ, ೬೪. ಶೀಲಮೂರಿ ಚನ್ನಮ್ಮ, ೬೫. ಸದಾಶಿವಾರೆಡ್ಡಿ ಕಥಾ, ೬೬. ಸನ್ಯಾಸಮ್ಮ ಕಥಾ, ೬೭. ಸರ್ವಂ ಮಹಾರಾಯುಡು ಕಥಾ, ೬೮. ಸಾರಂಗದಾರ ಕಥಾ, ೬೯. ಸಿರತೂಂಡ ಮಹಾರಾಜ ಕಥಾ, ೭೦. ಸುಗುಗಾವರ್ತಿ ಕಥಾ, ೭೧. ಸುಬ್ಬಾರೆಡ್ಡಿ ಕಥಾ, ೭೨. ಸುರಸಿಂಧು ಕಥಾ, ೭೩. ಸೂರ್ಯಚಂದ್ರರಾಜ ಕಥಾ, ೭೪. ಹರಿಚಂದ್ರ ಕಥಾ, ೭೫. ಅಲಕುರು ಬಂಟರ ಕಥಾ, ೭೬. ಕಲಿಚಳ್ಳ ನರಸಿಂಹರೆಡ್ಡಿ ಕಥಾ, ೭೭. ಚಿನ್ನಪ್ಪರೆಡ್ಡಿ ಕಥಾ, ೭೮. ಪಿನಾಯ ಪಾಪಿರೆಡ್ಡಿ ಕಥಾ, ೭೯. ಬಟ್ಟೆ ವಿಕ್ರಮಾಕರ ಕಥೆ, ೮೦. ಸವಾರಮ್ಮ ಕಥೆ, ೮೧. ನಂದರಿ ಯಂಕಣ್ಣ ಕಥೆ, ೮೨. ಸರೋಜಮ್ಮ ಕಥಾ, ೮೩. ಮೋದಯಿ ರುಕ್ಮಂದರ ಕಥೆ, ೮೪. ಈಡಿಗ ದೇವಮ್ಮ ಕಥಾ, ೮೫. ದ್ಯೆವಾದೀನಂ ಕಥೆ, ೮೬. ಲಕ್ಷ್ಮಣ ರಾಯರ ಕಥಾ, ೮೭. ಚಂದ್ರಕಾಂತ ಕಥೆ, ೮೮. ಕೃಷ್ಣಗೊಲ್ಲ ಕಥಾ, ೮೯. ಶಾಗಮಲ್ಲಯ್ಯ ಕಥಾ, ೯೦. ಪಂದಿರಾನ ಕಥಾ, ೯೧. ಗದ್ವಾಲ ಸೋಂಬೂಪ ಮಹಾರಾಜ ಕಥಾ, ೯೨. ಸರದಾರ ಪಾಪರಾಯುಡು ಕಥಾ, ೯೩. ನಳಮಹಾರಾಜ ಕಥಾ, ೯೪. ತಿಮ್ಮರಾಜನ ಕಥೆ ಮತ್ತು ೯೫. ಗಾಂಧಾರಿ ಕಥೆ.

ಈ ಮೇಲಿನ ಒಂದೊಂದು ಕಥೆಗಳು ಎರಡು-ಮೂರು ತಾಸುಗಳಲ್ಲಿ ಹಾಡುವಂತಹ ಕಥೆಗಳಲ್ಲ. ಒಂದೊಂದು ಕಥೆಗಳಿಗೂ ಒಂದೊಂದು ರಾತ್ರಿ ಬೇಕಾಗುತ್ತದೆ.(ಈ ಕಂಪ್ಯೂಟರ್ ಯುಗದಲ್ಲಿ ಒಂದೊಂದು ರಾತ್ರಿ ಕುಳಿತುಕೊಂಡು ಕಥೆಗಳನ್ನು ಕೇಳುವ ತಾಳ್ಮೆ ಜನರಲ್ಲಿ ಇಲ್ಲದ ಕಾರಣ ಮುಖ್ಯಗಾಯಕನ ಚಾಣಕ್ಷ್ಯತನದಿಂದ ೨೪ ಗಂಟೆಗಳವರೆಗೆ ಹಾಡುವ ಕಥೆಯನ್ನು ಎರಡು-ಮೂರು ತಾಸುಗಳಲ್ಲಿ ಮುಗಿಸುವುದು ಕಂಡುಬರುತ್ತದೆ. ಇಡೀ ರಾತ್ರಿಯವರೆಗೆ ಈ ಕಥೆಗಳು ಕೇಳಿ ಕೇಳಿ ಪ್ರೇಕ್ಷಕರು ಬೇಜಾರು ಮಾಡಿಕೊಳ್ಳಬಾರದು ಮತ್ತು ನಿದ್ರೆಗೆ ಜಾರಬಾರದೆಂದು ಈ ಕಥೆಗಳ ನಡುವೆ ಹಾಸ್ಯಮಯವಾದಂತಹ

ಕಥೆಗಳು ಹಾಡುವುದು ಕಂಡುಬರುತ್ತದೆ. ಇಷ್ಟೆಲ್ಲ ಕಥೆಗಳು ಯಾವುದೇ ಪುಸ್ತಕದ ಸಹಾಯವಿಲ್ಲದೆ ಅನೇಕ ರಾತ್ರಿಯವರೆಗೆ ಹಾಡುವಂತಹ ಕಲ್ಪನಾ ಶಕ್ತಿ ಈ ಬುರ್ರಕಥಾ ಮೇಳದ ಗಾಯಕರಲ್ಲಿ ಕಂಡುಬರುತ್ತದೆ.

ಬುಡ್ಗ ಜಂಗಮ ಕಲಾವಿದರು ಹೊಟ್ಟೆಪಾಡಿಗೋಸ್ಕರ ಒಂದು ಊರಿನಿಂದ ಮತ್ತೊಂದೂರಿಗೆ ಅಲೆದಾಡಿ ಭಿಕ್ಷೆ ಬೇಡುವ ಸಂದರ್ಭದಲ್ಲಿ ಸಣ್ಣಪುಟ್ಟ ಹಾಡುಗಳನ್ನು ಹಾಡುವುದು ಕಂಡುಬರುತ್ತದೆ. ಆದರೆ ಆಮಂತ್ರಿಸಿದವರ ಮನೆಯಲ್ಲಿ ಮಾತ್ರ ಕಥೆಗಳನ್ನು ಹಾಡುವುದು ಕಂಡುಬರುತ್ತದೆ. ಇವರ ಕಥೆಗಳನ್ನು ಕೇಳಲ್ಲೆಂದೇ ಬುರ್ರಕಥಾ ಕಲಾವಿದರನ್ನು ಆಮಂತ್ರಿಸಿದ್ದಕ್ಕಾಗಿ ಇವರು ಹಲವಾರು ಕಥೆಗಳನ್ನು ಇಡೀ ರಾತ್ರಿಯವರೆಗೆ ಹಾಡುವುದು ಕಂಡುಬರುತ್ತದೆ.

ಈ ಬುರ್ರಕಥಾ ಮೇಳಗಳಲ್ಲಿ ಪುರುಷರು ಮತ್ತು ಸ್ತ್ರೀಯರು ಹಾಡುವುದು ಕಂಡುಬರುತ್ತದೆ. ಆದರೆ ಹೈದ್ರಾಬಾದ್-ಕರ್ನಾಟಕ ಬುರ್ರಕಥಾ ಮೇಳದಲ್ಲಿ ಸ್ತ್ರೀಯರೆ ಹೆಚ್ಚಾಗಿ ಹಾಡುವುದು ಕಂಡುಬರುತ್ತದೆ. ಮತ್ತು ಈ ಮೇಳದಲ್ಲಿ ಮುಖ್ಯಗಾಯಕ ಪಾತ್ರದಲ್ಲಿ ಸ್ತ್ರೀಯರೇ ಹೆಚ್ಚಾಗಿ ಹಾಡುವುದು, ಕಥೆ ಹೇಳುವುದು ಕಂಡುಬರುತ್ತದೆ. ಪುರುಷರು ಹಿಮ್ಮೇಳ ಗಾಯಕರಾಗಿರುವುದು ಕಂಡುಬರುತ್ತದೆ. ಹೈದ್ರಾಬಾದ್-ಕರ್ನಾಟಕದ ಬಳ್ಳಾರಿ ಜಿಲ್ಲೆಯ ಸಂಡೂರು ತಾಲೂಕಿನ ದರೋಜಿ ಗ್ರಾಮದ ನಾಡೋಜ ದರೋಜಿ ಈರಮ್ಮ ಮತ್ತು ಇವರ ಸಹೋದರಿ ಕರ್ನಾಟಕ ರಾಜ್ಯೋತ್ಸವ ಪುರಸ್ಕೃತೆ ಶಿವಮ್ಮ ದರೋಜಿ, ಇವರು ಬುರ್ರಕಥೆ ಸಂಗೀತದ ಪ್ರಸಿದ್ಧ ಗಾಯಕೀಯರು.

ಬುರ್ರಕಥಾ ಮೇಳ ನಡೆಸುವುದಕ್ಕೆ ಒಂದು ನಿರ್ದಿಷ್ಟವಾದಂತಹ ವೇದಿಕೆ ಇದ್ದರು ಅಥವಾ ಇಲ್ಲದಿದ್ದರೂ ನಡೆಯುತ್ತದೆ. ಸಮತಟ್ಟದ ಅಗಲವಾದ ಎತ್ತರಾದಂತಹ ಜಾಗ ಇದ್ದರೆ ಸಾಕು. ಅದೇ ವೇದಿಕೆಯನ್ನಾಗಿ ಮಾಡಿಕೊಂಡು ತಮ್ಮ ಸಂಗೀತ ಕಚೇರಿ ಪ್ರಾರಂಭ ಮಾಡುತ್ತಾರೆ. ಪ್ರಾರಂಭದಲ್ಲಿ ದೇವರ ಸ್ತುತಿಯೊಂದಿಗೆ ಪ್ರಾರಂಭ ಮಾಡಿ ನಂತರ ಹಲವಾರು ಕಥೆಗಳನ್ನು ಹಾಡಲು ಪ್ರಾರಂಭಿಸುತ್ತಾರೆ. ಇವರಲ್ಲಿನ ಹಾಡು, ಕಥೆ, ಹಾಸ್ಯಮಯವಾದಂತಹ ಕಥೆಗಳನ್ನು ಹೇಳುವುದು ನೋಡಿದರೆ ಗೊಂದಲ ಮೇಳ ಮತ್ತು ಹಂಡಿಜೋಗಿ ಮೇಳದವರನ್ನು ಹೋಲುತ್ತದೆ. ಗೊಂದಳಿ ಮತ್ತು ಹಂಡಿಜೋಗಿಯರ ಮೇಳದಲ್ಲಿ ಕೂಡ ಮುಮ್ಮೇಳ ಮತ್ತು ಹಿಮ್ಮೇಳ ಕಂಡುಬರುತ್ತದೆ.

ಮುಮ್ಮೇಳ ಹಾಡಿದ ಹಾಡನ್ನು ಹಿಮ್ಮೇಳ ಗಾಯಕ ಹಾಡುವುದು ಕಂಡುಬರುತ್ತದೆ. ಮುಮ್ಮೇಳ ಕಥೆ ಹೇಳುವಾಗ ಹಿಮ್ಮೇಳ ಗಾಯಕ ಆಹ್ಹಾ, ಹಾಹಾ, ಹೌದಪ್ಪ, ಮತ್ತೇ ಏನಾಯ್ತಿಪ್ಪ, ಮುಂದೇನಾಯ್ತಿಪ್ಪಾ ಈ ರೀತಿಯಾಗಿ ಧ್ವನಿಗೂಡಿಸುವ ಕೆಲಸ ಮಾಡುತ್ತಾರೆ. ದೀಪಚಂದಿ, ದಾದ್ರ, ಕೆಹರವಾ ಮತ್ತು ಭಜನ ತಾಳಗಳಲ್ಲಿ ಮಧ್ಯ ಮತ್ತು ದೃತ್ ಲಯದಲ್ಲಿ ಹಾಡುವುದು ಕಂಡುಬರುತ್ತದೆ. ಆದರೆ ಬುರ್ರಕಥೆ ಸಂಗೀತದಲ್ಲಿಯೂ ಕೂಡ ಮುಮ್ಮೇಳ ಮತ್ತು ಹಿಮ್ಮೇಳ ಕಂಡುಬರುತ್ತದೆ. ಇವರು ಹೆಚ್ಚಾಗಿ ದಾದ್ರ, ಕವಾಲಿ(ಭಜನ) ಮತ್ತು ಕೆಹರವಾ ತಾಳದಲ್ಲಿ ದೃತ್‌ಲಯದಲ್ಲಿ ಲಯಕಾರಿಯಲ್ಲಿ ಹಾಡುವುದು ಕಂಡುಬರುತ್ತದೆ. ಇಲ್ಲಿ ಮುಖ್ಯ ಗಾಯಕ ಹಾಡಿದ ಸಾಲನ್ನು ಹಿಮ್ಮೇಳ ಗಾಯಕ ಹಾಡುವುದಿಲ್ಲ. ಹಾಡಿನ ಬದಲಾಗಿ 'ತಂದಾನ ತಾನಿ ತಂದಾನ' ಎಂದು ಹಾಡುತ್ತಾರೆ. ಮುಖ್ಯಗಾಯಕರ ಹಾಡುವ ಒಂದೊಂದು ನುಡಿಗೂ ಹಿಮ್ಮೇಳ ಗಾಯಕ 'ತಾನಿ ತಂದಾನ, ತಾನಿ ತಂದಾನಿ' ಎಂದು ಹಾಡುತ್ತಾರೆ.

ಎಂಟು ಮಾತ್ರೆಯ ಕೆಹರವಾ ಅಥವಾ ಭಜನ ತಾಳಗಳಲ್ಲಿ ಹಾಡುತ್ತಿರುವಾಗ ಮುಖ್ಯಗಾಯಕ ನಾಲ್ಕು ಮಾತ್ರೆಗಳನ್ನು ಹಾಡಿದರೆ ಹಿಮ್ಮೇಳ ಗಾಯಕ ರಾಮಯ್ಯೋ 'ತಂದನಾ' ಎಂದು ನಾಲ್ಕು ಮಾತ್ರೆಗಳು ಪೂರ್ತಿ ಮಾಡುತ್ತಾನೆ. ಒಂದು ವೇಳೆ ಮುಖ್ಯಗಾಯಕ ಎಂಟು ಮಾತ್ರೆಗಳವರೆಗೆ ಹಾಡಿದರೆಂದರೆ ಹಿಮ್ಮೇಳ ಗಾಯಕ 'ತಾನಿ ತಾನಿ ತಂದನಾ ರಾಮಯ್ಯೋ ತಂದಾನ' ಎಂದು ಎಂಟು ಮಾತ್ರೆಗಳವರೆಗೂ ಹಾಡುತ್ತಾರೆ. ಈ ರೀತಿಯಾಗಿ ಹಾಡಿ ನಿಂತಮೇಲೆ ಮುಖ್ಯಗಾಯಕ ಕಥೆಗಳನ್ನು ಹೇಳಲು ಪ್ರಾರಂಭ ಮಾಡುತ್ತಾನೆ. ಒಂದೊಂದು ನುಡಿಗೂ ಹಿಮ್ಮೇಳ ಗಾಯಕ ಹಾ... ಹಾಹಾ.. ಎಂದು ಧ್ವನಿಗೂಡಿಸುವ ಕೆಲಸ ಮಾಡುತ್ತಾರೆ.

## ಬಾಲನಾಗಮ್ಮ

**ರಾಗ: ಬಿಹಾರಿ ಮಿಶ್ರ** **ತಾಳ: ದಾದ್ರಾ**

**ಹಾಡು**

ಮು.ಗಾ. : ಶ್ರೀಹರಿ ಬಂತಮ್ಮ ಬಾಲನಾಗಮ್ಮSSSSS

ಹಿ.ಗಾ. : ತಂದನಾ ತಾನ ತಂದನಾನಾ

ಮು.ಗಾ. : ಬಾಣತಿ ಮುಗಿ ಬಾವಜಿ ನಡೆದು ಬಂದಾನೆSSSSS

ಹಿ.ಗಾ. : ತಂದನಾ ತಾನ ತಂದನಾನಾ

ಮು.ಗಾ. : ಬಾವುಜಿ ಗಣ ಗಗನ ಗಂಟಿ ಬಾರಿಸಿದನೆSSSSS

ಹಿ.ಗಾ. : ತಂದನಾ ತಾನ ತಂದನಾನಾ

**ಕಥೆ**

ಮುಮ್ಮೇಳ : ಬಾಣತಿ ಮನಿಗಿ ಬಾವಾಜಿ ನಡೆದು ಬಂದು
ಗಣ ಗಣ ಗಂಟೆಯನ್ನು ಬಾರಿಸಿ
ದೇವತಾರು ಶಂಖವನ್ನು ಊದಿ

ಹಿಮ್ಮೇಳ : ಹ್ಞಾ

ಮುಮ್ಮೇಳ : ತಾಯಿ ಧರ್ಮವನ್ನು ನೀಡು ಎಂದು ಕೂಗಿದ

ಹಿಮ್ಮೇಳ : ಹ್ಞಾ

ಮುಮ್ಮೇಳ : ತಾಯಿ ಮೂರು ಮಾತು ಕಿವಿಲೆ ಕೇಳಿ

ಹಿಮ್ಮೇಳ : ಹ್ಞಾ

ಮುಮ್ಮೇಳ : ಹೊರಗೆ ನಡೆದು ಬರಲಿಲ್ಲ

ಹಿಮ್ಮೇಳ : ಹ್ಞಾ

ಮುಮ್ಮೇಳ : ಪಟ್ಟೆ ಹೊರಸಿನ ಮ್ಯಾಂಕುಂತು ನಾಗಮ್ಮ
ಏನೆಂದು ಹೇಳುತಾಳ

ಹಿಮ್ಮೇಳ : ಹ್ಞಾ

ಮುಮ್ಮೆಳ : ಅಪ್ಪ ಹಡೆದ ಬಾಣತಿ ನಾನಿದ್ದೀನಿ
ಅಡಕಲ ಗಡಗಿ ಮುಟ್ಟಬಾರದು
ಹೊಸ ಗಂಡರ ಮಾರಿ ನೋಡಬಾರದು

ಹಿಮ್ಮೆಳ : ಹ್ಞಾ

ಮುಮ್ಮೆಳ : ಮೈಲಿಗೆ ಮುಡಚಟ್ಟಲೆ ನಾನಿದ್ದೀನಿ

ಹಿಮ್ಮೆಳ : ಹ್ಞಾ

ಮುಮ್ಮೆಳ : ಆರು ಮಂದಿ ಅಕ್ಕಂದಿರು ಸಮುದ್ರ
ಜಳಕಕ್ಕೆ ಹೋಗಿರುವರು

ಹಿಮ್ಮೆಳ : ಹ್ಞಾ

ಮುಮ್ಮೆಳ : ತಾಸು ಗಳಿಗೆ ತಡಮಾಡಿ ಬಂದರು
ಈ ಮನಿಗಿ ಬರುತಿರುವರು
ಅವರ ಕೈಲೆ ಧಮ ನೀಡಸ್ತಿನಪ್ಪ ಜಂಗಮಯ್ಯ ಅಂದಳು

ಹಿಮ್ಮೆಳ : ಹ್ಞಾ

ಮುಮ್ಮೆಳ : ಅಮ್ಮ ಜಂಗಮ ನೋಡಿ ಏನಂತಾನ

ಹಿಮ್ಮೆಳ : ಏನಂತಾನ

ಮುಮ್ಮೆಳ : ತಾಸು ಘಳಿಗೆ ಕುಂದ್ರಲಕ ನಿಂದ್ರಲಾಕ ನಾನು ಬಂದಿಲ್ಲ

ಹಿಮ್ಮೆಳ : ಹ್ಞಾ

ಮುಮ್ಮೆಳ : ನೀಡಿದ್ರೆ ನೀನೆ ನೀಡಬೇಕು

ಹಿಮ್ಮೆಳ : ಹ್ಞಾ

ಮುಮ್ಮೆಳ : ತಾಸು ಗಳಿಗೆ ನೀವು ತಡ ಮಾಡಿದ್ರೆ

ಹಿಮ್ಮೆಳ : ಹ್ಞಾ

ಮುಮ್ಮೆಳ : ನಿನಗೆ ಕೆಟ್ಟ ಶಾಪ ಕೊಟ್ಟು ಹೋಗ್ತಿನಿ ಅಂದ

ಹಿಮ್ಮೆಳ : ಹ್ಞಾ

ಮುಮ್ಮೆಳ : ಶಿವ ಶಿವ ಅಂತ ಕಣ್ಮುಚ್ಚಿದಳು

ಹಿಮ್ಮೆಳ : ಹ್ಞಾ

ಮುಮ್ಮೆಳ : ಅಪ್ಪ ಹನ್ನೆರಡು ವರ್ಷನಂತರ ನನಗೊಬ್ಬ
ಮಗ ಹುಟ್ಟಿರುವನು

ಹಿಮ್ಮೆಳ : ಹ್ಞಾ

ಮುಮ್ಮೆಳ : ನನಗೆ ಕೆಟ್ಟ ಶಾಪ ನೀನು ಕೊಡಬೇಡ

ಹಿಮ್ಮೆಳ : ಹ್ಞಾ

ಮುಮ್ಮೆಳ : ನಾನೆ ಎದ್ದುಬಂದು ಧರ್ಮ ನೀಡುತ್ತೇನೆ ಎಂದಳು

ಹಿಮ್ಮೆಳ : ಹ್ಞಾ

ಮುಮ್ಮೆಳ : ತಾಯಿ ಬಚ್ಚಲಕ ನಡೆದು ಬಂದು

ಹಿಮ್ಮೆಳ : ಹ್ಞಾ

**ಹಾಡು**

ಮು.ಗಾ. : ತಣ್ಣಿರೊಳಗ ತಾಯಿ ಜಳಕ ಮಾಡ್ಯಾಳೆsssss

ಹಿ.ಗಾ. : ತಂದನಾ ತಾನ ತಂದನಾನಾ

ಮು.ಗಾ. : ನಾಗಮ್ಮ ಮಡಿಯ ಪೀತಾಂಬರsssss
ಸಿರಿ ವುಟ್ಯಾಳೆ

ಹಿ.ಗಾ. : ತಂದನಾ ತಾನ ತಂದನಾನಾ

ಮು.ಗಾ. : ಬಾಣತಿ ಮುತ್ತು ಹಾಕಿದ ಕುಬುಸ ತೊಟ್ಯಾಳೆsssss

ಹಿ.ಗಾ. : ತಂದನಾ ತಾನ ತಂದನಾನಾ

**ಕಥೆ**

ಮುಮ್ಮೆಳ : ಮಡಿಯ ಪೀತಾಂಬರ ಸೀರೆಯುಟ್ಟು
ಮುತ್ತು ಹಾಕಿದ ಕುಬುಸ ತೊಟ್ಟು

ಹಿಮ್ಮೆಳ : ಹ್ಞಾ

ಮುಮ್ಮೆಳ : ಕೈಯಲ್ಲಿ ಹೊಸ ಮರ ಹಿಡಿದುಕೊಂಡು

ಹಿಮ್ಮೆಳ : ಹ್ಞಾ

ಮುಮ್ಮೆಳ : ತಲೆತುಂಬ ವಲಸುಗಾಯಿಕೊಂಡು

ಹಿಮ್ಮೆಳ : ಹ್ಞಾ

ಮುಮ್ಮೆಳ : ಜಂಗಮ ಅಂತ ತಾನು ತಿಳಿದುಕೊಂಡು

ಹಿಮ್ಮೆಳ : ಹ್ಞಾ

ಮುಮ್ಮೆಳ : ಐದು ಸೇರಿ ಅಕ್ಕಿ ಹಾಕಿಕೊಂಡು

ಹಿಮ್ಮೆಳ : ಹ್ಞಾ

ಮುಮ್ಮೆಳ : ಲಿಂಗವಸ್ತ್ರ ಕಾಣಿಕೆ ಇಟ್ಟಳು

ಹಿಮ್ಮೆಳ : ಹ್ಞಾ

ಮುಮ್ಮೆಳ : ಐದು ರೂಪಾಯಿ ಕಾಣಿಕೆ ಇಟ್ಟು

ಹಿಮ್ಮೆಳ : ಹ್ಞಾ

ಮುಮ್ಮೆಳ : ಕೈಯಲ್ಲಿ ಮರ ಎತ್ತಿಕೊಂಡು

ಹಿಮ್ಮೆಳ : ಹ್ಞಾ

**ಹಾಡು**

ಮು.ಗಾ. : ಧರ್ಮ ತಂದಿನಿ ಜಂಗಮsssss

ಹಿ.ಗಾ. : ತಂದನಾ ತಾನ ತಂದನಾನಾ

ಮು.ಗಾ. : ಅರೆ ಬಾಣಚೋತು ಬಾಲನಾಗಮ್ಮsssss

ಹಿ.ಗಾ. : ತಂದನಾ ತಾನ ತಂದನಾನಾ

**ಕಥೆ**

ಮುಮ್ಮೆಳ : ಏ ಬಾಣತಿ ಹೊಸ್ತಿಲದೊಳಗ ನೀನು ನೀಡಬಾರದು

ಹಿಮ್ಮೆಳ : ಹ್ಞಾ

ಮುಮ್ಮೆಳ : ಹೊಸ್ತಿಲದೊಳಗೆ ನಾನು ಒಯ್ಯಬಾರದು

ಹಿಮ್ಮೆಳ : ಹ್ಞಾ

ಮುಮ್ಮೆಳ : ಹೊಸ್ತಿಲದಾಟಿ ಹೊರಗೆ ಬಂದು ನೀಡೆ ನಾಗಮ್ಮ ಅಂತ ಕರದ

ಹಿಮ್ಮೆಳ : ಹ್ಞಾ

ಮುಮ್ಮೆಳ : ಅಪ್ಪ ನನ್ನ ಗಂಡ ಚಂದ್ರವದರಾಜ

ಹಿಮ್ಮೆಳ : ಹ್ಞಾ

ಮುಮ್ಮೆಳ : ನನ್ನ ಬಿಟ್ಟು ಲಡಾಯಿಕಿ ಹೋಗಮುಂದ
ರಕ್ತಮಂಡಲ ತಲಬಾಕಲಿಗಿ ಬರೆದಿರುವನು
ಅರಿತು ಮರೆತು ತಲಬಾಕಲ ದಾಟಿ ಹೊರಗೆ ಬಂದರೆ

ಹಿಮ್ಮೆಳ : ಹ್ಞಾ

ಮುಮ್ಮೆಳ : ಏನರ್ಥ ರಕ್ತಕಾರಿ ನಾನು ಸಾಯಿತಿನಿ

ಹಿಮ್ಮೆಳ : ಹ್ಞಾ

ಮುಮ್ಮೆಳ : ಇಲ್ಲೆ ಹಿಡಿಯಪ್ಪ ಧರ್ಮ ಎಂದಳು

ಹಿಮ್ಮೆಳ : ಹ್ಞಾ

ಮುಮ್ಮೆಳ : ಐದು ಹಳ್ಳ ಮಂತ್ರಿಸಿ ತಲಬಾಕಲು ಮ್ಯಾಲೆ ಒಗೆದ

ಹಿಮ್ಮೆಳ : ಹ್ಞಾ

ಮುಮ್ಮೆಳ : ರಕ್ತಮಂಡಲ ಮಾಯಾಗಿ ಹೋಯಿತು
ಐದು ಸೇರಕ್ಕಿ ಜೋಳಗ್ಯಾಗಿ ಹಾಕಿಕೊಂಡು

ಹಿಮ್ಮೆಳ : ಹ್ಞಾ

ಮುಮ್ಮೆಳ : ಐದು ರೂಪಾಯಿ ಕಿಸ್ಯಾದಾಗ ಇಟ್ಕೊಂಡು

ಹಿಮ್ಮೆಳ : ಹ್ಞಾ

ಮುಮ್ಮೆಳ : ಪತಿವ್ರತೆ ತಾಯಿ ಧರ್ಮ ನೀಡಿ ತಿರುಗಿ ಹೋಗುವಾಗ

ಹಿಮ್ಮೆಳ : ಹ್ಞಾ

ಮುಮ್ಮೆಳ : ಮಂತ್ರಿಸಿ ಬೆಳ್ಳಿ ಬಟ್ಲ ತಲಿಮ್ಯಾಲೆ ಇಟ್ಟ

ಹಿಮ್ಮೆಳ : ಹ್ಞಾ

ಮುಮ್ಮೇಳ : ಪತಿವ್ರತೆ ದಗ್ಗನೆ ಉರಿದು ಬುದಿಯಾಗಿ ಬಿದ್ದಳು

ಹಿಮ್ಮೇಳ : ಹ್ಞಾ

ಮುಮ್ಮೇಳ : ಬೂದಿ ಎಲ್ಲ ಕುಂಪೆ ಮಾಡಿ ಬೆಳ್ಳಿ ಬಟ್ಲ ತಲೆಮ್ಯಾಲೆ ಇಟ್ಟ

ಹಿಮ್ಮೇಳ : ಹ್ಞಾ

ಮುಮ್ಮೇಳ : ದಗ್ಗನೆ ಉರಿದು ಕರಿನಾಯಿಯಾಗಿ ಎದ್ದು ನಿಂತಳು

ಹಿಮ್ಮೇಳ : ಹ್ಞಾ

ಮುಮ್ಮೇಳ : ಕೊರಳಲ್ಲಿ ಸರಪಳಿ ಹಚ್ಚುಕೊಂಡು

ಹಿಮ್ಮೇಳ : ಹ್ಞಾ

**ಹಾಡು**

ಮು.ಗಾ. : ಇದು ರಾಯಕುತೆ ಅಂದ ಕರಿತಾನೆsssss

ಹಿ.ಗಾ. : ತಂದನಾ ತಾನ ತಂದನಾನಾ

ಮು.ಗಾ. : ಬಾವಾಜಿ ಮಕ್ಕಾಮಸೀದಿ ದಾರಿ ಹಿಡಿದಾನೆsssss

ಹಿ.ಗಾ. : ತಂದನಾ ತಾನ ತಂದನಾನಾ

ಮು.ಗಾ. : ಬಾವಾಜಿ ಮಕ್ಕಾಮಸೀದಿ ದಾರಿ ಹಿಡಿದಾನೆsssss

ಹಿ.ಗಾ. : ತಂದನಾ ತಾನ ತಂದನಾನಾ

**ಕಥೆ**

ಮುಮ್ಮೇಳ : ಜೋಳಿಗೆ ತಂದು ನೇಲದ ಮ್ಯಾಲೆ ಇಟ್ಟ

ಹಿಮ್ಮೇಳ : ಹ್ಞಾ

ಮುಮ್ಮೇಳ : ಬೆಳ್ಳಿ ಬಟ್ಲ ತಲಿಮ್ಯಾಲ ಇಟ್ಟ

ಹಿಮ್ಮೇಳ : ಹ್ಞಾ

ಮುಮ್ಮೇಳ : ದಗ್ಗನ ಉರಿದು ಮನಷ್ಯಳಾಗಿ ಎದ್ದು ನಿಂತಳು

ಹಿಮ್ಮೇಳ : ಹ್ಞಾ

ಮುಮ್ಮೇಳ : ಅರೆಬಾನಚೋತು ಬಾಲನಾಗು

ಹಿಮ್ಮೇಳ : ಹ್ಞಾ

ಮುಮ್ಮೇಳ : ನಿನ್ನ ತಂದು ಮೂರು ತಾಸು ಮೂರು ಗಳಿಗೆ ಆಯಿತು

ಹಿಮ್ಮೇಳ : ಹ್ಞಾ

ಮುಮ್ಮೇಳ : ಹಾಸಿಕೊಡು ಬಾಸಿಕೊಡು

ಹಿಮ್ಮೇಳ : ಹ್ಞಾ

ಮುಮ್ಮೇಳ : ಕೈಯ ಒತ್ತು ಕಾಲು ಒತ್ತು ಅಂದ

ಹಿಮ್ಮೇಳ : ಹ್ಞಾ

ಮುಮ್ಮೇಳ : ಬಾಲನಾಗಮ್ಮ ನೋಡಿ ಏನಂತಾಳ

ಹಿಮ್ಮೇಳ : ಏನಂತಾಳ

ಮುಮ್ಮೇಳ : ಅಪ್ಪ ಸ್ವಾಮಿ ಜಂಗಮಯ್ಯ

ಹಿಮ್ಮೇಳ : ಹ್ಞಾ

ಮುಮ್ಮೇಳ : ಮಗಳಂತ ನೀನು ಮನಿತಾನ ಭಿಕ್ಷಕ ಬಂದರೆ

ಹಿಮ್ಮೇಳ : ಹ್ಞಾ

ಮುಮ್ಮೇಳ : ತಂದೆ ಅಂತ ತಿಳಿದು ಧರ್ಮ ನೀಡಾಕ ನಾನು ಬಂದಿನಿ

ಹಿಮ್ಮೇಳ : ಹ್ಞಾ

ಮುಮ್ಮೇಳ : ಮಗಳ ಮ್ಯಾಲೆ ಮನಸ ಮಾಡಬಾರದು

ಹಿಮ್ಮೇಳ : ಹ್ಞಾ

**ಹಾಡು**

ಮು.ಗಾ. : ಮಗಳ ಸರಿ ನನ್ನ ಬಿಟ್ಟಬಿಡಯ್ಯsssss

ಹಿ.ಗಾ. : ತಂದನಾ ತಾನ ತಂದನಾನಾ

ಮು.ಗಾ. : ಓ ತೇರಿ ಬಾನಚೋತು ಅಂದಾನೆsssss

ಹಿ.ಗಾ. : ತಂದನಾ ತಾನ ತಂದನಾನಾ

**ಕಥೆ**

ಮುಮ್ಮೇಳ : ಮತ್ತೆ ಬೆಳ್ಳಿ ಬೆತ್ತ ತಲಿಮ್ಯಾಲ ಇಟ್ಟ

ಹಿಮ್ಮೇಳ : ಹ್ಞಾ

ಮುಮ್ಮೇಳ : ದಗ್ಗನೆ ಉರಿದು ಬೂದಿಯಾಗಿ ಬಿಟ್ಲು

ಹಿಮ್ಮೇಳ : ಹ್ಞಾ

ಮುಮ್ಮೇಳ : ಜೋಳಿಗ್ಯಾಗ ಬೂದಿ ತುಂಬಿ
ಗುಟಕ ಜೋಳಿಗೆ ಸಿಗಾಕಿದ

ಹಿಮ್ಮೇಳ : ಹ್ಞಾ

ಮುಮ್ಮೇಳ : ಬೆತ್ತ ಮುರಿದು ಜಂತಿವೊಳಗ ಇಟ್ಟ

ಹಿಮ್ಮೇಳ : ಹ್ಞಾ

ಮುಮ್ಮೇಳ : ಗಾಣಿಗೇರ ಸಂಗವ್ವನ ಮನಿಗಿ ಬಾವಾಜಿ ಹೊರಟ ಬಿಟ್ಟ

ಹಿಮ್ಮೇಳ : ಹ್ಞಾ

ಮುಮ್ಮೇಳ : ಅಮ್ಮ ತೊಟ್ಟಿಲೊಳಗೆ ಒಂಬತ್ತು ತಿಂಗಳ ಕೂಸು

ಹಿಮ್ಮೇಳ : ಹ್ಞಾ

**ಹಾಡು**

ಮು.ಗಾ. : ರಾಮನಂತ ಚಿಟ್ಟನೆ ಚೀರಿ ಅಳತಾಳೆsssss

ಹಿ.ಗಾ. : ತಂದನಾ ತಾನ ತಂದನಾನಾ

ಮು.ಗಾ. : ಮಗನೆ ಬೋರಾಡಿ ದುಃಖ ಮಾಡುವನೆsssss

ಹಿ.ಗಾ. : ತಂದನಾ ತಾನ ತಂದನಾನಾ

**ಕಥೆ**

ಮುಮ್ಮೇಳ : ರಾಮಣ್ಣ ಹೋಗ ತಾಯಿ ಕನಸಿನೊಳಗೆ

ಹಿಮ್ಮೇಳ : ಏನಂತಾ ಹೇಳಿದ

ಮುಮ್ಮೇಳ : ಬಾವನ ಬಳಿಗೆ ನೀನು ಹೋಗುತ್ತಿದ್ದಿ ಅಮ್ಮ

ಹಿಮ್ಮೇಳ : ಹ್ಹಾ

ಮುಮ್ಮೇಳ : ನೀನು ಆಶೆ ಕೊಡಬ್ಯಾಡ, ಭಾಷೆ ಕೊಡಬ್ಯಾಡ

ಹಿಮ್ಮೇಳ : ಹ್ಹಾ

ಮುಮ್ಮೇಳ : ಕೂಳು ಉಣಬ್ಯಾಡ ನೀರು ಕುಡಿಬ್ಯಾಡ

ಹಿಮ್ಮೇಳ : ಹ್ಹಾ

ಮುಮ್ಮೇಳ : ಪತಿವ್ರತ ಧರ್ಮ ನೀನು ಇದ್ದರೆ

ಹಿಮ್ಮೇಳ : ಹ್ಹಾ

ಮುಮ್ಮೇಳ : ಹೊಟ್ಟೆಗೆ ಹಾಲ ನನಗ ಬೇಕಿಲ್ಲ

ಹಿಮ್ಮೇಳ : ಹ್ಹಾ

ಮುಮ್ಮೇಳ : ತೂಗು ತೊಟ್ಟಿಲ ತೂಗತಿ ಬೇಕಿಲ್ಲ

ಹಿಮ್ಮೇಳ : ಹ್ಹಾ

ಮುಮ್ಮೇಳ : ಸತ್ಯದಲಿಂದ ನಾನು ಬದುಕುತಿನಿ

ಹಿಮ್ಮೇಳ : ಹ್ಹಾ

ಮುಮ್ಮೇಳ : ಹನ್ನೆರಡು ವರ್ಷ ಮಗನಾಗಿ ನಾನು ಬರುತ್ತೀನಿ

ಹಿಮ್ಮೇಳ : ಹ್ಹಾ

ಮುಮ್ಮೇಳ : ಬಾವನ ಕಾಲ ತಲೆ ಕಡೆದು ನಾನು ತರತ್ತೀನಿ

ಹಿಮ್ಮೇಳ : ಹ್ಹಾ

ಮುಮ್ಮೇಳ : ಹೋಗಿ ಬಾರಮ್ಮ ತಾಯಿ ಅಂತ ತಾಯಿ ಕನಸಿನೊಳಗ ಹೇಳಿದ್ದ ರಾಮದೇವರು

ಹಿಮ್ಮೇಳ : ಹ್ಹಾ

ಮುಮ್ಮೇಳ : ಆರು ಮಂದಿ ತಾಯಿಂದವರು

ಹಿಮ್ಮೇಳ : ಹ್ಹಾ

ಮುಮ್ಮೇಳ : ಆರು ಕೊಡಪಾನ ನೀರು ತೆಗೆದುಕೊಂಡು ಬಂದು
ಮನೆಯೊಳಗೆ ಇಳಿಸಿ

ಹಿಮ್ಮೇಳ : ಹ್ಞಾ

ಮುಮ್ಮೇಳ : ಮಗನು ಎಷ್ಟು ಪರಿ ಚಿಟ್ಟನೆ ಚೀರುತಿರುವನು

ಹಿಮ್ಮೇಳ : ಹ್ಞಾ

**ಹಾಡು**

ಮು.ಗಾ. : ಬಾಣತಿ ಎಂತಪರಿ ನಿದ್ದೆ ಮಾಡುವಳೆsssss

ಹಿ.ಗಾ. : ತಂದನಾ ತಾನ ತಂದನಾನಾ

ಮು.ಗಾ. : ನಾಗಮ್ಮನ ಮನೆಯ ಒಳಗೆ ಸುಳಿವೆ ಇಲ್ಲಮ್ಮsssss

ಹಿ.ಗಾ. : ತಂದನಾ ತಾನ ತಂದನಾನಾ

**ಕಥೆ**

ಮುಮ್ಮೇಳ : ಎಲ್ಲ ಒಸು ಮನಿ ಹುಡುಕ್ಯಾಡಿ ನೋಡಿದ್ರು

ಹಿಮ್ಮೇಳ : ಹ್ಞಾ

ಮುಮ್ಮೇಳ : ಹೊರಸಿನ ಮ್ಯಾಲೆ ನಾಗಮ್ಮನ ಸುಳಿವು ಇಲ್ಲ

ಹಿಮ್ಮೇಳ : ಹ್ಞಾ

ಮುಮ್ಮೇಳ : ಬಾಣತಿ ಹೊರಸಿನ ಮ್ಯಾಲ ಸುಳಿವಿಲ್ಲ ಎಲ್ಲಿಗೆ
ಹೋಗಿರುವಳು ಎಂದು

ಹಿಮ್ಮೇಳ : ಹ್ಞಾ

ಮುಮ್ಮೇಳ : ಹಿರಿಯಕ್ಕ ಈಕಿ ಸಂಗಮ್ಮ

ಹಿಮ್ಮೇಳ : ಹ್ಞಾ

ಮುಮ್ಮೇಳ : ಬಚ್ಚಲದಲ್ಲಿ ಬಂದು ನಿಂತು ನೋಡಿದಳು

ಹಿಮ್ಮೇಳ : ಹ್ಞಾ

ಮುಮ್ಮೇಳ : ಹಸೆ ಸೀರಿ ಜಳಕ ಮಾಡಿ ಬಿಟ್ಟ ಹೋಗಿದ್ದಳು

ಹಿಮ್ಮೇಳ : ಹ್ಞಾ

ಮುಮ್ಮೇಳ : ಬಾವು ಬಂದು ಒಯ್ಯುವುದು ಯಾರಿಗೋರ್ತಿತ್ತು

ಹಿಮ್ಮೇಳ : ಹ್ಞಾ

ಮುಮ್ಮೇಳ : ಹಿರಿಯಕ್ಕಗ ಗುರುತು ಇತ್ತು

ಹಿಮ್ಮೇಳ : ಹ್ಞಾ

ಮುಮ್ಮೇಳ : ತಂಗಿದೊರೆ ಘಾತವಾಯಿತು ಮೋಸವಾಯಿತು

ಹಿಮ್ಮೇಳ : ಹ್ಞಾ

ಮುಮ್ಮೇಳ : ನಮ್ಮ ತಂಗಿಗೆ ಯಾರು ಒಯ್ಯದಿಲ್ಲ

ಹಿಮ್ಮೇಳ : ಹ್ಞಾ

ಮುಮ್ಮೇಳ : ವೆಂಕಟಗಿರಿಗೊ ಸಾಯಿಬಾಜಿ ನನ್ನ ತಂಗಿನ
ನಾಯಿನ ಮಾಡಿ ಎತ್ತಿ ಹೊಯಿದಿರುವನು

ಹಿಮ್ಮೇಳ : ಹ್ಞಾ

ಮುಮ್ಮೇಳ : ಏನ್ ಮಾಡಬೇಕಮ್ಮ ಅಂತ ದುಃಖ ಮಾಡಕತ್ತಿದ್ರು

ಹಿಮ್ಮೇಳ : ಹ್ಞಾ

ಮುಮ್ಮೇಳ : ಅಮ್ಮ ಸಣ್ಣ ಕಂದ ರಾಮದೇವರು

ಹಿಮ್ಮೇಳ : ಹ್ಞಾ

ಮುಮ್ಮೇಳ : ನಮ್ಮ ಗಂಡದವರಿಗೆ ನಮ್ಮ ಸುದ್ದಿಯನ್ನು ಹೇಳಿ

ಹಿಮ್ಮೇಳ : ಹ್ಞಾ

ಮುಮ್ಮೇಳ : ಈ ಮಗನ ಜೋಪಾನ ಮಾಡಬೇಕಂದ್ರು

ಹಿಮ್ಮೇಳ : ಹ್ಞಾ

ಮುಮ್ಮೇಳ : ಮಗನ ಕೆಳಗೆ ಇಟ್ರೆ ಮಣ್ಣಾಗದ

ಹಿಮ್ಮೇಳ : ಹ್ಞಾ

ಮುಮ್ಮೇಳ : ಮೇಲೆ ಎತ್ತಿದ್ರೆ ಬಿಸಿಲು ಬಡಿತದ ಎಂದು
ಮಗನ ಸಂರಕ್ಷಣೆ ಮಾಡಿದ್ರು

ಹಿಮ್ಮೇಳ : ಹ್ಞಾ

**ಹಾಡು**

ಮು.ಗಾ. : ಹನ್ನೆರಡು ವರ್ಷ ಮಗನ ಸಲುವ್ಯಾರsssss

ಹಿ.ಗಾ. : ತಂದನಾ ತಾನಾ ತಂದನಾನಾ

ಮು.ಗಾ. : ಹನ್ನೆರಡು ವರ್ಷ ಮಗನಾಗಿ ಬೆಳೆದು ನಿಂತಾನೆsssss

ಹಿ.ಗಾ. : ತಂದನಾ ತಾನಾ ತಂದನಾನಾ

ಮು.ಗಾ. : ರಾಮಣ್ಣ ಗುಂಡು, ಚೆಂಡು, ಬುಗರಿ ಆಡುವನೆsssss

ಹಿ.ಗಾ. : ತಂದನಾ ತಾನಾ ತಂದನಾನಾ

ಮು.ಗಾ. : ಜನನಿ ಸಣ್ಣದೊಂದು ಬುಗರಿ ಕೊಡರೆsssss

ಹಿ.ಗಾ. : ತಂದನಾ ತಾನಾ ತಂದನಾನಾ

**ಕಥೆ**

ಮುಮ್ಮೇಳ : ಆರುಮಂದಿ ನನ್ನ ತಾಯಿಂದವರ ಸಣ್ಣಪುಟ್ಟ
ಬಗರಿ ನನಗೆ ಕೊಡಿರೆಂದು

ಹಿಮ್ಮೇಳ : ಹ್ಞಾ

ಮುಮ್ಮೇಳ : ನೂರು ಒಂದು ರೈತರ ಮಕ್ಕಳು ಆ ವಿಷಯದಾಗ
ಬಗರಿ ಆಡುತಿರುವವರು

ಹಿಮ್ಮೇಳ : ಹ್ಞಾ

ಮುಮ್ಮೇಳ : ತಾಸುಗಳಿಗೆ ಬಗರಿ ಆಡಿ ಬರುತ್ತೇನಮ್ಮ

ಹಿಮ್ಮೇಳ : ಹ್ಞಾ

ಮುಮ್ಮೇಳ : ಹೋಗಿ ಬಾ ಮಗನೆ ಅಂತ ಬಂಗಾರದ ಬಗರಿ
ತಂದು ಕೈಗೆ ಕೊಟ್ಟರು

ಹಿಮ್ಮೇಳ : ಹ್ಞಾ

ಮುಮ್ಮೇಳ : ಬೆಳ್ಳಿ ಜಾಳಿಗೆ ತಂದುಕೊಟ್ಟರು

ಹಿಮ್ಮೇಳ : ಹ್ಞಾ

ಮುಮ್ಮೇಳ : ಮಗ ಬಂಗಾರ ಬಗರಿ ಕೈಯಾಗ ಹಿಡಿದು
ಅಗಸಿಗೆ ನಡೆದು ಬಂದು

ಹಿಮ್ಮೇಳ : ಹ್ಞಾ

ಮುಮ್ಮೇಳ : ಬಂಗಾರ ಬಗರಿಗೆ ಬೆಳ್ಳಿ ಜಾರಿಗೆಯನ್ನು ಸುತ್ತಿ

ಹಿಮ್ಮೇಳ : ಹ್ಞಾ

**ಹಾಡು**

ಮು.ಗಾ. : ಜಾಡಿಸಿ ಭೂಮಿಗೆ ಬಗರಿ ಹೊಡದಾನೆSSSSS

ಹಿ.ಗಾ. : ತಂದನಾ ತಾನಾ ತಂದನಾನಾ

ಮು.ಗಾ. : ಕುಲಕಣ್ಣಿಗಿರಿಸಿ ಎದುರಿಗೆ ಬಂದಾರSSSSS

ಹಿ.ಗಾ. : ತಂದನಾ ತಾನಾ ತಂದನಾನಾ

ಮು.ಗಾ. : ಶೇಷಮ್ಮನ ಕಾಲಿಗೆ ಹೋಗಿ ಬಗರಿ ಬಿದ್ದಾದSSSSS

ಹಿ.ಗಾ. : ತಂದನಾ ತಾನಾ ತಂದನಾನಾ

**ಕಥೆ**

ಮುಮ್ಮೇಳ : ಜಾಡಿಸಿ ಒಗೆದಾಗ ಮಗನು ರಾಮನು ಬಗರಿ ಒಗೆದ ಬಿಟ್ಟ
ಆಡಿಕೊಂತ ಹೋಗಿ ಶೇಷಮ್ಮನ ಕಾಲಿಗೆ
ಬಗರಿ ನಟ್ಟಿತು

ಹಿಮ್ಮೇಳ : ಹ್ಞಾ

ಮುಮ್ಮೇಳ : ಹದಿನಾರು ಮೈಲು ನೆಲಕೆ ಹಗದಳು

ಹಿಮ್ಮೇಳ : ಹ್ಞಾ

ಮುಮ್ಮೇಳ : ಮಗಲನ ಕೊಡ ನೆಲಕ್ಕೆ ಒಗೆದಳು

ಹಿಮ್ಮೇಳ : ಹ್ಞಾ

ಮುಮ್ಮೆಳ : ಯಪ್ಪಾ... ತಂದೆ ತಾಯಿ ಇಲ್ಲದೆ ಎಷ್ಟು ಉರಿತಿದಿ

ಹಿಮ್ಮೆಳ : ಹ್ಹಾ

ಮುಮ್ಮೆಳ : ನಿನ್ನ ಒರುಣಿಗೆ ಮ್ಯಾಲ ಉಪ್ಪು ಚೆಲ್ಲಲಿ

ಹಿಮ್ಮೆಳ : ಹ್ಹಾ

ಮುಮ್ಮೆಳ : ಹುಟ್ಟಿದಾಗ ಏಳು ಮಂದಿ ತಂದಿದವರನ್ನ ಕಳಕೊಂಡಿದಿ

ಹಿಮ್ಮೆಳ : ಹ್ಹಾ

ಮುಮ್ಮೆಳ : ಬೆಳಗುತಿಲೆ ತಾಯಿನ ಕಳಕೊಂಡಿದಿ

ಹಿಮ್ಮೆಳ : ಹ್ಹಾ

ಮುಮ್ಮೆಳ : ತಂದೆ-ತಾಯಿ ಇದಿದ್ರೆ ಇನ್ನೆಷ್ಟು ಪರಿ ನೀನು ಉರಿತಿದ್ದಿಹಿಮ್ಮೆಳ

ಹಿಮ್ಮೆಳ : ಹ್ಹಾ

ಮುಮ್ಮೆಳ : ಪಟ ಪಟನೆ ಅಂತ ಚಟಗಿ ಮುರಿದಳು

ಹಿಮ್ಮೆಳ : ಹ್ಹಾ

ಮುಮ್ಮೆಳ : ಆ ಮಗ ಕಿವಿಮುಟ್ಟ ಕೇಳಿದ

ಹಿಮ್ಮೆಳ : ಏನಂತನಮ್ಮ?

ಮುಮ್ಮೆಳ : ಶಿವ ಶಿವ ಓಡಿ ಹೋಗಿ ಆ ತಾಯಿಯ ಕಾಲು ಹಿಡಿಬೇಕೆಂದ

ಹಿಮ್ಮೆಳ : ಹ್ಹಾ

ಮುಮ್ಮೆಳ : ಓಡಿ ಬಂದು ಶೇಷಮ್ಮನ ಕಾಲು ಬಿಗಿಮಾಡಿ ಹಿಡಿದ

ಹಿಮ್ಮೆಳ : ಹ್ಹಾ

ಮುಮ್ಮೆಳ : ತಾಯಿ ಹಿಂಗಂತ ಮಾತು ಹೊಡೆದು ಹೇಳಂದ

ಹಿಮ್ಮೆಳ : ಹ್ಹಾ

ಮುಮ್ಮೆಳ : ನಮ್ಮಪ್ಪ ನಮ್ಮವ್ವ ಎಲ್ಲಿರುವವರೆಂದ

ಹಿಮ್ಮೆಳ : ಹ್ಹಾ

ಮುಮ್ಮೆಳ : ಅಪ್ಪ ರಾಮದೇವರ ಇದೆ ಸುದ್ದಿ ನಿಮ್ಮ ಆರು ಮಂದಿ

ಹಿಮ್ಮೆಳ : ಹ್ಹಾ

ಮುಮ್ಮೆಳ : ತಾಯನ್ ಕೇಳಿದರೆಂದರೆ

ಹಿಮ್ಮೆಳ : ಹ್ಹಾ

ಮುಮ್ಮೆಳ : ನನ್ನ ತಾಯಿನ ಮೇಲೆ ತಲೆ ಕಡಿವರು

ಹಿಮ್ಮೆಳ : ಹ್ಹಾ

ಮುಮ್ಮೆಳ : ಸಿಟ್ಟು ಬಂದು ಬೈದಿನಿ ಬಿಟ್ಟು ಬಿಡುಸ ಎಂದಳು

ಹಿಮ್ಮೆಳ : ಹ್ಹಾ

ಮುಮ್ಮೆಳ : ಇಲ್ಲಮ್ಮ ಹೇಳೊತನಕೆ ಬಿಡದಿಲ್ಲ ಎಂದನು

ಹಿಮ್ಮೆಳ : ಹ್ಹಾ

ಮುಮ್ಮೆಳ : ಏನ್ನಪ್ಪಾ ರಾಮದೇವರೆ ನಿನ್ನ ಹುಟ್ಟಿದ ಒಂಬತ್ತು
ದಿನದಲ್ಲಿ ನಿನ್ನ ತಾಯಿನ ಬಾವಾಡಿ ಕರಿ ನಾಯಿನ ಮಾಡಿ ಒಯ್ದಿರುವನು

ಹಿಮ್ಮೆಳ : ಹ್ಹಾ

ಮುಮ್ಮೆಳ : ನಿಮ್ಮಪ್ಪಂದಿರು ನೀನು ಹುಟ್ಟಿದ ಏಳ ದಿನದಲ್ಲಿ
ಲಡಾಯಿ ಮಾಡ್ಲಿಕೆ ಹೋಗಿ ಇನ್ನುವರೆಗೂ ಬಂದಿಲ್ಲ

ಹಿಮ್ಮೆಳ : ಹ್ಹಾ

ಮುಮ್ಮೆಳ : ಆರು ಮಂದಿ ತಾಯಿದವರೆ ನಿನ್ನ ಎತ್ತಿ ಸಂರಕ್ಷಣೆ ಮಾಡಿರುವವರು

ಹಿಮ್ಮೆಳ : ಹ್ಹಾ

ಮುಮ್ಮೆಳ : ಬಿಟ್ಟು ಬಿಡಪ್ಪ ನನ್ನ ಕಾಲು ಎಂದಳು

ಹಿಮ್ಮೆಳ : ಹ್ಹಾ

ಮುಮ್ಮೆಳ : ಕಾಲುಬಿಟ್ಟು ಅರಮನೆಗೆ ನಡೆದು ಬಂದು

ಹಿಮ್ಮೆಳ : ಹ್ಹಾ

**ಹಾಡು**

ಮು.ಗಾ. : ಬರೆಮ್ಮ ಆರು ಮಂದಿ ತಾಯಿದವರೆsssss

ಹಿ.ಗಾ. : ತಂದನಾ ತಾನ ತಂದನಾನಾ

**ಕಥೆ**

ಮುಮ್ಮೆಳ : ಉಡದಾರ ಕಟ್ಟಿದಾವ ಹಡೆದವ್ವ ಮನ್ಯಾಗಿಲ್ಲವ್ವ
ಎಮ್ಮ ನನ್ನ ಹಡೆದಂತ ತಾಯಿ ಎಲ್ಲಿಗೆ ಹೋಗಿರುವಳು

ಹಿಮ್ಮೆಳ : ಹ್ಹಾ

ಮುಮ್ಮೆಳ : ಏಳು ಮಂದಿ ತಂದಿಯವರು ಎಲ್ಲಿ ಹೋಗಿರುವರು

ಹಿಮ್ಮೆಳ : ಹ್ಹಾ

ಮುಮ್ಮೆಳ : ಹೇಳಮ್ಮ ತಾಯಿದವರೆ ಅಂತ ಹಠಮಾಡಿ ಕುಂತ

ಹಿಮ್ಮೆಳ : ಹ್ಹಾ

ಮುಮ್ಮೆಳ : ಆರುಮಂದಿ ತಾಯಿದವರು ಬಂದು ಸುತ್ತುಮುತ್ತ ಗಾಬರಿಯಾಗಿ ನಿಂತರು

ಹಿಮ್ಮೆಳ : ಹ್ಹಾ

ಮುಮ್ಮೆಳ : ಯಾರನ್ನ ಹೊಡೆದರೆ ಬೈದರೆ ಮಗನೆ ನಿನಗ ಯಾರದೆರು
ಚಾಡಿ ಚುಗಲಿ ಹೇಳಿದರು

ಹಿಮ್ಮೆಳ : ಹ್ಹಾ

ಮುಮ್ಮೆಳ : ಯಾಪ್ಪ, ಎಂಥಾ ಮಾತು ನಿನಾಡ್ತಿ ರಾಮಣ್ಣ ಅಂದರು

ಹಿಮ್ಮೆಳ : ಹ್ಞಾ

ಮುಮ್ಮೆಳ : ಇವತ್ತಿನ ದೀವಸ ಇದ್ದ ಮಾತು ಇದ್ದಾಂಗ ಹೇಳಿದರೆ
ಈ ಮನೆಯಲ್ಲಿ ಊಟ ಮಾಡ್ತಿನಿ ಇಲ್ಲಂದ ನಾನು
ಊಟ ಮಾಡುವುದಿಲ್ಲ ಅಂದ

ಹಿಮ್ಮೆಳ : ಹ್ಞಾ

ಮುಮ್ಮೆಳ : ಅಡ್ಡಿ ಮಾಡಿ ಮಗನು ಕುಂತಿರುವನು

ಹಿಮ್ಮೆಳ : ಹ್ಞಾ

ಮುಮ್ಮೆಳ : ಅಪ್ಪಾ ರಾಮದೇವರೆ

ಹಿಮ್ಮೆಳ : ಹ್ಞಾ

ಮುಮ್ಮೆಳ : ನೀನು ಹುಟ್ಟಿದ ಏಳು ದಿನಕ್ಕೆ ನಿಮ್ಮ ಚಿಕ್ಕಪ್ಪ
ನಿಮ್ಮಪ್ಪ ಲಡಾಯಿಗಿ ಹೊದವರು ಇನ್ನಾದರೂ ಬಂದಿಲ್ಲ

ಹಿಮ್ಮೆಳ : ಹ್ಞಾ

ಮುಮ್ಮೆಳ : ನೀನು ಹುಟ್ಟಿದ ಒಂಬತ್ತು ದಿನದಾಗ
ತೆಲಗಾಣ ದೇಶದಿಂದ ಬಾವಾಜಿ ಬಂದು
ನಿಮ್ಮವ್ವನ ಕರಿ ನಾಯಿನ ಮಾಡಿ ಒಯ್ದಿರು

ಹಿಮ್ಮೆಳ : ಹ್ಞಾ

ಮುಮ್ಮೆಳ : ಈಗನ ಜಳಕ ಮಾಡಿ ಊಟ ಮಾಡಪ್ಪ ರಾಮಣ್ಣ ಅಂದರು

ಹಿಮ್ಮೆಳ : ಹ್ಞಾ

ಮುಮ್ಮೆಳ : ಅಮ್ಮ ತಾನು ಜಳಕ ಮಾಡಿ ಹೊಟ್ಟೆತುಂಬಾ ಊಟ ಮಾಡಿ

ಹಿಮ್ಮೆಳ : ಹ್ಞಾ

ಮುಮ್ಮೆಳ : ಏನಮ್ಮ ಆರುಮಂದಿ ತಾಯಿದವರೆ

ಹಿಮ್ಮೆಳ : ಹ್ಞಾ

ಮುಮ್ಮೆಳ : ತಂದೆ-ತಾಯಿನ ಹೋಗಿ ನಾನು ತರತಿನಿ

ಹಿಮ್ಮೆಳ : ಹ್ಞಾ

**ಹಾಡು**

ಮು.ಗಾ. : ಹೋಗಲಿಕ್ಕೆ ಅಪ್ಪಣೆ ನೀವು ಕೊಡರೆವ್ವಾsssss

ಹಿ.ಗಾ. : ತಂದನಾ ತಾನ ತಂದನಾನಾ

ಮು.ಗಾ. : ರಾಜ್ಯರ ಕೈಯಲೆ ತರದಾಗಿಲ್ಲೆ ನಾsssss

ಹಿ.ಗಾ. : ತಂದನಾ ತಾನ ತಂದನಾನಾ

ಕಥೆ

ಮುಮ್ಮೇಳ : ಏಳುಮಂದಿ ನಿಮ್ಮಪ್ಪದವರು ಹೋಗಿ ಅಲ್ಲಿ
ಮಸೀದಿ ಬಲ್ಲಿ ಕಲ್ಲಾಗಿ ನಿಂತಿರುವರು

ಹಿಮ್ಮೇಳ : ಹ್ಹಾ

ಮುಮ್ಮೇಳ : ಗೇಣ ಕಂದಮ್ಮ ಹೋಗಿ ನೀ ಏನ್ ತರತಿದಿ ಅಂದರು

ಹಿಮ್ಮೇಳ : ಹ್ಹಾ

ಮುಮ್ಮೇಳ : ಎಮ್ಮ ನನಗೆ ಹೋಗಲಿಕಿ ಅಪ್ಪಣೆ ಕೊಡ್ರಿ

ಹಿಮ್ಮೇಳ : ಹ್ಹಾ

ಮುಮ್ಮೇಳ : ನಾ ಹೋಗಿ ತಗೊಂಡು ಬರ್ತಿನಿ ಅಂದ

ಹಿಮ್ಮೇಳ : ಹ್ಹಾ

ಮುಮ್ಮೇಳ : ಅಡ್ಡಿಯ ಮಾಡಿ ಮಗನಿಂತ ಗಳಿಗೆ
ಬಿಲ್ಲು ಬಾಣ ತಂದು ಬೆನ್ನಿಗೆ ಕಟ್ಟಿದರು

ಹಿಮ್ಮೇಳ : ಹ್ಹಾ

ಮುಮ್ಮೇಳ : ಹೋಗಿ ಬಾರಪ್ಪ ಮಗನೆ ಅಂತ ಆರತಿ
ತಲಿಮ್ಯಾಲ ನೀಡಿದರು

ಹಿಮ್ಮೇಳ : ಹ್ಹಾ

ಮುಮ್ಮೇಳ : ಅಪ್ಪ ಕಂದ ರಾಮದೇವರೆ
ತಂಡ ತಂಡಗಳ ಜೊತೆ ಲಡಾಯಿ ಮಾಡಿ
ಗೆದ್ದು ಬಾ

ಹಿಮ್ಮೇಳ : ಹ್ಹಾ

ಮುಮ್ಮೇಳ : ಯುದ್ಧದಲ್ಲಿ ಜಯಶೀಲನಾಗಿ ಬಾ

ಹಿಮ್ಮೇಳ : ಹ್ಹಾ

ಮುಮ್ಮೇಳ : ಬುದ್ದಿಯೊಳಗೆ ಕುಶಾಲವಂತನಾಗು
ನೀ ಸಾಯೋದು ಹುಟ್ಟಿಬರೋದು ಕುನಕೊಟ್ಟೋಗು ಅಂದರು

ಹಿಮ್ಮೇಳ : ಹಾ

ಮುಮ್ಮೇಳ : ಅಮ್ಮ ಕೊನೆಯ ಮಲ್ಲಿಗಿ ಹೂವಿನ ಕೋಲೆ ಮುರಿದುಕೊಂಡು ಬಂದು
ಇಡಕೆ ಕೆಸರಿನೊಳಗೆ ಕೋಲೆಯನ್ನು ಚುಚ್ಚಿ

ಹಿಮ್ಮೇಳ : ಹ್ಹಾ

ಮುಮ್ಮೇಳ : ಏನಮ್ಮ ಆರುಮಂದಿ ನನ್ನ ತಾಯಿದವರೆ

ಹಿಮ್ಮೇಳ : ಹ್ಹಾ

ಮುಮ್ಮೆಳ : ಅಮ್ಮ ತಾಯಿದವರೆ ದಿನಾಲು ಐದು ಗಿಂಡಿ ನೀರು ನಿವಾಕ್ರಿ

ಹಿಮ್ಮೆಳ : ಹ್ಹಾ

ಮುಮ್ಮೆಳ : ಅಮ್ಮ ಬಂಗಾರ ಗಿಡ ತಣ್ಣಗಿದ್ದರೆ

ಹಿಮ್ಮೆಳ : ಹ್ಹಾ

ಮುಮ್ಮೆಳ : ಇದೆ ಇಡ ತಣ್ಣಗಿದ್ದರೆ ನಾನು ತಣ್ಣಗಿರುತ್ತಿದ್ದೇನೆ

ಹಿಮ್ಮೆಳ : ಹ್ಹಾ

ಮುಮ್ಮೆಳ : ಇದು ಹಚ್ಚಗಿಡ ಬಾಡಿ ನೆಲಕ್ಕೆ ಬಿದ್ದರೆ

ಹಿಮ್ಮೆಳ : ಹ್ಹಾ

ಮುಮ್ಮೆಳ : ಮಗ ಸತ್ತನಂತ ಗಿಡಕ ದುಃಖ ಮಾಡ್ರಿ ಅಂದ

ಹಿಮ್ಮೆಳ : ಹ್ಹಾ

ಮುಮ್ಮೆಳ : ಮಲ್ಲಿಗಿ ಗೀಡದ ಕೂನವನ್ನು ಹೇಳಿ

ಹಿಮ್ಮೆಳ : ಹ್ಹಾ

ಮುಮ್ಮೆಳ : ಹೋಗಿ ಬರ್ತಿನಂತೆ ಅಪ್ಪಣೆಯನ್ನು ಪಡಕೊಂಡು

ಹಿಮ್ಮೆಳ : ಹ್ಹಾ

**ಹಾಡು**

ಮು.ಗಾ. : ಮಗನೆ ಏಳು ಗುಡ್ಡದ ದಾರಿ ಹಿಡಿದಾನೆsssss

ಹಿ.ಗಾ. : ತಂದನಾ ತಾನ ತಂದನಾನಾ

ಮು.ಗಾ. : ಹನ್ನೆರಡು ಕಾಲದ ದಾರಿ ನಡೆದು ಬಂದಾನೆsssss

ಹಿ.ಗಾ. : ತಂದನಾ ತಾನ ತಂದನಾನಾ...

ಹೀಗೆ ಕಥೆಯು ಮುಂದುವರಿದು ತನ್ನ ತಂದೆ-ತಾಯಿಗಳ ಕಥೆಯನ್ನು ಕೇಳಿದ ಬಾಲಕ ರಾಮದೇವ ತಾಯಿ ಮತ್ತು ತಂದೆಯರನ್ನು ಕರೆದುಕೊಂಡು ಬರಲು ಆ ಏಳು ಮಂದಿ ತಾಯಿಯವರ ಆರ್ಶೀವಾದ ಪಡೆದು ಅರಣ್ಯದಲ್ಲಿರುವ ಕಾಡುಪ್ರಾಣಿಗಳಾದ ಹುಲಿ, ಸಿಂಹ ಕರಡಿಗಳಿಗೆ ಹೆದರದೆ ಹನ್ನೆರಡು ಕಾಲದ ದಾರಿ ನಡೆದನು. ಅದೇ ಅರಣ್ಯದಲ್ಲಿ ಸೋಮನಾಥನ ದೇವಸ್ಥಾನದಲ್ಲಿ ವಿಶ್ರಾಂತಿ ತೆಗೆದುಕೊಳ್ಳುತ್ತಾನೆ. ಅದೇ ದೇವಸ್ಥಾನದಲ್ಲಿ ಅಡವಿ ಜೀವರಾಶಿಗಳು ಬಂದು ವಾಸಮಾಡುತ್ತಿದ್ದವು.

ಒಂದು ಪ್ರಾಣಿ ಇನ್ನೊಂದು ಪ್ರಾಣಿಗಳಿಗೆ ಹೇಳುತ್ತಿದ್ದವು, ಅದೇನೆಂದರೆ ಶ್ಯಾಮಗುಂದಿ ಪಟ್ಟಣದಲ್ಲಿ ರಾಜನ ಮಗಳಿಗೆ ದಣಿವಾಗಿದೆ ಅ ದಣಿವು ಯಾರು ನಿವಾರಣೆ ಮಾಡುತ್ತಾರೊ ಅವರಿಗೆ ಆ ರಾಜನ ಮಗಳು ಕೊಟ್ಟು ಮದುವಿ ಮಾಡಿಕೊಡ್ತಿನಿ ಅಂತ ಹೇಳಿದ್ದಾರೆ ಅಂತ ಹೇಳುತ್ತಿರುವುದು ರಾಮದೇವರು ಕೇಳಿಕೊಳ್ಳುತ್ತಾನೆ. ಆಗ ರಾಮದೇವರು ಶ್ಯಾಮಗುಂದಿ ಪಟ್ಟಣಕ್ಕೆ ಬಂದು ಆ ರಾಜನ ಮಗಳ ರೋಗವನ್ನು ನಿವಾರಿಸಲು ಮುಂದಾಗುತ್ತಾನೆ. ಯಾರು ನಿವಾರಣೆ ಮಾಡದೆ ಇರುವ ರೋಗವನ್ನು

ನೀನೇನು ಮಾಡ್ತೀಯಾ ಬಾಲಕ ಎಂದು ಕೀಳಾಗಿ ಮಾತ್ನಾಡುತ್ತಾರೆ. ಆಗ ಬಾಲಕ ತನ್ನ ತಾಯಿಯನ್ನು ನೆನೆದು ತಾಯಿ ನಿನ್ನ ಪತಿವ್ರತೆ ಜೀವ ಚೆನ್ನಾಗಿದ್ದರೆ ಈ ರೋಗವನ್ನು ನಿವಾರಣೆಯಾಗುತ್ತದೆ. ನಿನ್ನ ಪತಿವ್ರತೆ ಜೀವನ ಕೆಟ್ಹೋಗಿದ್ದರೆ ಈ ರೋಗ ನಿವಾರಣೆಯಾಗುವುದಿಲ್ಲ ಎಂದು ಹೇಳಿ ಗೀಡಮೂಲಿಕೆ ರಸವನ್ನು ಆ ಹೆಣ್ಣುಮಗಳ ಮೂಗಲ್ಲಿ ಹಿಂಡಿದಾಗ ಆ ಹೆಣ್ಣುಮಗಳ ರೋಗವು ನಿವಾರಣೆಯಾಗಿ ಮೊದಲಿನಂತೆ ಆಗುತ್ತಾಳೆ. ರಾಜ ತಾನು ಕೊಟ್ಟಿರುವ ಮಾತಿನಂತೆ ತನ್ನ ಮಗಳನ್ನು ರಾಜಕುಮಾರನಿಗೆ ಕೊಟ್ಟು ಮದುವೆ ಮಾಡಿದ. ರಾಮದೇವರು ತನ್ನ ತಾಯಿಯನ್ನು ಕರೆತರಲು ಹೋಗುವ ಸಲುವಾಗಿ ತನ್ನ ಹೆಂಡತಿಯನ್ನು ಅಲ್ಲೆ ಬಿಟ್ಟು ತನ್ನ ತಾಯಿ ಇರುವ ಸ್ಥಳ ಮಕ್ಕಾಮಸೀದಿಗೆ ಬಂದು ಊರ ಕಟ್ಟೆಗೆ ಕುಳಿತುಕೊಳ್ಳುತ್ತಾನೆ. ಅದೇ ಊರಲ್ಲಿ ಬೇರೆ ಮುದುಕಿಯೊಬ್ಬಳು ತನ್ನ ಮಗಳು ಊರಿಂದ ಬಂದಿಲ್ಲ ಎಂದು ಮಾತಾಡುವುದನ್ನು ಕೇಳಿದ ರಾಮದೇವರು ಇದೇ ಒಳ್ಳೆಯ ಅವಕಾಶವೆಂದು ತಿಳಿದುಕೊಂಡು ತಾನೇ ಮೊಮ್ಮಗ ಎಂದು ಹೇಳಿಕೊಂಡು ಅಜ್ಜಿಯ ಮನೆಯಲ್ಲಿ ಆಶ್ರಯ ಪಡೆಯುತ್ತಾನೆ. ಆ ಅಜ್ಜಿಯಿಂದ ಅವರ ತಾಯಿ ಮಕ್ಕಾಮಸೀದಿಯಲ್ಲಿರುವ ಬಗ್ಗೆ ಮಾಹಿತಿ ತಿಳಿಯುತ್ತಾನೆ. ಈ ಎಲ್ಲ ವಿಷಯವನ್ನು ತಿಳಿದುಕೊಂಡು ರಾಮದೇವರು ತಾಯಿ ಇರುವ ಸ್ಥಳಕ್ಕೆ ಅಜ್ಜಿಯ ವೇಷಹಾಕಿಕೊಂಡು ಬಂದು ತಾಯಿಯನ್ನು ಭೇಟಿ ಮಾಡುತ್ತಾನೆ. ಸದಾಕಾಲ ಬಾವಾಜಿಯ ಕಿರುಕುಳಕ್ಕೆ ಒಳಗಾಗಿ ತನ್ನ ಪತಿವ್ರತೆಯನ್ನು ಕಾಪಾಡಿಕೊಂಡು ಬರುತ್ತಿದ್ದ ತಾಯಿ ಹನ್ನೆರಡು ವರ್ಷಗಳ ಕಾಲ ದೂರವಿದ್ದ ಮಗ ತನ್ನನ್ನು ಕರೆತರಲು ಬಂದಿದ್ದನ್ನು ಕಂಡು ತುಂಬ ಸಂತೋಷವಾಗುತ್ತದೆ. ಆದರೆ ತನ್ನ ತಂದೆ ತಾಯಿಯನ್ನು ಅಲ್ಲಿಂದ ಕರೆದುಕೊಂಡು ಬರುವುದು ಅಷ್ಟೊಂದು ಸುಲಭದ ಮಾತಾಗಿರಲಿಲ್ಲ. ಏಕೆಂದರೆ ಬಾವಾಜಿಯ ಸಾವು ಏಳು ಸಮುದ್ರಗಳ ಆಚೆ ಇರುವ ಒಂದು ಆಲದ ಮರದ ಒಳಗಿರುವ ಗಿಣಿಯ ದೇಹದಲ್ಲಿತ್ತು. ಈ ಗಿಣಿಯನ್ನು ಸಾಯಿಸಿದರೆ ಮಾತ್ರ ಬಾವಾಜಿ ಸಾವು. ಇಲ್ಲಂದ್ರೆ ಬಾವಾಜಿ ಸಾಯಿಸಲು ಸಾಧ್ಯವಾಗಿರಲಿಲ್ಲ. ಇದನ್ನು ಅರಿತುಕೊಂಡು ರಾಮದೇವರು ತನ್ನ ತಾಯಿಗೆ ಹೇಳುತ್ತಾನೆ. ತಾಯಿ ನಿನು ನನ್ನ ತಂದೆಯನ್ನು ಬಿಟ್ಟು ಹನ್ನೆರಡು ವರ್ಷಗಳ ಕಾಲ ಬಾವಾಜಿಯ ಮಸೀದಿಯಲ್ಲಿ ಇದ್ದೀಯಾ ನಿನ್ನ ಪತಿವ್ರತ ಧರ್ಮ ಚೆನ್ನಾಗಿದ್ದರೆ ನಾನು ಏಳು ಸಮುದ್ರವನ್ನು ದಾಟಿ ಆ ಗಿಣಿಯನ್ನು ತೆಗೆದುಕೊಂಡು ಬಂದು ಬಾವಾಜಿಯನ್ನು ಸಾಯಿಸುತ್ತೇನೆ. ನಿನ್ನ ಪತಿವ್ರತೆ ಜೀವನ ಹಾಳಾಗಿದ್ದರೆ ನಾನು ಅಲ್ಲಿಯೇ ಸಾಯುತ್ತೇನೆಂದು ಹೇಳಿ ಹೋಗುತ್ತಾನೆ.

ಹೀಗೆ ಹೋಗುವ ಮಾರ್ಗ ಮಧ್ಯದಲ್ಲಿ ಒಂದು ಮರದ ಕೆಳಗೆ ವಿಶ್ರಾಂತಿ ಪಡೆದುಕೊಳ್ಳುತ್ತಿರುವಾಗ ಅದೇ ಮರದ ಕೆಳಗೆ ಒಂದು ಪಕ್ಷಿ ಮಲಗಿತ್ತು. ಆ ಮಲಗಿರುವ ಪಕ್ಷಿಯನ್ನು ನಾಗಶೇಷ ತಿನ್ನಲು ಬರುತ್ತಿರುವುದನ್ನು ನೋಡಿದ ಬಾಲಕ ಆ ನಾಗಶೇಷನನ್ನು ತನ್ನ ಖಡ್ಗದಿಂದ ಕೊಂದುಬಿಟ್ಟನು. ಇದನ್ನು ನೋಡಿದ ಆ ಮಲಗಿದ ಪಕ್ಷಿ ಖುಷಿಯಿಂದ ಆ ರಾಮದೇವನನ್ನು ಕಂಡು ನನ್ನಿಂದ ನಿನಗೆ ಸಹಾಯ ಬೇಕಾದ್ರೆ ಕೇಳು ಎಂದಿತು. ಏಳು ಸಮುದ್ರಗಳ ದಾಟಿ ಹೋಗಬೇಕಾದಕಾರಣ ಆ ಪಕ್ಷಿಯ ಸಹಾಯ ಬೇಕಾಗಿತ್ತು. ಆ ಪಕ್ಷಿಗೆ ತನ್ನ ಎಲ್ಲ ಸಮಸ್ಯೆಗಳನ್ನು ಹೇಳಿಕೊಂಡನು. ಆ ಪಕ್ಷಿಯ

ಸಹಾಯದಿಂದ ಏಳು ಸಮುದ್ರ ದಾಟಿ ಗಿಣಿಯನ್ನು ತೆಗೆದುಕೊಂಡು ಬಂದು ಬಾವಾಜಿ ಮುಂದೆ ನಿಂತನು.

ಬಾವಾಜಿ ನನ್ನ ಏಳು ಮಂದಿ ತಂದೆಯವರನ್ನು ಕಲ್ಲು ಮಾಡಿ ನಿಲ್ಲಿಸಿರುವೆ ಅವರನ್ನು ಎಬ್ಬಿಸು, ನನ್ನ ತಾಯಿಯನ್ನು ಕಳುಹಿಸು ಇಲ್ಲ ಅಂದ್ರೆ ನಿನ್ನ ಜೀವ ನನ್ನ ಕೈಯಲ್ಲಿದೆ. ಸಾಯಿಸ್ತಿನಿ ಎಂಬುದಾಗಿ ಹೇಳಿದ. ಜೀವಕ್ಕೆ ಹೆದರಿ ಏಳುಮಂದಿ ತಂದೆಯರನ್ನು ಬದುಕಿಸಿದ, ತಾಯಿಯನ್ನು ಅವನಿಗೆ ಒಪ್ಪಿಸಿದ ನಂತರ ಗಿಣಿಯ ಒಂದು ಕಾಲು ಮುರಿದ ಆಗ ಬಾವಾಜಿಯ ಬಂದು ಕೈ ಮುರಿಯಿತು. ಮತ್ತೊಂದು ಕಾಲು ಮುರಿದ ಆಗ ಬಾವಾಜಿಯ ಒಂದು ಕಾಲು ಮುರಿಯಿತು. ಕೊನೆಯದಾಗಿ ಗಿಣಿಯ ಕುತ್ತಿಗೆಯನ್ನು ಮುರಿದ ಆಗ ಬಾವಾಜಿಯ ಕುತ್ತಿಗೆಯು ಮುರಿಯಿತು. ಹೀಗೆ ಬಾವಾಜಿಯ ಪ್ರಾಣಪಕ್ಷಿಯಾದ ಗಿಳಿಯ ಸಾವಿನಿಂದ ಬಾವಾಜಿಯ ಪ್ರಾಣಪಕ್ಷಿ ಹರಿಹೋಯಿತು.

ಹೀಗೆ ಬಾವಾಜಿಯನ್ನು ಸಂಹಾರಿಸಿ ಸುಟ್ಟು ಬಿಡುತ್ತಾನೆ. ಬಾವಾಜಿಯ ಬಂಧಿಯಲ್ಲಿದ್ದ ತನ್ನ ತಾಯಿ ಮತ್ತು ಏಳು ಮಂದಿ ತಂದಿಯರನ್ನು ಕರೆದುಕೊಂಡು ಬರುತ್ತಾನೆ. ಹನ್ನೆರಡು ವರ್ಷಗಳ ಕಾಲ ತಂದೆಯಿಂದ ದೂರ ಉಳಿದ ತಾಯಿಯಂದಿರಿಗೆ ಒಂದು ಪರೀಕ್ಷೆ ಮಾಡುತ್ತಾನೆ. ಒಂದು ಕುಂಡದಲ್ಲಿ ಬೆಂಕಿ ಹಾಕಿ ಏಳು ಮಂದಿ ತಾಯಿಯಂದಿರೆ ಮತ್ತು ಏಳು ಮಂದಿ ತಂದೆಯಿಂದರೆ ನನ್ನ ಹೊತ್ತುಕೊಂಡು ಈ ಬೆಂಕಿಯಲ್ಲಿ ಜಗಿಯಿರಿ ನಿಮ್ಮಗಳ ಪತಿವ್ರತೆ ಧರ್ಮ ತಣ್ಣಗಿದ್ದರೆ ಈ ಬೆಂಕಿಯಲ್ಲ ಹೋಗಿ ಹಾಲಾಗುತ್ತದೆ. ನಿಮ್ಮಗಳ ಪತಿವ್ರತೆ ಧರ್ಮ ಹಾಳಾಗಿದ್ದರೆ ನಾವೆಲ್ಲರೂ ಇದರಲ್ಲಿ ಸುಟ್ಟು ಹೋಗುತ್ತೇವೆ ಎಂದು ತಿಳಿಸಿದ. ಆಗ ಬೆಂಕಿ ಕುಂಡದಲ್ಲಿ ಎಲ್ಲರೂ ಒಟ್ಟಾಗಿ ಜಗಿಯುತ್ತಾರೆ. ಆಗ ಬೆಂಕಿ ಎಲ್ಲ ಹೋಗಿ ಹಾಲು ಹುಕ್ಕುತ್ತಾ ಹರಿದು ಬಂತು. ಹಾಲಿನೊಳಗೆ ಮುಳುಗಿ ಮುಳುಗಿ ತೇಲುತ್ತಿದ್ದರು. ಏಳು ಸಾವಿರ ದಂಡಿನವರು ಕೈಹಿಡಿದು ಎಲ್ಲರನ್ನೂ ಮೇಲಕ್ಕೇಳೆದರು. ಆಗ ಮಗ ರಾಮದೇವನು ಹೇಳುತ್ತಾನೆ ಸತ್ಯವಂತರಮ್ಮ ಹೆಣ್ಣುಮಕ್ಕಳೆ ಗಂಡಂದಿರು ಹೋಗಿ ಮಕ್ಕಾಮಸೀದಿಯಲ್ಲಿ ಕಾಯ್ದುಕೊಂಡು ಬಿದ್ದರೆ, ಇಲ್ಲಿ ತಾವುಗಳು ಪತಿವ್ರತ ಧರ್ಮ ಕಾಯ್ದುಕೊಂಡು ಅರಮನೆಯೊಳಗೆ ನಿದ್ದಿ ಮಾಡಿದರು. ಹೆಣ್ಣು ಅಂದ್ರೆ ಮನಿಮುರಿಯೊಕು ಆದ ಆದೇ ಮನಸ್ಸು ಮಾಡಿದರೆ ಮನೆಬೆಳಗಕು ಆದ. ಆದಕಾರಣ ಹುಟ್ಟಿದರೆ ಇಂಥ ಪತಿವ್ರತೆಯ ಹೆಣ್ಣುಮಕ್ಕಳು ಈ ಭೂಲೋಕದಲ್ಲಿ ಹುಟ್ಟಬೇಕು.

ಸಣ್ಣ ಬಾಲನಾಗಮ್ಮನ ಕರೆದುಕೊಂಡು ಎಲ್ಲರೂ ಅರಮನೆಗೆ ನಡೆದುಬಂದು ಮಗನಿಗೆ ಶೃಂಗಾರಿಸಿ ಹಂದಿಗೆ ಹುಟ್ಟುವ ಹದಿನಾರು ಮಕ್ಕಳು ಹುಲಿಗೊಟ್ಟೋದು ಒಂದೇ ಮಗು ಎಂದು ಕೊಂಡಾಡಿ ಅಪ್ಪಾ ಕಂದ ರಾಮದೇವ ಪಾಪ–ಪುಣ್ಯ ಕಣ್ಣುಮುಟ್ಟಿ ನೋಡಲು ಮುಂದೆ ಕಲಿಯುಗ ಹುಟ್ಟುತ್ತಿರುವುದು. ಕಲಿಯುಗದೊಳಗೆ ದೊರೆ ರಾಜನಾಗಿ ನೀನು ಬಾಳು ಎಂದು ಧರ್ಮದ ದಾರಿ ನೀನು ಹಿಡಿ ಕರ್ಮದ ದಾರಿಗೆ ಕೈ ಹಾಕಬೇಡ, ಧರ್ಮಿಷ್ಠನಾಗಿ ನೀನು ಬಾಳಬೇಕೆಂದು ಏಳು ತಾಯಂದಿರು ಏಳು ಮಂದಿ ತಂದೆಯವರು ತಮ್ಮ ಮಗನ ತೆಲಿಮ್ಯಾಲ ಆರ್ಶಿವಾದ ನೀಡಿ ಅವರೆಲ್ಲರೂ ಸ್ವರ್ಗಲೋಕದ ದಾರಿ ಹಿಡಿದಿದ್ದಾರೆ.

ಬಾವಾಜಿ ಕುರಿತು ರಾಮದೇವರು ಹೀಗೆ ಹೇಳುತ್ತಾನೆ. ಇಲ್ಲಿಗೆ ನಮ್ಮವ್ವನ ತಂದು ಹನ್ನೆರಡು ವರ್ಷವಾಯಿತು. ನಮ್ಮವ್ವನನ್ನು ಮುಟ್ಟಿಲ್ಲ, ತಟ್ಟಿಲ್ಲ, ಹೇಳದ್ಹಂಗೆ ನಮ್ಮವ್ವನ ಮಾತು ಕೇಳಿಕೊಂಡು ಬಾವಾಜಿ ಬಂದಿರುವನು. ಇವನು ಸುಟ್ಟು ಹೀಗೆ ಹೋಗಬಾರದೆಂದು ಗಚ್ಚಿನ ಸಿಮೆಂಟ್ ಹಾಕಿ ಗಚ್ಚಿನ ದರ್ಗಾವನ್ನು ಕಟ್ಟಿದ, ಫಕಿರರನ್ನು ಕರೆಸಿ ವರುಷಕ್ಕೊಮ್ಮೆ ಜಾತ್ರೆ ನಡೆಯುವಂತೆ ಮಾಡಿ ಸತ್ಯವಂತರು ಸತ್ತಿಲ್ಲ; ಸತ್ಯವಂತರು ಮತ್ತೆ ಹುಟ್ಟಿಬರುತ್ತಾರೆ.

ಸಮಾಜಕ್ಕೆ ಇಂತಹ ಒಂದು ಒಳ್ಳೆಯ ಸಂದೇಶವನ್ನು ನೀಡುವಂತಹ ನೀತಿ ಕಥೆಯನ್ನು ಯಾದಗಿರಿ ಜಿಲ್ಲೆಯ ಶಹಾಪೂರ ತಾಲೂಕಿನ ರಾಜ್ಯಪ್ರಶಸ್ತಿ ವಿಜೇತೆ ಬುರ್ರಕಥಾ ಲಕ್ಷ್ಮೀಬಾಯಿ ಮತ್ತು ಸಂಗಡಿಗರು ಈ ಕಥೆಯನ್ನು ಕಾವ್ಯದೊಂದಿಗೆ ನಿರೂಪಿಸುತ್ತಾ ಅದ್ಭುತವಾಗಿ ಹಾಡುತ್ತಾರೆ.

**ವಾದ್ಯಗಳು ತಯಾರಿಕೆ ಮತ್ತು ನುಡಿಸುವ ಕ್ರಮ**

ಬುರ್ರಕಥಾ ಮೇಳದಲ್ಲಿ ಮೂರು ಮುಖ್ಯವಾದಂತಹ ವಾದ್ಯಗಳು ಕಂಡುಬರುತ್ತವೆ.

1. ತಂಬೂರಿ. 2. ಗುಮ್ಮಟೆ, 3. ತಾಳ, 4. ಗಗ್ಗರಿ ಅಥವಾ ಚಿಟಕಿ ತಾಳ

ನಾಲ್ಕು ತಂತಿಯ ಈ ತಂಬೂರಿ ನೀಲಗಾರರ ತಂಬೂರಿಯನ್ನು ಹೋಲುತ್ತದೆ. ಶೃತಿಗಾಗಿ ಉಪಯೋಗಿಸುವ ಈ ತಂಬೂರಿಯನ್ನು ನಾಲ್ಕು ತಂತಿಗಳಿಂದ ತಯಾರಿಸಲಾಗಿರುತ್ತದೆ. ಈ ತಂಬೂರಿ ಸಾಮಾನ್ಯವಾಗಿ ಶಾಸ್ತ್ರೀಯ ಸಂಗೀತದ ತಾನ್ಪೂರದಂತೆ(ತಂಬೂರಿ) ಕಂಡರು ಸಹ ಬುರ್ರಕಥಾ ತಂಬೂರಿ ದಂಡಿಯ ಮೇಲೆ ನಾಗಸರ್ಪದ ಹೆಡೆ ಮಾದರಿ ಕೆತ್ತನೆ ಅಳವಡಿಸಿರುತ್ತಾರೆ. ಆದರೆ ಶಾಸ್ತ್ರೀಯ ಸಂಗೀತದ ತಂಬೂರಿಯ ನಾದದಷ್ಟು ಇಂಪಾಗಿ ಇರುವುದಿಲ್ಲ ಮತ್ತು ಶಾಸ್ತ್ರೀಯ ಸಂಗೀತದ ತಂಬೂರಿಯಷ್ಟು ಉದ್ದವಿರುವುದಿಲ್ಲ.



ಈ ಬುರ್ರಕಥಾ ತಂಬೂರಿಯನ್ನು ಹಲಸಿನ ಮರದಿಂದ ತಯಾರಿಸಲಾಗಿದ್ದು, ಶೃತಿಗಾಗಿ ನಾಲ್ಕು ತಂತಿಗಳನ್ನು ಬಿಗಿದಿರುತ್ತಾರೆ. ತಂಬೂರಿಯ ದಂಡಿಗೆಯ ಮೇಲೆ ನಾಗರ ಹೆಡೆಯಂತೆ ಸುಂದರವಾದ ಕೆತ್ತನೆಯನ್ನು ಮಾಡಿಸಿರುತ್ತಾರೆ. ತಂಬೂರಿಯ ತಂತಿ ಶ್ರುತಿಗೊಳಿಸಲು ತಂಬೂರಿಯ ತುದಿಗೆ ನಾಲ್ಕು ರಂಧ್ರಗಳನ್ನು ಹಾಕಿ ಆ ರಂಧ್ರಕ್ಕೆ ಕೀಲು ಬುರಡೆಗಳನ್ನು ಸೇರಿಸಲಾಗಿರುತ್ತದೆ. ಈ ರೀತಿಯಾಗಿ ರಂಧ್ರದೊಳಗೆ ಸೇರಿಸಲಾಗಿದ್ದ ಕೀಲುಬುರಡೆಗಳಿಗೆ ಕೆಳಗಿಂದ ಎಳೆದ ನಾಲ್ಕು ತಂತಿಗಳನ್ನು ಕಟ್ಟಿ ಆ ಕೀಲು ಬುರಡೆಗಳು ತಿರಿಗಿಸುವುದರ ಮೂಲಕ ತಂಬೂರಿಯನ್ನು ಶ್ರುತಿಗೊಳಿಸುತ್ತಾರೆ.

ಈ ತಂಬೂರಿಯನ್ನು ಮುಖ್ಯ ಹಾಡುಗಾರ ಅಥವಾ ಕಥೆಗಾರ ಮೇಳ ಪ್ರಾರಂಭಕ್ಕಿಂತ ಮುಂಚೆ ತಂಬೂರಿಯನ್ನು ತನ್ನ ಧ್ವನಿಗನುಸಾರವಾಗಿ ಶ್ರುತಿಗೊಳಿಸಿಕೊಂಡು ಈ ತಂಬೂರಿಯನ್ನು ಕೊರಳಿನಲ್ಲಿ ಹಾಕಿಕೊಂಡು

ಬಲಗೈನ ತೋರುಬೆರಳಿನಿಂದ ತಂತಿಯನ್ನು ಮೀಟುವುದರಿಂದ ಸುಮಧುರ ವಾದಂತಹ ನಾದ ಕೇಳಿ ಬರುತ್ತದೆ. ಹಾಡುವ ಸಂದರ್ಭದಲ್ಲಿ ತಾಳ–ಲಯಕ್ಕನುಸಾರವಾಗಿ ತಂಬೂರಿ ನುಡಿಸುವುದು ಕಂಡುಬರುತ್ತದೆ. ಸ್ವತಃ ಮುಖ್ಯ ಗಾಯಕನೆ ತಂಬೂರಿಯನ್ನು ನುಡಿಸುತ್ತಾ ಹಾಡುವುದರಿಂದ ಶ್ರುತಿ ತಾಳ ಮತ್ತು ಲಯದ ಗತಿಯಲ್ಲಿ ಹಾಡು ಗಡಿಯಾರದೊಳಗಿರುವ ಮುಳ್ಳಿನ ರೀತಿ ಸಮನಾಗಿ ನಿರಂತರವಾಗಿ ನಡೆದಿರುತ್ತದೆ. ಒಂದೊಂದು ಮಾತ್ರೆಯ ಒಂದೊಂದು ಬಾರಿ ಈ ತಂಬೂರಿಯ ಮೀಟುವುದು ಕಂಡುಬರುತ್ತದೆ.





**2. ಗುಮ್ಮಟೆ ವಾದ್ಯ:** ಇದೊಂದು ವಿಶೇಷ ವಾದ್ಯವೆಂದೇ ಹೇಳಬಹುದು. ಈ ವಾದ್ಯ ಬುರ್ರಕಥಾ ಮೇಳದಲ್ಲಿ ಬಿಟ್ಟರೆ ಬೇರೆ ಯಾವ ಮೇಳದಲ್ಲಿಯೂ ಸಹ ಕಂಡಬರುವುದಿಲ್ಲ. ಕಬ್ಬಿಣದಿಂದ ತಯಾರಿಸಲಾದ ಗಾಲಿಯನ್ನು ಉಡದ ಚರ್ಮದ ಮೇಲೆ ಇಟ್ಟು ಆದರ ಅಥವಾ ಚರ್ಮದ ಎಳೆಯಿಂದ ಸರಪಳಿಯಂತೆ ಪೋಣಿಸಿ ಮುಚ್ಚಳವನ್ನು ತಯಾರಿಸಲಾಗುತ್ತದೆ. ಈ ರೀತಿಯಾಗಿ ತಯಾರಿಸಲಾದ ಮುಚ್ಚಳವನ್ನು ಮಣ್ಣು, ತಾಮ್ರ ಅಥವಾ ಹಿತ್ತಾಳೆಯಿಂದ ತಯಾರಿಸಲಾದ ನೀರಿನ ಹೂಜಿಯಾಕಾರದ ಒಂದೇ ಕಡೆ ಅಗಲವಾಗಿರುವ ಬಾಯಿ ಮತ್ತೊಂದು ಕಡೆ ಚಿಕ್ಕದಾಗಿರುವ ಬಾಯಿ. ಅಗಲವಾಗಿರುವ ಈ ಪಡಗದ ಬಾಯಿಗೆ ಮುಚ್ಚಳವನ್ನು ಮುಚ್ಚಿ ಈ ಮುಚ್ಚಳವನ್ನು ಬಿಗಿಯಾಗಿ ಕಟ್ಟಲು ಮುಚ್ಚಳದ ಸುತ್ತ ಒಂಬತ್ತು ರಂಧ್ರಗಳು ಹಾಕಿರುತ್ತಾರೆ. ಆ ರಂಧ್ರದೊಳಗೆ ಹಗ್ಗವನ್ನು ಸೇರಿಸಿ ಈ ಹಗ್ಗವನ್ನು ಎಳೆಯಲು ಆಶ್ರಯಗಾಗಿ ಚಿಕ್ಕದಾಗಿರುವ ಪಡಗದ ಬಾಯಿಯ ಭಾಗದಲ್ಲಿ ಕಬ್ಬಿಣದಿಂದ ತಯಾರಿಸಲಾದ ಗಾಲಿಯನ್ನು ಹಾಕಿ ಮೇಲೆ ಮುಚ್ಚಳದ ರಂಧ್ರದೊಳಗೆ ಹಾಕಿರುವ ಹಗ್ಗವನ್ನು ಈ ಕೆಳಗಿನ ಗಾಲಿಗೆ ಸೇರಿಸಿ ಬಿಗಿದುಕಟ್ಟಿ ಗುಮ್ಮಟೆ ವಾದ್ಯವನ್ನು ತಯಾರಿಸಲಾಗಿರುತ್ತದೆ. ಈ ಗುಮ್ಮಟೆ ವಾದ್ಯವನ್ನು ಶ್ರುತಿಗೊಳಿಸಲು ಗುಮ್ಮಟೆಯ ವಾದ್ಯದ ಸುತ್ತ ಹಗ್ಗದಿಂದ ಸರಪಳಿಯ ರೀತಿ ಹೆಣೆದಿರುತ್ತಾರೆ. ಇದನ್ನು ಹಿಂದಕ್ಕೆ ಮುಂದಕ್ಕೆ ಸರಿಸುವುದರಿಂದ ಗುಮ್ಮಟೆ ವಾದ್ಯದ ಶ್ರುತಿ ಹೆಚ್ಚು ಕಡಿಮೆಯಾಗುತ್ತದೆ.

ಬುರ್ರಕಥಾ ಮೇಳದಲ್ಲಿ ಹಿಮ್ಮೇಳ ಗಾಯಕರು ಮುಮ್ಮೇಳ ಗಾಯಕನಿಗೆ ಸಾಥಿದಾರನಾಗಿ ಈ ಗುಮ್ಮಟೆ ವಾದ್ಯವನ್ನು ನುಡಿಸುತ್ತಾರೆ. ಹಿಮ್ಮೇಳ ಗಾಯಕ ಮುಮ್ಮೇಳ ಗಾಯಕನ ಹಾಡಿಗೆ ತಕ್ಕಂತೆ ಈ ಗುಮ್ಮಟೆ ವಾದ್ಯವನ್ನು ಎಡಗೈಯಿಂದ ತೆರೆದಿರುವ ಕುತ್ತಿಗೆಯ ಭಾಗವನ್ನು ತಾಳ, ಲಯಕ್ಕನುಸಾರವಾಗಿ ಮುಚ್ಚಿ ತೆರೆಯುತ್ತಾ ಬಲಗೈಯಿಂದ ಮುಚ್ಚಳಿಕೆಯ ಉಡದ ಚರ್ಮದ ಭಾಗವನ್ನು ನುಡಿಸುತ್ತಾ ಸುಮಧುರವಾದಂತ ನಾದ ಕೇಳಿ ಬರುವಂತೆ ಮಾಡುತ್ತಾನೆ. ಮುಖ್ಯಗಾಯಕನ ಧ್ವನಿಗನುಗುಣವಾಗಿ ಮತ್ತು ತಂಬೂರಿಯ ನಾದದ ಶ್ರುತಿಗನುಸಾರವಾಗಿ ಈ ಗುಮ್ಮಟೆ ವಾದ್ಯವನ್ನು ಶ್ರುತಿಗೊಳಿಸಲಾಗುತ್ತದೆ.

ಈ ವಾದ್ಯದಲ್ಲಿ ಹೆಚ್ಚಾಗಿ ಕೆಹರವಾ, ಕವಾಲಿ ಮತ್ತು ದಾದ್ರ ತಾಳಗಳ ನುಡಿಸುವುದು ಕಂಡುಬರುತ್ತದೆ. ಶಾಸ್ತ್ರೀಯ ಬೋಲುಗಳು ನುಡಿಸದಿದ್ದರು ಅವರು ನುಡಿಸುವ ಪೆಟ್ಟು ಮಾತ್ರೆಗಳು ಮಾತ್ರ ಕೆಹರವಾ, ದಾದ್ರ ಮತ್ತು ಭಜನ ತಾಳಗಳದ್ದಾಗಿರುತ್ತದೆ.



**3. ತಾಳ :** ಬುರ್ರಕಥಾ ಮೇಳದಲ್ಲಿ ಮುಮ್ಮೇಳ ಗಾಯಕನ ಹಾಡಿಗೆ ಧ್ವನಿಗೂಡಿಸುತ್ತ ಹಿಮ್ಮೇಳ ಗಾಯಕ ಈ ತಾಳವನ್ನು ನುಡಿಸುತ್ತಾನೆ. ಬುರ್ರಕಥಾ ಮೇಳದಲ್ಲಿ ನುಡಿಸುವುದಷ್ಟೇ ಅಲ್ಲದೇ ಭಜನೆ ಮೇಳದಲ್ಲಿ ಗೊಂದಲಿಗರ ಮೇಳದಲ್ಲಿ ಮತ್ತು ಸುಗಮ ಸಂಗೀತದ ದಾಸವಾಣಿ ಹಾಡುವ ಸಂದರ್ಭದಲ್ಲಿ ಕೂಡ ಈ ತಾಳವನ್ನು ನುಡಿಸಲಾಗುತ್ತದೆ.

ಕಂಚಿನಿಂದ ತಯಾರಿಸಲಾದ ಈ ತಾಳ ವಾದ್ಯವು ಸಾಮಾನ್ಯ ಆಕಾರ ಅಳತೆಗಳ್ಳುಳ 2.30, 2.30 ಅಗಲವಾದ ಎರಡು ಬಿಲ್ಲೆಗಳನ್ನು ಮಾಡಿ ಈ ಬಿಲ್ಲೆಗಳ ಮೈ ಚಪ್ಪಟೆಯಾಗಿರುತ್ತದೆ. ಈ ಚಪ್ಪಟೆಯಾಗಿರುವ ಬಿಲ್ಲೆಗಳ ಮಧ್ಯೆ ಹೊಟ್ಟೆಯಂತೆ ಉಬ್ಬಿಕಂಡಿರುತ್ತದೆ. ಒಂದು ತಾಳವನ್ನು ಎಡಗೈಯಲ್ಲಿ ಹಿಡಿದುಕೊಳ್ಳಲು ಮತ್ತೊಂದು ತಾಳ ಬಲಗೈಯಲ್ಲಿ ಹಿಡಿದುಕೊಳ್ಳಲು ಹೊಟ್ಟೆಯಂತೆ ಇಬ್ಬಿರುವ ತಾಳಗಳ ಮಧ್ಯೆ ರಂಧ್ರ ಮಾಡಿ ದಾರದಿಂದ ಕಟ್ಟಿ ಕೈಯಲ್ಲಿ ಹಿಡಿದುಕೊಳ್ಳುವಂತೆ ಮಾಡಿರುತ್ತಾರೆ. ಹೀಗೆ ತಯಾರಿಸಲಾದ ತಾಳಗಳನ್ನು ಬಲಗೈಯಲ್ಲಿ ಒಂದು, ಎಡಗೈಯಲ್ಲಿ ಒಂದು ತಾಳಗಳನ್ನು ಹಿಡಿದುಕೊಂಡು ಬಲಗೈಯಲ್ಲಿರುವ ತಾಳದಿಂದ ಎಡಗೈಯಲ್ಲಿರುವ ತಾಳವನ್ನು ಬಡಿಯುವುದುರಿಂದ ಚಮ್ ಚಮ್ ಎಂದು ನಾದ ಕೇಳಿಬರುತ್ತದೆ.

ಬುರ್ರಕಥಾ ಮೇಳದಲ್ಲಿ ಅವಶ್ಯಕವಾಗಿ ಈ ಕಂಚಿನ ತಾಳಗಳನ್ನು ಬಳಸುತ್ತಾರೆ. ಹಾಡುಗಾರಿಕೆಯಲ್ಲಿ ತಾಳ ಲಯ ಸೂಚಿಸುವುದಕ್ಕಾಗಿ ಇರುವ ಗುಮ್ಮಟೆ ಮತ್ತು ಗಗ್ಗರಿ ವಾದ್ಯಗಳಂತೆ ಈ ತಾಳವು ಕೂಡ ಮುಖ್ಯವಾಗಿ ಕಂಡುಬರುತ್ತದೆ. ಐದು ಜನರಿರುವ ಬುರ್ರಕಥಾ ಮೇಳದಲ್ಲಿ ಈ ತಾಳ ನುಡಿಸಲಿಕ್ಕಾಗಿಯೇ ಇಬ್ಬರು ಹಿಮ್ಮೇಳ ಕಲಾವಿದರು ಇರುತ್ತಾರೆ. ಮುಮ್ಮೇಳ ಗಾಯಕನ ಹಾಡುಗಾರಿಕೆಗೆ ಹಿಮ್ಮೇಳ ಗಾಯಕನಾಗಿ ಹಾಡುವುದರ ಜೊತೆಗೆ ಹಾಡಿಗೆ ತಕ್ಕಂತೆ ತಾಳವನ್ನು ನಿರಂತರವಾಗಿ ನುಡಿಸುತ್ತಾ ಬುರ್ರಕಥಾ ಮೇಳಕ್ಕೆ ಲಯಕರ್ತನಾಗಿ ನಿಂತಿರುತ್ತಾನೆ.

ಬುರ್ರಕಥಾ ಮೇಳದಲ್ಲಿ ಮುಖ್ಯಗಾಯಕ ಹಾಡುವ ಸಂದರ್ಭದಲ್ಲಿ ಮುಮ್ಮೇಳ ಗಾಯಕರು ತಾಳ ನುಡಿಸುವುದಿಲ್ಲ. ಮುಮ್ಮೇಳ ಗಾಯಕ ಹಾಡಿದ ನಂತರ ತಾವು ಹಾಡುವ ಸಂದರ್ಭದಲ್ಲಿ ಮಾತ್ರ ತಾಳವನ್ನು ನುಡಿಸುತ್ತಾರೆ. ಇಲ್ಲಿ ದಾದ್ರ, ಕೆಹರವಾ ಮತ್ತು ಭಜನೆ ಯಾವುದೇ ತಾಳವಿರಲಿ ಆ ತಾಳದ ಮಾತ್ರೆಗಳಿಗೆ ತಕ್ಕಂತೆ ಒಂದೊಂದು ಮಾತ್ರೆಗಳಿಗೂ ಒಂದೊಂದು ಪೆಟ್ಟು ತಾಳ ನುಡಿಸುತ್ತಾರೆ.

**4. ಗಗ್ಗರ ವಾದ್ಯ :** ಬುರ್ರಕಥಾ ಹಾಡುಗಾರಿಕೆಯಲ್ಲಿ, ನೀಲಗಾರರ ಹಾಡುಗಾರಿಕೆಯಲ್ಲಿ ಮತ್ತು ಹಳ್ಳಿಯಲ್ಲಿ ಎತ್ತಿನ ಕೊಂಬುಗಳಲ್ಲಿ ಹಾಕುವ ಗಗ್ಗರಿ ವಾದ್ಯವನ್ನು ಕಂಚು ಅಥವಾ ಹಿತ್ತಾಳೆಯಿಂದ



ಗೋಲಕಾರದಲ್ಲಿ ಮಾಡಿ ನುಡಿಸುವ ಸಲುವಾಗಿ ನಡುವೆ ಬೆರಳು ಸೇರಿಸಲು ಅಗಲವಾದ ಜಾಗ ಬಿಟ್ಟಿರುತ್ತಾರೆ. ಗುಂಡಾಕಾರದಲ್ಲಿರುವ ಗಗ್ಗರದ ಒಳಭಾಗದಲ್ಲಿ ಸಣ್ಣ ಸಣ್ಣ ಗುಂಡುಗಳು ಹಾಕಿ ಬೆರಳಲ್ಲಿ ಸೇರಿಸಿಕೊಂಡು ನುಡಿಸುವುದರಿಂದ ಝುಲ್ ಝುಲ್ ಎಂಬ ನಾದ ಹೊರಹೊಮ್ಮುತ್ತದೆ.

ಬುರ್ರಕಥಾ ಮೇಳದಲ್ಲಿ ಪಕ್ಕವಾದ್ಯಗಳಾಗಿ ಕಂಡುಬರುವ ತಂಬೂರಿ, ಗುಮ್ಮಟೆ ಮತ್ತು ತಾಳಗಳಂತೆ ಈ ಗಗ್ಗರಿ ವಾದ್ಯವು ವಿಶೇಷವಾಗಿ ಕಂಡುಬರುತ್ತದೆ. ಬುರ್ರಕಥಾ ಮೇಳದಲ್ಲಿ ಮುಖ್ಯಗಾಯಕ ಬಲಗೈಯಲ್ಲಿ ತಂಬೂರಿ ವಾದ್ಯವನ್ನು ನುಡಿಸುತ್ತಾ ಎಡಗೈ ಹೆಬ್ಬೆರಳು ಮಧ್ಯ ಬೆರಳಿಗೆ ಈ ಗಗ್ಗರಿ ವಾದ್ಯವನ್ನು ಸೇರಿಸಿಕೊಂಡು, ತಾವು ಹಾಡುವ ಹಾಡಿಗೆ ತಕ್ಕಂತೆ ಹೆಬ್ಬೆರಳಿನಲ್ಲಿರುವ ಗಗ್ಗರಿಯಿಂದ ಮಧ್ಯ ಬೆರಳಿನಲ್ಲಿರುವ ಗಗ್ಗರಿ ವಾದ್ಯವನ್ನು ಬಡಿಯೊಂದರಿಂದ ಝುಲ್ ಝುಲ್ ಎಂದು ನಾದ ಕೇಳಿಬರುತ್ತದೆ. ಈ ಗಗ್ಗರಿ ವಾದ್ಯವನ್ನು ಸುಮ್ಮನೆ ಬೇಕಾಬಿಟ್ಟಿಯಾಗಿ ನುಡಿಸುವುದಿಲ್ಲ. ದಾದ್ರ, ಕೆಹರವಾ ಮತ್ತು ಭಜನ ಮಾತ್ರೆಗಳಿಗನುಸಾರವಾಗಿ ನುಡಿಸುತ್ತಾ ಹಾಡುತ್ತಾರೆ. ಒಬ್ಬ ಗಾಯಕನಿಗೆ ಅಂದರೆ ಜಾನಪದ ಸಂಗೀತ ಗಾಯಕನಿರಬಹುದು ಅಥವಾ ಶಾಸ್ತ್ರೀಯ ಸಂಗೀತ ಗಾಯಕನಿರಬಹುದು. ಇವರ ಹಾಡುಗಾರಿಕೆಗೆ ಬೇಕಾಗಿರುವುದು ಶ್ರುತಿ ಮತ್ತು ತಾಳ, ಲಯ ಇವೆರಡು ಬಹಳ ಮಹತ್ವದ ಪಾತ್ರವನ್ನು ನಿರ್ವಹಿಸುತ್ತವೆ. 'ತಾಳ–ಮೇಳವಿಲ್ಲದ ಸಂಗೀತ ಹಾಳು ದೇಗುಲದಂತೆ'. ಆದರೆ ಬೇರೆ ಬೇರೆ ಸಂಗೀತದ ಮೇಳಗಳಲ್ಲಿ ಶ್ರುತಿ ವಾದ್ಯವನ್ನು ನುಡಿಸುವವರು ಬೇರೆ, ತಾಳ ನುಡಿಸುವವರು ಬೇರೆಯಾಗಿರುವುದರಿಂದ ಹಾಡು, ತಾಳ, ಲಯ ತಪ್ಪಬಹುದು. ತಪ್ಪದೇ ಇರಬಹುದು ಆದರೆ ಬುರ್ರಕಥಾ ಸಂಗೀತ ಮೇಳದಲ್ಲಿ ಮುಖ್ಯಗಾಯಕ ತಾನೇ ಶ್ರುತಿ, ತಾಳ, ಲಯ ನುಡಿಸುತ್ತ ಹಾಡುವುದರಿಂದ ಅವರ ಸಂಗೀತದಲ್ಲಿ ಯಾವುದೇ ತಪ್ಪುಗಳು ಕಂಡುಬರುವುದಿಲ್ಲ. ಮುಖ್ಯಗಾಯಕ ಹಾಡುವ ಸಂದರ್ಭದಲ್ಲಿ ಮಾತ್ರ ಗಗ್ಗರಿ ವಾದ್ಯವನ್ನು ನುಡಿಸುತ್ತಾ ಹಾಡುತ್ತಾನೆ. ಆದರೆ ಕಥೆ ಹೇಳುವ ಸಂದರ್ಭದಲ್ಲಿ ತಂಬೂರಿ ನಾದ ಒಂದೇ ಕೇಳಿಬರುತ್ತದೆ. ತಾವು ಹೇಳುವ ಕಥೆಗಳು ಸಾಮಾನ್ಯ ಜನರಿಗೆ ತಲುಪಲಿ ಕೇಳಲಿ ಎಂದು ಗಗ್ಗರಿ, ಗುಮ್ಮಟೆ ವಾದ್ಯಗಳು ನುಡಿಸುವುದಿಲ್ಲ.

ಕಥೆ ಹೇಳಿ ಕೊನೆಯ ಸಾಲನ್ನು ಗಗ್ಗರಿ ತಂಬೂರಿ ಗುಮ್ಮಟೆ ವಾದ್ಯಗಳ ಜೊತೆಯಲ್ಲಿ ಹಾಡುತ್ತಾರೆ. ಈ ಗಗ್ಗರಿ ವಾದ್ಯವನ್ನು ನುಡಿಸುವುದರಲ್ಲಿ ಮಾತ್ರೆಗಳ ಲೆಕ್ಕಚಾರವಿರುತ್ತದೆ.

ಉದಾಹರಣೆಗೆ ಭಜನೆ ತಾಳದಲ್ಲಿ 8 ಮಾತ್ರೆಗಳು ಕಂಡುಬರುತ್ತವೆ.

1 2 3 4 5 6 7 8 ಹೀಗೆ ಗುಮ್ಮಟೆ ವಾದ್ಯ

| +ದಿನ | ದಿನ | ದಿನ | ನಾ | ತಿನ್ನಾ | ತಿಂ | ತಿ | ನಾ | +ದಿನ | ದಿನ | ದಿನ | ನಾ | ತಿನ್ನಾ | ತಿಂ | ತಿ | ನಾ |
|---|---|---|---|---|---|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 1 | 2 | 3 | 4 | 5 | 6 | 7 | 8 |

ನುಡಿಸುವ ಕಲಾವಿದ ಈ ಭಜನ ಠೇಖವನ್ನು ದೃತ್ ಲಯದಲ್ಲಿ ನುಡಿಸುತ್ತಿದ್ದರೆ(ದೃತ್ ಎಂದರೆ ಒಂದು ಮಾತ್ರೆಯ ಕಾಲ ಖಂಡದಲ್ಲಿ ನಾಲ್ಕು ಅಕ್ಷರಗಳನ್ನು ನುಡಿಸುವುದು) ಗಗ್ಗರಿ ವಾದ್ಯವನ್ನು ಅದೇ ಎಂಟು ಮಾತ್ರದ ಭಜನ ತಾಳವನ್ನು ಮಧ್ಯ ಲಯದಲ್ಲಿ ನುಡಿಸುತ್ತಾರೆ. ಗುಮ್ಮಟೆ ಮತ್ತು ಗಗ್ಗರಿ ವಾದ್ಯ ಒಟ್ಟಿಗೆ ನುಡಿಸಿದರು. ಕೂಡ ಗುಮ್ಮಟೆ ವಾದ್ಯ ಕಲಾವಿದ ಒಂದು ಪೆಟ್ಟಿನ ಸಮಯದಲ್ಲಿ ನಾಲ್ಕು ಪೆಟ್ಟು ನುಡಿಸಿದರೆ, ಗಗ್ಗರಿ ವಾದ್ಯ ಕಲಾವಿದ ಒಂದು ಪೆಟ್ಟಿನ ಸಮಯದಲ್ಲಿ ಎರಡು ಮಾತ್ರೆಗಳನ್ನು ನುಡಿಸುತ್ತಾನೆ. ಈ ರೀತಿ ಲಯಕಾರಿ ಮಾಡಿ ಹಾಡುವುದರಿಂದ ಕೇಳುವ ಪ್ರೇಕ್ಷಕರಿಗೆ ಒಳ್ಳೊಳ್ಳೆ ವಿಚಾರಗಳನ್ನು ತಿಳಿಸುವುದರ ಜೊತೆಗೆ ಸಂಗೀತದಿಂದ ಅಮೃತವ ಉಣಿಸಿದಂತಾಗುತ್ತದೆ.

**ನೃತ್ಯ :** ಬುರ್ರಕಥಾ ಮೇಳದ ಕಲಾವಿದರ ನೃತ ಕುರಿತು ಡಾ. ಹಿ.ಚಿ. ಬೋರಲಿಂಗಯ್ಯನವರು ತಾವು ಬರೆದಿರುವ ಕರ್ನಾಟಕ ಜನಪದ ಕಲೆಗಳ ಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೬ರಲ್ಲಿ ಪ್ರಕಟಿಸಿರುವ ಪು. ೨೨೦ರಲ್ಲಿ ನೃತ್ಯ ಕುರಿತು ಹೀಗೆ ಹೇಳಿದ್ದಾರೆ. ಬುರ್ರಕಥಾ ಮೇಳದ ಪ್ರಧಾನ ಗಾಯಕ ಕಥಾ ನಿರೂಪಣೆಯನ್ನು ಬೆಳೆಸುತ್ತಾ ಕಾಲಿಗೆ ಗೆಜ್ಜೆಕಟ್ಟಿಕೊಂಡು ಎಡಗೈ ತೋರುಬೆರಳು ಹಾಗೂ ಹೆಬ್ಬೆರಳುಗಳಿಗೆ ಗಗ್ಗುರಿಯನ್ನು ಧರಿಸಿ ತಂಬೂರಿ ಮೀಟುತ್ತಾ ಕುಣಿಯುತ್ತಿರುತ್ತಾನೆ ಎಂದು ಹೇಳಿದ್ದಾರೆ. ಆದರೆ ಪ್ರಸ್ತುತ ಬುರ್ರಕಥಾ ಮೇಳದಲ್ಲಿ ಹಾಡುವುದು ವಾದ್ಯಗಳ ನುಡಿಸುವುದರ ಜೊತೆಗೆ ಹಲವಾರು ಕಥೆಗಳು ಹೇಳುವುದು ಕಂಡುಬರುತ್ತದೆ. ನೃತ್ಯ ಮಾಡುವುದು ಕಂಡುಬರುವುದಿಲ್ಲ. ಈ ಬುರ್ರಕಥೆ ಕಲಾವಿದರು ತಮ್ಮ ಹೊಟ್ಟೆಪಾಡಿಗಾಗಿ ಊರಿಂದ ಊರಿಗೆ ಮನೆಯಿಂದ ಮನೆಗೆ ಸಣ್ಣಪುಟ್ಟ ಹಾಡುಗಳನ್ನು ಹಾಡಿ ಭಿಕ್ಷೆ ಬೇಡುತ್ತಾರೆ. ಇಲ್ಲಿ ಮುಖ್ಯಗಾಯಕ ಶ್ರುತಿಗಾಗಿರುವ ತಂಬೂರಿ ವಾದ್ಯವನ್ನು ಕೊರಳಲ್ಲಿ ಹಾಕಿಕೊಂಡು ಕುಣಿಯುವುದು ಕಷ್ಟವಾಗುತ್ತದೆ. ಕಾರಣ ಮೊದಲನೆಯದ್ದು ಭಾರವಾದಂತ ತಂಬೂರಿ ಕೊರಳಲ್ಲಿ ಹಾಕಿಕೊಂಡಿರುವುದರಿಂದ ಮತ್ತೊಂದು ಕಾರಣ ಹಾಡುಗಾರಿಕೆಗೆ ಮುಖ್ಯವಾಗಿ ಬೇಕಾಗಿರುವುದು ಶ್ರುತಿ ಇಲ್ಲಿ ಮುಖ್ಯಗಾಯಕನ ಶ್ರುತಿಗಾಗಿ ಇರುವ ತಂಬೂರಿ ವಾದ್ಯವನ್ನು ಕೊರಳಲ್ಲಿ ಹಾಕಿಕೊಂಡು ಬಲಗೈಯಿಂದ ನುಡಿಸಿಕೊಂಡು ಮತ್ತು ಎಡಗೈನ ಹೆಬ್ಬರಳು ಮತ್ತು ಮಧ್ಯದ ಬೆರಳಿಗೆ ಗಗ್ಗರಿ ವಾದ್ಯವನ್ನು ನುಡಿಸುತ್ತಾ ನೃತ್ಯ ಮಾಡಿದರೆ ಶ್ರುತಿ ತಾಳ ಲಯದಲ್ಲಿ ವ್ಯಾತ್ಯಾಸ ಕಂಡುಬರುವ ಕಾರಣದಿಂದ ನೃತ್ಯ ಮಾಡದೇ ಇರುವುದಕ್ಕೆ ಕಾರಣವಿರಬಹುದು. ಆಹ್ವಾನಿಸಿದವರ ಮನೆಗೆ ಹೋಗಿ ಅಲ್ಲಿ ಸಂಗೀತ ಕಾರ್ಯಕ್ರಮ ನೀಡುತ್ತಾರೆ. ಇವರು ಯಾವುದೇ ಒಂದು ವೇದಿಕೆ ಮೇಲೆ ಕುಳಿತುಕೊಂಡು ಹಾಡುವುದರಿಂದ ಅಲ್ಲಿ ನೃತ್ಯ ಮಾಡಲಿಕ್ಕೆ ಅವಕಾಶವಿರುವುದಿಲ್ಲ. ಆದರೆ ಅವರು ಹಾಡುವ ಹಾಡಿಗೆ ತಕ್ಕಂತೆ ಕಥೆಗಳಲ್ಲಿ ಬರುವ ನಾನಾ ಪಾತ್ರಗಳು, ನಾನಾ ಸನ್ನಿವೇಶಕ್ಕೆ ತಕ್ಕಂತೆ ಹಾವಭಾವಗಳು, ಧ್ವನಿಯಲ್ಲಿ ಏರಿಳಿತಗಳು, ಕೈ ಮೇಲೆ ಎತ್ತಿ ಹಾಡುವುದು ಮಾತ್ರ ಕಂಡುಬರುತ್ತದೆ.

**ವೇಷಭೂಷಣ :** ಮೂರು ಅಥವಾ ಐದು ಜನರಿರುವ ಈ ಬುರ್ರಕಥಾ ಮೇಳದಲ್ಲಿ ಕಲಾವಿದರ ವೇಷಭೂಷಣಗಳು ಕಂಡುಬರುವುದಿಲ್ಲ. ಈ ಬುರ್ರಕಥೆ ಮೇಳದಲ್ಲಿ ಮುಖ್ಯಕಥೆಗಾರ/ಹಾಡುಗಾರ ಪುರುಷನಾಗಿದ್ದರೆ ಮಾತ್ರ ಶೃಂಗಾರದಿಂದ ತಯಾರಾಗಿ ಬಂದಿರುತ್ತಾನೆ. ತಲೆಗೆ ರುಮಾಲುಪೇಟಾ,

ಸಾಧಾರಣ ನಿಲುವಂಗಿ, ಕರಿಯ ಕೋಟು, ಹೆಗಲ ಮೇಲೆ ಜರಿಯ ಶಾಲು ಬಿಳಿ ಬಣ್ಣದ ದೋತ್ರ, ಕಾಲಲ್ಲಿ ಗೆಜ್ಜೆ, ಬಲಗೈಯಲ್ಲಿ ವಿವಿಧ ರೀತಿಯಲ್ಲಿ ಅಲಂಕಾರಗೊಂಡಿರುವ ತಂಬೂರಿ, ಎಡಗೈನ ಹೆಬ್ಬೆರಳು ಮತ್ತು ಮಧ್ಯದ ಬೆರಳುಗಳಿಗೆ ಗಗ್ಗರಿ ವಾದ್ಯಗಳು ಹಣೆಗೆ ವಿಭೂತಿ, ಕುಂಕುಮ ಈತನ ವೇಷಭೂಷಣಗಳು. ಈ ಬುರ್ರಕಥಾ ಮೇಳದಲ್ಲಿ ಮುಖ್ಯಗಾಯಕ ಅಥವಾ ಕಥೆಗಾರರಾಗಿ ಪುರುಷರಿಗಿಂತಲೂ ಮಹಿಳೆಯರೇ ಹೆಚ್ಚಾಗಿ ಕಂಡುಬರುತ್ತಾರೆ. ಪುರುಷರು ಹಿಮ್ಮೇಳ ಗಾಯಕರಾಗಿ ಇರುವುದು ಕಂಡುಬರುತ್ತದೆ. ಒಂದುವೇಳೆ ಈ ಬುರ್ರಕಥಾ ಮೇಳದಲ್ಲಿ ಮುಖ್ಯ ಕಥೆಗಾರರಾಗಿ ಮಹಿಳೆಯರಿದ್ದಾರೆ, ಆ ಮಹಿಳೆಯ ವೇಷಭೂಷಣ ಈ ರೀತಿಯಾಗಿ ಕಂಡುಬರುತ್ತದೆ. ವಿವಿಧ ರೀತಿಯ ಬಣ್ಣ ಬಣ್ಣದಿಂದ ಕೂಡಿದ ಸೀರೆ, ಕುಪ್ಪಸ, ಹಣೆಗೆ ವಿಭೂತಿ, ಕುಂಕುಮ, ವಿವಿಧ ರೀತಿಯಲ್ಲಿ ಅಲಂಕಾರಗೊಂಡಿರುವ ಬಲಗೈಯಲ್ಲಿ ತಂಬೂರಿ ಮತ್ತು ಎಡಗೈನ ಹೆಬ್ಬೆರಳು ಮತ್ತು ತೋರುಬೆರಳುಗಳಿಗೆ ಗಗ್ಗರಿ ವಾದ್ಯ ಈ ರೀತಿಯಾಗಿ ಇವರ ವೇಷಭೂಷಣಗಳು ಕಂಡುಬರುತ್ತವೆ. ಇನ್ನುಳಿದ ಹಿಮ್ಮೇಳ ಕಲಾವಿದರು ಸಾಮಾನ್ಯ ಮಡಿವಸ್ತ್ರ, ಹಣೆಯಲ್ಲಿ ಕುಂಕುಮ ಮತ್ತು ವಿಭೂತಿಧರಿಸಿಕೊಂಡಿರುತ್ತಾರೆ.

ವೇಷಭೂಷಣಗಳು, ಹಂಡಿಜೋಗಿ, ಗೊಂಧಳಿ ಸಮುದಾಯದವರಂತೆ ಅಡಂಬರ ಜನರ ಆಕರ್ಷಣೆಗೆ ಒಳಗಾಗುವಂತೆ ವೇಷಭೂಷಣಗಳು ಕಂಡುಬರುವುದಿಲ್ಲ. ವೇಷಭೂಷಣದಿಂದ ಜನರ ಆಕರ್ಷಣೆ ಮಾಡದಿದ್ದರು ಒಳಗಾಗದಿದ್ದರು ತಮ್ಮ ಹಾಡು, ವಾದ್ಯ ಮತ್ತು ಕಥೆಗಳ ಮೂಲಕ ಜನರನ್ನು ಆಕರ್ಷಿಸುತ್ತಾರೆ.

ಈ ಬುಡ್ಗಜಂಗಮ ಕಲಾವಿದರು ಪೌರಾಣಿಕ, ಚಾರಿತ್ರಿಕ ಮತ್ತು ಸಾಮಾಜಿಕ ಚರಿತ್ರೆಗಳನ್ನು ತಮ್ಮ ಸಂಗೀತದ ಮೂಲಕ ಸಮಾಜದ ಜನರಿಗೆ ಸಂದೇಶ ನೀಡುವ ಕೆಲಸ ಮಾಡುತ್ತಾರೆ. ಹಲವಾರು ಕಥೆಗಳನ್ನು ಹಾಡುವುದರ ಜೊತೆಗೆ ಪ್ರಸ್ತುತ ಸಮಾಜದಲ್ಲಿ ನಡೆದಿರುವ ಘಟನೆಗಳ ಕುರಿತು ಹಾಡುತ್ತಾರೆ. ವರದಕ್ಷಿಣೆ ಪಿಡುಗು, ಹೆಣ್ಣುಮಕ್ಕಳ ದೌರ್ಜನ್ಯ, ಲೈಂಗಿಕ ಸುರಕ್ಷತೆಯ ಜಾಗೃತಿ ಕುರಿತು, ಪರಿಸರ ಮಾಲಿನ್ಯ ಕುರಿತು ಇನ್ನು ಹಲವಾರು ಕಥೆಗಳನ್ನು ತಮ್ಮ ಬುರ್ರಕಥಾ ಮೇಳದಲ್ಲಿ ಹಾಡುತ್ತಾರೆ. ಈ ಕಾರಣದಿಂದಲೇ ಆರೋಗ್ಯ ಇಲಾಖೆ, ಪ್ರವಾಸೋದ್ಯಮ ಇಲಾಖೆ, ಕ್ರೀಡಾ ಇಲಾಖೆಯವರು ಈ ಬುಡ್ಗಜಂಗಮ ಕಲೆಯನ್ನು ಒಂದು ಮಾಧ್ಯಮವನ್ನಾಗಿ ಬಳಸಿಕೊಳ್ಳಲಾಗಿದೆ.

**ಹಗಲು ವೇಷಗಾರಿಕೆ :** ಹಗಲು ಹೊತ್ತಿನಲ್ಲಿ ಪುರುಷ ಕಲಾವಿದರು ರಾಮಾಯಣ ಮಹಾಭಾರತದ ಕಥೆಯಲ್ಲಿ ಹಲವಾರು ವೇಷಗಳನ್ನು ಹಾಗೂ ಸಾಮಾಜಿಕ ವೇಷಗಳನ್ನು ಹಾಕಿಕೊಂಡು ಊರಿನ ಮಧ್ಯೆ ಹಾಗೂ ಊರಿನ ಪ್ರತಿಯೊಂದು ಹೋಟೆಲ್ ಮುಂದೆ, ಪ್ರತಿಯೊಂದು ಮನೆಮುಂದೆ, ಎಲ್ಲೆಲ್ಲಿ ಜನಸಂಖ್ಯೆ ಹೆಚ್ಚಾಗಿರುತ್ತದೆಯೋ ಅಲ್ಲಿ ಹೋಗಿ ಪ್ರತಿದಿನವು ಬೇರೆ ಬೇರೆ ವೇಷ ಹಾಕಿಕೊಂಡು ಬೀದಿನಾಟಕ ಪ್ರದರ್ಶನ ನೀಡುತ್ತಾರೆ. ಬಹುಶಃ ಹಳ್ಳಿ–ಹಳ್ಳಿಗಳಲ್ಲಿ ರಾಮಾಯಣ ಮಹಾಭಾರತ ಕಥೆಗಳು ಮತ್ತು ಅವುಗಳಲ್ಲಿ ಪಾತ್ರಗಳ ಪರಿಚಯ, ರಾಮಾಯಣ ಮಹಾಭಾರತದ ಕಥೆಯ ತಾತ್ಪರ್ಯ, ರಾಮಾಯಣ ಮತ್ತು ಮಹಾಭಾರತದಲ್ಲಿ ಯುದ್ಧ ನಡೆಯಲು ಕಾರಣಗಳೇನು ಇವೆಲ್ಲ ಸಾಮಾನ್ಯ

ಜನರಿಗೂ ತಮ್ಮ ಕಥೆಯ ಪ್ರದರ್ಶನ ಮೂಲಕ ಒಂದು ಸಂದೇಶವನ್ನು ತಿಳಿಸಿಕೊಟ್ಟಂತ ಕಲಾವಿದರೆಂದರೆ ಅದು ಬುರ್ರಕಥಾ ಸಮುದಾಯದ ಹಗಲು ವೇಷ ಕಲಾವಿದರು ಎಂದರೆ ತಪ್ಪಾಗಲಾರದು. ಈ ರೀತಿಯಾಗಿ ಕಲೆಯ ಪ್ರದರ್ಶನ ಮಾಡಿದ ನಂತರ ಕೊನೆಯ ದಿನದಲ್ಲಿಯು ವೇಷಗಳನ್ನು ಹಾಕಿಕೊಂಡು ಊರಿನ ಹಿರಿಯ ಮುಖಂಡರಾದ, ಗೌಡ, ಸಾಹುಕಾರ, ದೇಸಾಯಿ, ಪಟೇಲ ಮತ್ತು ಎಲ್ಲ ಸಾಮಾನ್ಯ ಕಲಾಪೋಷಕರ ಮನೆಮುಂದೆ ನಿಂತು ದಾಸಶ್ರೇಷ್ಠರ ಪದಗಳು, ತತ್ವಪದಕಾರರ ತತ್ವಪದಗಳು ಹಾಗೂ ಸರ್ವಜ್ಞ ಮತ್ತು ಶಿವಶರಣರ ವಚನಗಳನ್ನು ಹಾಡುವುದರ ಮುಖಾಂತರ ಕಲೆಗೆ ವಿನಯವೆ ಭೂಷಣ ಎಂಬಂತೆ ಸಂಗೀತ ಕಲೆಯ ಬಂಢಾರವಾಗಿರುವ ಈ ವೇಷಗಾರ ಕಲಾವಿದರು ಕಾಡಿ-ಬೇಡಿ ರೊಕ್ಕ-ರೂಪಾಯಿ, ಧವಸ-ಧಾನ್ಯ, ಬಟ್ಟೆ ಎಮ್ಮೆ-ಆಕಳು ಮತ್ತು ಕುರಿ-ಕೋಳಿಗಳನ್ನು ದಾನವಾಗಿ ಸ್ವೀಕರಿಸಿಬರುತ್ತಾರೆ.

**ಹಗಲು ವೇಷಗಾರಿಕೆಯಲ್ಲಿ ಪ್ರದರ್ಶನಾತ್ಮಕ ಕಲೆಗಳು**

1. ವಿಶ್ವಮಿತ್ರ ತಪಾನುಭಂಗ
2. ಮೋಹಿನಿ ಭಸ್ಮಾಸುರ
3. ಸುಂದೋಪ ಸುಂದರ
4. ಭೀಮಾಂಬನೆಯ ಯುದ್ಧ
5. ರಾಮ-ರಾವಣ ಯುದ್ಧ
6. ಕಿರಾಚಾರ್ಜುನ
6. ವಾಲಿ-ಸುಗ್ರೀವ
8. ಅರ್ಧನಾರೇಶ್ವರ
9. ಭಂಕದ ರಮಣ
10. ಭೀಮಜಟಾ ಸೂರವೇಷ
11. ಕುರುಡದಾಸರ ವೇಷ
12. ಬೊಡಮ್ಮಜ್ಜಿ ವೇಷ
13. ಲಂಬಾಣಿ ವೇಷ
14. ಜಂಗಮ ವೇಷ
15. ಲವಕುಶ ವೇಷ
16. ದಾನಶೂರ ಕರ್ಣ ವೇಷ
17. ಐನೋರು ವೇಷ
18. ಬೈರಾನಿ ವೇಷ
19. ಪೋಲೀಸು ವೇಷ
20. ಬ್ಯಾಡರು ವೇಷ
21. ಪೋಟೇಶಂ ವೇಷ

ಇವರಲ್ಲಿ ಕಂಡುಬರುವ (ಮೇಲೆ ತಿಳಿಸಿರುವ) ಎಲ್ಲಾ ಕಲೆಯ ಒಂದು ಸಂದೇಶವೇನೆಂದರೆ ಜನಸಾಮಾನ್ಯರಿಗೆ ಹಲವಾರು ರಾಮಾಯಣ ಮಹಾಭಾರತದಂತ ಕಥೆಗಳ ಸಾರಾಂಶವನ್ನು ತಿಳಿಸುವುದುರ ಜೊತೆಗೆ (ನಮ್ಮ ನಾಡಿನ ಹಲವಾರು ಶರಣರ-ಸುತ್ಪುರುಷರ) ನಾನು, ನನ್ನದು, ನಂದೇ ಎನ್ನುವ ಹಲವಾರು ಮೂಢ ಜನರಿಗೆ ನಮ್ಮ ನಾಡಿನ ಹಲವಾರು ಹೆಮ್ಮೆಯ ಶಿವಶರಣರ ಸತ್ಪುರುಷರ ತತ್ವಪದ, ವಚನಗಳನ್ನು ಹಾಡಿ ಸನ್ಮಾರ್ಗಕ್ಕೆ ತರುವುದು. ಇದಲ್ಲದೆ ಹೆಣ್ಣುಮಕ್ಕಳ ಕುರಿತಾಗಿ ಪುರುಷರ ಬೀಡಿ, ಸಿಗರೇಟು, ಸಾರಾಯಿ, ಬ್ರ್ಯಾಂಡಿ ಕುರಿತಾಗಿ ಹಲವಾರು ಜಾನಪದ ಗೀತೆಯನ್ನು ಹಾಡಿ ಒಡೆದು ಹೋಗುತ್ತಿದ್ದ ಮನಸ್ಸು, ಮನೆಗಳನ್ನು ಒಂದು ಮಾಡಿದ ಕೀರ್ತಿ ಈ ವೇಷಗಾರ ಕಲಾವಿದರಿಗೆ ಸಲ್ಲಬೇಕಾಗುತ್ತದೆ.



**ಹಾಡುಗಾರಿಕೆ :** ವೇಷಗಾರ ಕಲಾವಿದರು ಹಲವಾರು ದಾಸರ ಪದಗಳು, ತತ್ವಪದಕಾರರ ತತ್ವಗಳನ್ನು ಮತ್ತು ಶಿವಶರಣರ ವಚನಗಳನ್ನು ಹಾಡುವುದರ ಜೊತೆಗೆ ಸುಗ್ಗಿಯ ಹಾಡುಗಳು, ಗಂಡು-ಹೆಣ್ಣಿನ ಕುರಿತಾದ ಜಾನಪದ ಗೀತೆಗಳು, ನಾಡು-ನುಡಿ ಭಾಷೆ ಕುರಿತಾದ ಹಾಡುಗಳು ಮತ್ತು ಪ್ರಸ್ತುತ ಸಮಾಜದಲ್ಲಿ ನಡೆಯುವ ಘಟನೆಗಳನ್ನು ಕುರಿತಾಗಿ ಹಾಡುಗಳನ್ನು ಹಾಡುತ್ತಾರೆ. ರಾಮಾಯಣ ಮಹಾಭಾರತದಂತಹ ಹಲವಾರು ಕಥೆಗಳನ್ನು ಪ್ರದರ್ಶನ ನೀಡುವಾಗ ಸಂದರ್ಭಾನುಸಾರವಾಗಿ ಹಾಡುಗಳನ್ನು ಹಾಡುತ್ತಾರೆ. ಕೆಲವೊಮ್ಮೆ ಹಾಸ್ಯಮಯವಾದಂತಹ ಹಾಡುಗಳನ್ನು ಹಾಡಿ ಸಭಿಕರನ್ನು ರಂಜಿಸುತ್ತಾರೆ. ಸಾಮಾನ್ಯವಾಗಿ ಶಾಸ್ತ್ರೀಯ ನಿಯಮಗಳಲ್ಲಿ ಹೆಣ್ಣುಮಕ್ಕಳ ಪಟ್ಟಿ ಬೇರೆ, ಗಂಡುಮಕ್ಕಳ ಪಟ್ಟಿ ಬೇರೆಯಾಗಿ ಕಂಡುಬರುತ್ತವೆ. ಹೆಣ್ಣುಮಕ್ಕಳು Block 4 (ಕಪ್ಪು ನಾಲ್ಕು ಅಥವಾ ಕಪ್ಪು ಐದಕ್ಕೆ) ಹಾಡುವುದು, ಪುರುಷರು ಸಾಮಾನ್ಯವಾಗಿ ಕಪ್ಪು ಪಟ್ಟಿ ಒಂದು ಅಥವಾ ಎರಡು ಪಟ್ಟಿಗೆ ಹಾಡುವುದು ಕಂಡುಬರುತ್ತದೆ. ಆದರೆ ಈ ವೇಷಗಾರ ಕಲಾವಿದರು ಮಹಿಳೆಯರ ಪಟ್ಟಿಯಲ್ಲಿ ಹಾಡುತ್ತಾರೆ. ಇವರ ಒಟ್ಟಿನಲ್ಲಿ ಸಂಗೀತದ ಮೂರು ಪ್ರಕಾರದಲ್ಲಿ ಹಾಡುವಂತಹ ಕಲಾವಿದರಾಗಿದ್ದಾರೆ. ಇವರು ಅಲೆಮಾರಿಗಳಾಗಿ ಊರೂರು ತಿರುಗುತ್ತಾ ಕಲಾಪ್ರದರ್ಶನ ಮಾಡುವ ಕಾಯಕವಾಗಿರುವುದರಿಂದ ಇವರಿಗೆ ಯಾವುದೇ ರೀತಿಯ ಖಾಯಂ ವೇದಿಕೆಗಳು, ಧ್ವನಿವರ್ಧಕಗಳು ಸಿಗುತ್ತಿರಲಿಲ್ಲ ಆದಕಾರಣ ತಾವು ಹಾಡಿದ ಧ್ವನಿಯನ್ನು ದೂರದ ಮನೆಗಳಲ್ಲಿರುವ ಜನರಿಗೆ ದೂರದಲ್ಲಿ ಕುಳಿತಿರುವ ಜನರಿಗೆ ಕೇಳಿಸಲೆಂದು ಈ ರೀತಿ ಎತ್ತರದ ಪಟ್ಟಿಯಲ್ಲಿ ಹಾಡಲು ಪ್ರಾರಂಭಮಾಡಿದ್ದರು. ಇವರು ಹಾಡಲು ಶುರುಮಾಡಿದ್ದರೆಂದರೆ ಒಂದು ಓಣಿಯಿಂದ ಮತ್ತೊಂದು ಓಣಿಯವರಿಗೆ ಕೇಳಿಸುತ್ತದೆ. ಅಂತ ಅಧ್ಬುತವಾದಂತ ಕಂಚಿನ ಕಂಠ ಇವರದ್ದು. ಈ ವೇಷಗಾರ ಕಲಾವಿದರು ಶಾಸ್ತ್ರೀಯ ಸಂಗೀತ ಬಲ್ಲವರಾಗಿದ್ದಾರೆ. ಪ್ರಥಮ ಬಾರಿಗೆ ಶಾಸ್ತ್ರೀಯ ಸಂಗೀತ ಜ್ಞಾನ ಪಡೆದುಕೊಂಡು ನಂತರ ತಮ್ಮ ವೃತ್ತಿಕಲೆಯನ್ನು ಮುಂದುವರೆಸಿಕೊಂಡು

ಹೋಗುತ್ತಾರೆ. ಇವರ ಹಾಡುಗಾರಿಕೆಯಲ್ಲಿ ಕಂಡುಬರುವ ರಾಗಗಳು ಮತ್ತು ತಾಳಗಳು 1. ತೋಡಿ, ಚಾಂದ, ಭೀಮಪಲಾಸಿ, ಮಧುವಂತಿ, ಭೂಪ, ದುರ್ಗ, ಮಧುಕೌಂಸ, ಅಹೀರ ಭೈರವ, ಪಹಡಿ, ಕಿರವಾಣಿ, ಭೈರವಿ, ದೇಶ್, ಕಲಾವತಿ, ಹಂಸಧ್ವನಿ, ಮಧುಮಾತ್‌ಸಾರಂಗ, ಬೃಂದವಾನಿ ಸಾರಂಗ, ಶುದ್ಧಸಾರಂಗ, ಬಿಲಾಸಖಾನಿ ತೋಡಿ, ಭೈರವ, ಭೈರಾಗಿ ಭೈರವ, ಬಿಹಾಗ್, ಮಾರುಬಿಹಾಗ್, ಗುಜರಿ ತೋಡಿ, ಚಂದ್ರಕೌಂಸ, ಮಾಲಕೌಂಸ, ಪಟದೀಪ, ಜೋಗ, ಸೋಹಿನಿ, ಭಾಗೇಶ್ರೀ, ಗುಣಕಲಿ, ರಾಗೇಶ್ರೀ ಮತ್ತು ಭೈರವಿ ರಾಗಗಳು.

**ತಾಳಗಳು:** ತೀನ್‌ತಾಲ, ಏಕತಾಲ, ದೀಪಚಂದಿ, ಕವಾಲಿ, ಕೇಹರವಾ, ದಾದ್ರ ಮತ್ತು ಝುಪ್ತಾಲ ತಾಳಗಳು. ಕಲಾವಿದರಿಗೆ ರಾಗಗಳ ಮತ್ತು ತಾಳಗಳ ಮಾಹಿತಿ ಇರುವುದರಿಂದ ಹಾಡುಗಾರಿಕೆಯಲ್ಲಿ ತಾಳ–ಲಯ ತಪ್ಪದೇನೆ, ಶೃತಿ ತಪ್ಪದೇನೆ, ತಾಳಬದ್ಧವಾಗಿ ಶೃತಿಯಲ್ಲಿ ಹಾಡುವುದು ಕಂಡುರುತ್ತದೆ. ತಮ್ಮನ್ನು ತಾವು ತೊಡಗಿಸಿಕೊಂಡು ಭಾವಪೂರ್ವಕವಾಗಿ ಹಾಡುತ್ತಾರೆ. ಇವರು ಹಾಡುಗಾರಿಕೆ, ಇವರ ಕಂಠಸಿರಿಗೆ ಇವರ ಸಾಟಿ ಮತ್ಯಾರು ಸಾಟಿ ಇಲ್ಲವೆಂದು ಹೇಳಬಹುದು. ಹಳ್ಳಿಗಳಲ್ಲಿ ವೇಷಗಾರ ಕಲಾವಿದರು ಬಂದಿದ್ದಾರೆ. ಎಂದರೆ ಸಾಕು ಎಷ್ಟೋ ಊರಿನ ಜನರು ಇವರ ಸಂಗೀತ ಕೇಳಲು ಹೋಗುತ್ತಾರೆ. ಒಂದು ಪದ್ಯಹಾಡಿದರೆ ಸಾಕು ಮತ್ತೊಂದು ಪದ್ಯ ಹಾಡೆಂದು ದುಡ್ಡು ಕೊಟ್ಟು ಹಾಡಿಸುತ್ತಾರೆ. ಹಾಡುಗಾರಿಕೆಯಲ್ಲಿ ಇವರ ವಿಶೇಶತೆ ಏನು ಎಂದರೆ ಪ್ರೇಕ್ಷಕರು ಯಾವ ಹಾಡು ಕೇಳಲು ಬಯಸುತ್ತಾರೆ ಅಂತಹ ಹಾಡುಗಳನ್ನು ಹಾಡುತ್ತಾರೆ. ತಮ್ಮ ಕಂಠಸಿರಿಯಿಂದಲೇ ಜನರನ್ನು ಆಕರ್ಷಿಸುತ್ತಾರೆ. ಸಾಮಾನ್ಯ ಜನರ ವೇದಿಕೆಯಲ್ಲಿ ಈ ವೇಷಗಾರ ಕಲಾವಿದರು ಹಾಡಿಬಿಟ್ಟರೆ ಸಾಕು ಬೇರೆ ಕಲಾವಿದರು ಹಾಡಲು ಹಿಂಜೆರಿಯುತ್ತಾರೆ. ಕಾರಣ ತಾರಸಪ್ತಕದ ಧ್ವನಿಯ ಆರ್ಭಟದಲ್ಲಿ ಬೇರೆಯವರ ಧ್ವನಿ ಮುಳುಗಿಹೋಗುತ್ತದೆ.

**ಇಲ್ಲಿ ಎರಡು ಪ್ರಕಾರದ ಮೇಳಗಳು ಕಂಡುಬರುತ್ತವೆ.**

**1. ಹಗಲು ವೇಷಗಾರಿಕೆ ಮೇಳ**

**2. ತಬಲ ಪೇಟಿ ಹಿಡ್ಕೊಂಡು ಹಲವಾರು ಗೀತೆಗಳನ್ನು ಹಾಡಿ ಭಿಕ್ಷೆ ಬೇಡುವ ಮೇಳ**

**ಹಗಲು ವೇಷಗಾರಿಕೆ :** ಒಬ್ಬ ತಬಲ ಕಲಾವಿದ, ಒಬ್ಬ ಹಾರ್ಮೋನಿಯಂ ಕಲಾವಿದ ಮತ್ತು ಪ್ರದರ್ಶಿಸುವ ಕಥೆಗಳಲ್ಲಿ ಬರುವ ಪಾತ್ರಗಳಿಗನುಗುಣವಾಗಿ ಜನಸಂಖ್ಯೆ ಕಂಡುಬರುತ್ತಾರೆ. ಇವರು ತಮ್ಮ ಮೇಳದಲ್ಲಿ ಬಳಸುವ ವಾದ್ಯಗಳೆಂದರೆ ಹಾರ್ಮೋನಿಯಂ, ತಬಲ ಮತ್ತು ಗೆಜ್ಜೆ. ತಬಲ ನುಡಿಸುವ ಕಲಾವಿದ ತನ್ನ ಕೈಗೆ ಗೆಜ್ಜೆ ಕಟ್ಟಿಕೊಂಡಿರುತ್ತಾನೆ. ಈ ಮೇಳದಲ್ಲಿ ಮುಖ್ಯಗಾಯಕ ಎಂದರೆ ಹಾರ್ಮೋನಿಯಂ ನುಡಿಸುತ್ತ ಹಾಡುವ ಕಲಾವಿದ. ಹಿಮ್ಮೇಳ ಕಲಾವಿದ ಎಂದರೆ ಮೂರು ತಬಲ ನುಡಿಸುವ ಕಲಾವಿದ. ಪ್ರಾರಂಭದಲ್ಲಿ ಮುಖ್ಯ ಗಾಯಕ ಅವರು ಹಾಡುವ ರಾಗವನ್ನು ಮೊದಲು ಎರಡು ಮೂರು ಸಲ ನುಡಿಸಿ ನಂತರ ಅದೇ ರಾಗದ ಆಲಾಪನೆಯನ್ನು ಮಾಡುತ್ತಾರೆ. ಈ ಆಲಾಪನೆ ಮಾಡುವ ಸಂದರ್ಭದಲ್ಲಿ ತಬಲವಾದಕ ವಿವಿಧ ರೀತಿಯಲ್ಲಿ ನುಡಿಸಿ ಜನರನ್ನು ತಮ್ಮ

ಕಡೆಗೆ ಸೆಳೆಯುವಂತೆ ಮಾಡುತ್ತಾರೆ. ಎಲ್ಲ ಸಂಗೀತ ಕಲಾಮೇಳದವರು ಪ್ರಾರಂಭದಲ್ಲಿ ದೇವರ ಪ್ರಾರ್ಥನೆಯೊಂದಿಗೆ ಸಂಗೀತ ಕಾರ್ಯಕ್ರಮ ಪ್ರಾರಂಭಮಾಡುವಂತ ವೇಷಗಾರ ಕಲಾವಿದರು ಸಹ ಗಣೇಶ, ಶಾರದಾದೇವಿ ಇನ್ನು ಮುಂತಾದ ದೇವರ ಪ್ರಾರ್ಥನೆಯನ್ನು ಹಾಡುವುದರ ಮುಖಾಂತರ ತಮ್ಮ ಸಂಗೀತ ಕಾರ್ಯಕ್ರಮವನ್ನು ಪ್ರಾರಂಭ ಮಾಡುತ್ತಾರೆ. ಇಲ್ಲಿ ಮುಖ್ಯಗಾಯಕ ಹಾರ್ಮೋನಿಯಂ ವಾದ್ಯ ನುಡಿಸುತ್ತ ಹಾಡಿದರೆ ಹಿಮ್ಮೇಳದಲ್ಲಿ ತಬಲ ಇಲ್ಲಿ ತಬಲವಾದನೆ ಹಿಮ್ಮೇಳ ಗಾಯಕನಾಗಿ ಕಂಡುಬರುತ್ತಾನೆ. ಮುಮ್ಮೇಳ ಗಾಯಕ ಹಾಡಿದ್ದನ್ನು ತಬಲ ವಾದಕ ತಬಲವಾದ್ಯವನ್ನು ನುಡಿಸುತ್ತ ಹಾಡುತ್ತಾನೆ. ಇಲ್ಲಿ ತಬಲ ವಾದಕನ ವಿಶೇಶತೆ ಏನೆಂದರೆ ಹಾರ್ಮೋನಿಯಂ ವಾದಕ ಹಾರ್ಮೋನಿಯಂ ವಾದ್ಯವನ್ನು ನುಡಿಸುತ್ತ ಹಾಡುವುದು ತುಂಬ ಕಷ್ಟಕರವಾದಂತ ಕಲೆಯಾಗಿದೆ. ಇಲ್ಲಿ ತಬಲ ವಾದಕ ತಬಲ ನುಡಿಸುತ್ತ ಹಾಡುವುದು ಕಂಡುಬರುತ್ತದೆ.

ಪ್ರಾರಂಭದಲ್ಲಿ ವಿಘ್ನೇಶನ ಶೃತಿ ಮತ್ತು ಹಾಡಿನೊಂದಿಗೆ ತಮ್ಮ ಕಲೆಯ ಪ್ರದರ್ಶನವನ್ನು ಪ್ರಾರಂಭಮಾಡುತ್ತಾನೆ.

**ಶ್ಲೋಕ :** ಗಜಾನನಂ ಭೂತಗಣಾದಿ ಸೇವಿತಂ । ಕಪಿಸ್ಥ ಜಂಬೂ ಫಲಸಾರ ಭಕ್ಷಿತಂ॥
ಉಮಾಸುತಂ ಶೋಕ ವಿನಾಶಕಾರಣಂ। ನಮಾಮಿ ವಿಘ್ನೇಶ್ವರ ಪಾದ ಪಂಕಜಂ

**ಹಾಡು:**

ಮು: ಗಜಮುಖನೆ ಗೌರಿಸುತನೆ ಷಣ್ಮುಖನೆ ಸೋದರನೆ ರಜತಗಿರಿ ಒಡೆಯನೇ ಕುಮಾರನೇ ವಿಜಯೆ ವಿನಾಯಕನೇ

ಹಿ: ಗಜಮುಖನೆ ಗೌರಿಸುತನೇ ಷಣ್ಮುಖನೆ ಸೋದರನೆ।
ರಚುತಗಿರಿ ಒಡೆಯನೇ ಕುಮಾರನ ವಿಜಯ ವಿನಾಯಕನೆ। ಪಲ್ಲವಿ

ಮು: ವಿಜಯ ವಿನಾಯಕನೇ ಕರುಣಾ ಸಾಗರನೆ।
ಹರಿಹರ ಬ್ರಹ್ಮರು ಅನವರಿತ ಪೂಜಿಸುವ ಮೂಜಗದೊಡೆಯ ಗಣೇಶನೆ

ಹಿ: ವಿಜಯ ವಿನಾಯಕನೇ ಕರುಣಾ ಸಾಗರನೆ। ಹರಿಹರ ಬ್ರಹ್ಮರು ಅನವರಿತ ಪೂಜಿಸುವ ಮೂಜಗದೊಡೆಯ ಗಣೇಶ

ಮು: ನೀನೆ ಮೊದಲು ನಿನ್ನಿಂದ ತಾನೆ ಆರಂಭವು ಜಗದಲೆಲ್ಲ.

ಹಿ: ನೀನೆ ಮೊದಲು ನಿನ್ನಿಂದ ತಾನೆ ಆರಂಭವು ಜಗದಲೆಲ್ಲ.

ಮು: ಮೊದಲು ಪೂಜೆ ನಿನಗಾದ ಮೇಲೆ ಇನ್ನುಳಿದ ಪೂಜೆಯಲ್ಲಾ

ಹಿ: ಮೊದಲು ಪೂಜೆ ನಿನಗಾದ ಮೇಲೆ ಇನ್ನುಳಿದ ಪೂಜೆಯಲ್ಲಾ

ಮು: ನೀನು ಹರಿಸಿದರೆ ಯಾವ ಕಾರ್ಯವು ವಿಘ್ನವೆಂಬುದಿಲ್ಲ

ಹಿ: ನೀನು ಹರಿಸಿದರೆ ಯಾವ ಕಾರ್ಯವು ವಿಘ್ನವೆಂಬುದಿಲ್ಲ

ಮು: ಹುಲ್ಲುಗಾರಿಕೆ ಹೂವಿನಮತೆ ಸ್ವೀಕರಿಸಿ ವರವಕೊಡುವೆ

ಹಿ: ಹುಲ್ಲುಗಾರಿಕೆ ಹೂವಿನಮತೆ ಸ್ವೀಕರಿಸಿ ವರವಕೊಡುವೆ

ಮು: ಪ್ರಾಮೆದಿಂದ ನೆನವವರ ಮನದಿ ಸ್ಥಿರವಾಗಿ ಎಂದು ಇರುವೆ.

ಹಿ: ಪ್ರಾಮೆದಿಂದ ನೆನವವರ ಮನದಿ ಸ್ಥಿರವಾಗಿ ಎಂದು ಇರುವೆ.

ಇಲ್ಲಿ ಪ್ರಾರಂಭಿಕ ವಿಘ್ನೇಶನ ಶ್ಲೋಕ ಯಮನ ರಾಗದಲ್ಲಿ ಕಂಡುಬರುತ್ತದೆ. ಇಲ್ಲಿ ಮುಖ್ಯ ಗಾಯಕನಿಗೆ ರಾಗದ ಜ್ಞಾನ ಇರುವುದರಿಂದ ಆ ರಾಗದಲ್ಲಿ ವಿವಿಧ ರೀತಿಯ ಆಲಾಪನೆಯಲ್ಲೆ ವಿಘ್ನೇಶನ ಶ್ಲೋಕ ಮಾಡುವ ಮುಖಾಂತರ ಜನರನ್ನು ತಮ್ಮ ಕಡೆಗೆ ಬರುವಂತೆ ಮಾಡುತ್ತಾರೆ. ತಮ್ಮ ಸುಮಧುರವಾದಂತಹ ಕಂಠಸಿರಿಯ ಮೂಲಕವೇ ಪ್ರೇಕ್ಷಕರನ್ನು ಮಂತ್ರ ಮುಗ್ಧರನ್ನಾಗಿ ಮಾಡುತ್ತಾರೆ.

ಇಲ್ಲಿ ಮುಖ್ಯಗಾಯಕ ಮತ್ತು ಹಿಮ್ಮೇಳಗಾಯಕರು ಹಾಡುವ ಹಾಡನ್ನು ಅನುಸರಿಸಿಕೊಂಡು ಹಾಡುವ ಒಂದು ಶೈಲಿ ನಿಜಕ್ಕೂ ಪ್ರೇಕ್ಷಕರ ಗಮನ ಸೆಳೆಯುತ್ತದೆ. ತಲತಲಾಂತರಗಳಿಂದ ಭಿಕ್ಷೆ ಬೇಡುತ್ತ ಹಾಡಿಕೊಂಡು ಬಂದಂತಹ ಕಲೆಯಾಗಿದೆ. ಇವರ ಮನೆಯ ಮಕ್ಕಳು ಚಿಕ್ಕಂದಿನಿಂದಲೂ ಈ ಹಿರಿಯ ಕಲಾವಿದರ ಜೊತೆಗೆ ಸಂಚಾರಮಾಡಿ ಅವರ ಜೊತೆ ಹಾಡುವುದರಿಂದ ಯಾವುದೆ ಹಾಡುಕೊಟ್ಟರೂ ಸಹ ಲೀಲಾಜಾಲವಾಗಿ ಹಾಡುವುದು ಕಂಡುಬರುತ್ತದೆ.

**ವಿಘ್ನೇಶನ ಕುರಿತು ಇನ್ನೊಂದು ಹಾಡು**

**ರಾಗ: ಯಮನ** **ತಾಳ: ದೀಪಚಂದಿ**

ಮುಮ್ಮೇಳ: ಶರಣು ಸಿಧ್ಧಿ ವಿನಾಯಕ। ಶರಣು ವಿದ್ಯಾ ಪ್ರದಾಯಕ
ಶರಣು ಪಾರ್ವತಿ ತನಯ ಮೂರುತಿ
ಶರಣು ಮೂಷಿಕ ವಾಹನ

ಹಿಮ್ಮೇಳ: ಶರಣು ಸಿಧ್ಧಿ ವಿನಾಯಕ। ಶರಣು ವಿದ್ಯಾ ಪ್ರದಾಯಕ
ಶರಣು ಪಾರ್ವತಿ ತನಯ ಮೂರುತಿ
ಶರಣು ಮೂಷಿಕ ವಾಹನ

ಮುಮ್ಮೇಳ: ನಿಟಿಲ ನೇತ್ರನೆ ದೇವಿಸುತನೆ ನಾಗಭೂಷಣ ಪ್ರೀಯನೆ
ತಟಿಲ ತಾಂಕಿತ ಕೋಮಲಾಂಗನೆ।

ಹಿಮ್ಮೇಳ: ನಿಟಿಲ ನೇತ್ರನೆ ದೇವಿಸುತನೆ ನಾಗಭೂಷಣ ಪ್ರೀಯನೆ
ತಟಿಲತ ತಾಂಕಿತ ಕೋಮಲಾಂಗನೆ।

ಮುಮ್ಮೇಳ: ಬಟ್ಟ ಮುತ್ತಿನ ಪದಕ ಹಾರನೆ ಬಾಹುಹಸ್ತ ಚತುಷ್ಟನೆ ಇಟ್ಟಕೊಡುಗೆಯ ಹೇಮಕಂಕಣ
ಪಾಶಾಂಕುಶ ಧಾರನೆ ।

ಹಿಮ್ಮೇಳ: ಬಟ್ಟ ಮುತ್ತಿನ ಪದಕ ಹಾರನೆ ಬಾಹುಹಸ್ತ ಚತುಷ್ಟನೆ ಇಟ್ಟಕೊಡುಗೆಯ ಹೇಮಕಂಕಣ ಪಾಶಾಂಕುಶ ಧಾರನೆ ।

ಮುಮ್ಮೇಳ: ಕುಕ್ಷಿ ವಾಹನ ಮಹಾಲಂಭೋಧರನೆ ಇಕ್ಷು ಚಾಪನಗೆಲಿದನೆ
ಪಕ್ಷಿವಾಹನ ಸಿರಿ ಪುರಂದರ ವಿಠಲನೆ ಪ್ರೀಯನೆ

ಹಿಮ್ಮೇಳ: ಕುಕ್ಷಿ ವಾಹನ ಮಹಾಲಂಭೋಧರನೆ ಇಕ್ಷು ಚಾಪನಗೆಲಿದನೆ
ಪಕ್ಷಿವಾಹನ ಸಿರಿ ಪುರಂದರ ವಿಠಲನೆ ಪ್ರೀಯನೆ

ಇವರು ಹಾಡುಗಾರಿಕೆಯಲ್ಲಿ (ಒಂದು ಸಲ, ಎರಡು ಸಲ ಅಥವಾ ಮೂರು ಸಲ ಹಾಡಬೇಕೆನ್ನುವ ಯಾವ ನಿಯಮಗಳು ಕಂಡುಬರುವುದಿಲ್ಲ) ಸಮಯ ಸಂದರ್ಭ ಮತ್ತು ಪ್ರೇಕ್ಷಕರ ಅಪೇಕ್ಷೆಯನ್ನು ನೋಡಿಕೊಂಡು ಹಾಡನ್ನು ಹಿಗ್ಗಿಸುವ ಕುಗ್ಗಿಸುವ ನಿಟ್ಟಿನಲ್ಲಿ ಮುಮ್ಮೇಳ ಮತ್ತು ಹಿಮ್ಮೇಳಗಾಯನ ಹೊಂದಾಣಿಕೆ ಮಾಡಿಕೊಂಡು ಕಾರ್ಯಕ್ರಮ ನಡೆಸಿಕೊಡುವುದು ಬಹಳ ಮಹತ್ವವಾಗಿ ಕಂಡುಬರುತ್ತದೆ.

ಕಲೆಯ ಪ್ರದರ್ಶನ ಅವಧಿ ಮುಗಿಯುತ್ತಿದ್ದಂತೆ ಹಾಡುಗಾರಿಕೆಯಲ್ಲೂ ಬದಲಾವಣೆ ಕಂಡುಬರುತ್ತದೆ. ಮೊದಮೊದಲು ಎರಡು ಬಾರಿ ಹಾಡುವ ಹಾಡನ್ನು ಒಂದೇ ಬಾರಿ ಹಾಡುವುದು ಕಂಡುಬರುತ್ತದೆ. ಈ ರೀತಿ ಹಾಡನ್ನು ಹಿಗ್ಗಿಸುವ, ಕುಗ್ಗಿಸುವ ಜಾಣತನ ಇಲ್ಲಿನ ಮುಖ್ಯ ಹಾಡುಗಾರನಿಗಿರುತ್ತದೆ. ವೇಷಗಾರರ ಹಾಡುಗಾರಿಕೆ ಬಹಳ ಸರಳ ಸುಲಭವಾಗಿ ಕಂಡು ಬರುತ್ತದೆ. ಒಮ್ಮೆ ಕೇಳಿದರೆ ಸಾಕು ಯಾರಾದರೂ ಹಾಡಬಹುದು. ಪ್ರತಿಯೊಂದು ಸಾಹಿತ್ಯವು ಕೂಡ ಗಮಕ ಛಿರತದಿಂದ ಕೂಡಿರದೆ ಸರಳವಾಗಿರುವುದು ಕಂಡುಬರುತ್ತದೆ. ಒಂದೊಂದು ಸಾಲುಗಳು ಎರಡು ಮೂರು ಸಲ ಹಾಡಿದರೂ ಕೂಡ ದಾಟಿ ಒಂದೇ ರೀತಿಯಲ್ಲಿ ಕಂಡುಬರುತ್ತದೆ. ಇಲ್ಲಿ ತಬಲ ವಾದಕನ ಪಾತ್ರವು ಕೂಡ ಬಹಳ ಮುಖ್ಯವೆನಿಸುತ್ತದೆ. ಯಾವುದಾದರೂ ಒಂದು ತಾಳವನ್ನು ನುಡಿಸುತ್ತಿರುವಾಗ ಹಾಡಿಗೆ ತಕ್ಕಂತೆ ಒಂದು ತಾಳದಲ್ಲಿ ಹಲವಾರು ಬದಲ್ ರೇಖವನ್ನು ನುಡಿಸಿ ಹಾಡುವವರಿಗೆ ಹುರಿದುಂಬಿಸುವುದಲ್ಲದೆ ಕೇಳುಗರನ್ನು ಮಂತ್ರಮುಗ್ಧರನ್ನಾಗಿ ಮಾಡುತ್ತಾರೆ. ಈ ಮೇಳದವರಿಗೆ ಇಂತಹದೇ ವೇದಿಕೆ ಎಂಬುದು ಇರೋದಿಲ್ಲ. ಇವರಿಗೆ ಜನರು ಓಡಾಡುವ ರಸ್ತೆ, ಹೋಟೆಲ್, ಊರ ಅಗಸಿ, ದೇವರ ಗುಡಿ, ಎಲ್ಲಿ ಹೆಚ್ಚು ಜನಸಂದಣಿಯಿಂದ ಕೂಡಿರುತ್ತದೆಯೋ ಆ ಸ್ಥಳವೇ ಇವರ ವೇದಿಕೆ.

ಇತ್ತೀಚಿನ ದಿನಗಳಲ್ಲಿ ಇವರ ಕಲೆಗಳನ್ನು ಮೆಚ್ಚಿ ಹಲವಾರು ಸಂಘ ಸಂಸ್ಥೆಗಳು, ಧಾರ್ಮಿಕ ಮಠಗಳು ಮತ್ತು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯವರು ಹಲವಾರು ಕಾರ್ಯಕ್ರಮಗಳನ್ನು ನೀಡಿ ಗೌರವ ಸನ್ಮಾನ ಪ್ರಶಸ್ತಿ ಪತ್ರಗಳನ್ನೂ ಸಹ ನೀಡುತ್ತಿದ್ದಾರೆ. ಇತ್ತೀಚಿನ ದಿನಗಳಲ್ಲಿ ಕಂಪ್ಯೂಟರ್, ಇಂಟರ್‌ನೆಟ್ ಹಲವಾರು ಟಿವಿ ಮಾಧ್ಯಮಗಳು ಬಂದಿರುವುದರಿಂದ ಕಲೆಯನ್ನು ಪ್ರೋತ್ಸಾಯಿಸುವವರ ಸಂಖ್ಯೆ ಕಡಿಮೆಯಾಗಿದ್ದರಿಂದ ಈ ಕಲೆಯನ್ನು ಪ್ರದರ್ಶನ ಮಾಡುವ ಕಲಾವಿದರ ಸಂಖ್ಯೆ ಕಡಿಮೆಯಾಗುತ್ತ ಬಂದಿದೆ. ಎಲ್ಲೋ ಒಂದೊಂದು ಕಡೆ ಬೆರಳಣಿಕೆಯಷ್ಟು ಕಲಾವಿದರು ಮಾತ್ರ ಕಂಡುಬರುತ್ತಾರೆ.

ಕೇವಲ ಕಲೆಯಿಂದಲೆ ಜೀವನ ನಡೆಸುವುದು ಕಷ್ಟಕರವಾದಂತಹ ವಿಷಯವಾಗಿರುವುದರಿಂದ ತಮ್ಮ ಕಲೆಯ ಜೊತೆಗೆ ಹಲವಾರು ರೀತಿಯ ಸಣ್ಣ-ಪುಟ್ಟ ವ್ಯವಹಾರಗಳನ್ನು ಮಾಡುತ್ತಿದ್ದಾರೆ.

ಪ್ರಾರಂಭದಲ್ಲಿ ಎಲ್ಲ ಕಾರ್ಯಗಳು ಸುಗಮವಾಗಿ ಶಾಂತಿಯುತವಾಗಿ ಯಾವುದೇ ಅಡಚಣೆ ಇಲ್ಲದೆ ನಡೆಯಲಿ ಎಂದು ಎಲ್ಲಾ ಸಂಗೀತ ಮೇಳದವರು ವಿಘ್ನವಿನಾಯಕನ ಶ್ಲೋಕ ಅಥವಾ ಹಾಡಿನೊಂದಿಗೆ ಪ್ರಾರಂಭಮಾಡುವಂತೆ ಹಗಲುವೇಷ ಕಲಾವಿದರು ಸಹ ಗಣಪತಿಯ ಶ್ಲೋಕ ಅಥವಾ ಹಾಡಿನೊಂದಿಗೆ ಪ್ರಾರಂಭ ಮಾಡುತ್ತಾರೆ.

**ಮೋಹಿನಿ ಭಸ್ಮಾಸುರ ಒಂದು ಕಥೆ**

**ಗಣಸ್ತುತಿ:**

ಗಜಾನನಂ ಭೂತಗಣಾದಿ ಸೇವಿತಂ।
ಕಪಿತ್ತ ಜಂಬೂಫಲ ಸಾರ ಭಕ್ಷಿತಂ।
ಉಮಾಸುತಂ ಶೋಕವಿನಾಶ ಕಾರಣಂ
ನಮಾಮಿ ವಿಘ್ನೇಶ್ವರ ಪಾದಪಂಕಜಂ
ಗುರುದೇವಂ ಮಹಾದೇವ ಗುರುದೇವ ಸದಾಶಿವಂ
ಗುರುದೇವಂ ಪರಬ್ರಹ್ಮಂ ತಸ್ಮಯೇ ಗುರುವೇ ನಮಃ
ವಿಘ್ನೇಶ್ವರ ನಿನ್ನ ಧ್ಯಾನಿಸುವ ನಮಗೆ
ಸಲಹು ಕೊಡುದೇವಾ
ವಿಘ್ನೇಶ್ವರ ಭಯ ಭಕ್ತಿಯಲಿ ಕರಮುಗಿದು
ನಿನ್ನನು ಧ್ಯಾನಿಸುವೆ
ಅಗಣಿತ ಮಹಿಮನೆ ದೇವಾ ಸುಗುಣರಿಗೆ ವರವು ಕರುಣಿಸು ಬಾ
ಸುಗುಣರಿಗೆ ವರವು ಕೊಡು ದೇವಾ
ಪಾಂಡವರು ನಿನ್ನನ್ನು ಧ್ಯಾನಿಸು ತಾ
ಭೂಮಂಡಲ ತಿರುಗಿ ಪಡದಿಹರು
ರಾಜೊದೋಳು ಕೀರ್ತಿಯ ಬೆಳಸಿದವು (ಬೆಳಗಿದವು)
ತೋರುವ ಶೌರ್ಯವನ ನಾನೀಗಲೆ
ಭೂಮಂಡಲವಾ ಶೌರ್ಯ ಮಾತೆ
ಇಂದಿನ ದೇವತೆಗಳಿಗೆ ಗಂಡನೆಂದು
ನಮ್ಮ ಅಖಂಡ ವಿಷಯವನ್ನು ಸಂಪಾದಿಸಿಕೊಂಡು
ಈ ಭೂಲೋಕದಲ್ಲಿ ಬಂದಿರುವುದು
ನನಗಿಂತ ಯಾರಿರುವರು ದೊಡ್ಡೋರು

ಗರುಡ ಗಗನ ಕಿನ್ನರ ಕಿಂಪುರುಷ

ಅಷ್ಟದಿಕ್ಕು ಪಾಲಕರು ನನ್ನ ಸರಿಸಮಾನರು ಯಾರು ಇಲ್ಲ ಹೊ.. ಹೊ..

ಯಾರಾದರು ಇದ್ದರೆ ನನಗೆ

ಆಗಬೇಕೆಂದು ಶಿವ ಧ್ಯಾನವನ್ನು ಮಾಡುತ್ತಿರುವುದು

ಶಿವನೆ ಭವಹರನೆ ಚಿದಂಬರನೆ ಜಟಾದರ ನೀಲಕಂಠನೆ

ಗಜಚರ್ಮಾಂಬರನೆ ಭವಾನಿ ವರಗಂಗಾಧರನೆ

ಶಂಕರ ನಿನ್ನ ಪಾದಕಮಲ

ತಿಂಗಳ ಬಲು ತಂಗೈಯಿಮಲ

ಸೇವೆಯ ಬಲು ತಾಪದಾರಿ

ಗಜಚರ್ಮಾಂಬನೆ ಭವಾನಿ

ವರಗಂಗಾಧರನೆ

ಶಿವನೆ ಭವಹರನೆ ಚಿಂದಂಬರನೆ ಜಟಾಧರನೆ ನೀಲಕಂಠ

ಗಜಚರ್ಮಾಂಬರನೆ ಭವಾನಿ ವರಗಂಗಾಧನೆ

ಹೋ ಹೋ ಸ್ವಾಮಿ ಶಂಕರ ಪರಮೇಶ್ವರ

ನೀನು ನನಗೆ ವರವನ್ನು ದಯಪಾಲಿಸಬೇಕು ಗುರುವೆ ಸ್ವಾಮಿ

ಶಿವಾ : ಶ್ರೀಮದ ಗಣನಯ್ಯ ಕುಂಟಿತ ವೈಕುಂಠ ಸ್ವರ್ಗಲೋಕಂ

ಭಕ್ತರಾ ಸಮಾನ ಕುಟುಂಬ ಕಚಿತದಾವುದಿಲ್ಲವೆಂದು ತಿಳಿದು

ಓಂ ನಮಃ ಶಿವಾಯ ಎಂದು ನಡೆಯುವ ಭಕ್ತಾದಿಗಳ ಭಾರಹೊತ್ತು

ನಿನಗೆ ಬಂದ ಕಷ್ಟಗಳನ್ನು ಪರಿಹರಿಸುವುದೆ ನನ್ನ ಕರ್ತವ್ಯ

ಭಕ್ತ ಬೇಡು ಭಕ್ತ ಬೆಳ್ಳಿ, ಗುಡ್ಡ, ಬಂಗಾರ

ಮಾಣಿಕ್ಯ ಮತ್ತು ಸಕಲ ಸಂಪತ್ತನ್ನ ಬೇಡು

ಕೊಡಲಿಕ್ಕೆ ಸಿದ್ಧನಾಗಿದ್ದೀನಲ್ಲವೆ.

ಭಸ್ಮಾಸುರ : ಸ್ವಾಮಿ ಬೇಡಿದ ವರವನ್ನು ಕೊಡುತ್ತೇನೆ ಎಂದು ಮಾತು ಕೊಡಬೇಕು.

ಶಿವ : ಕೊಟ್ಟಿದ್ದೇನೆ ಭಕ್ತ

ಭಸ್ಮಾಸುರ : ಬೇಡಿದ ವರವನ್ನ ಕೊಡುತ್ತನೆಂದು

ಸ್ವಾಮಿ ಹಾ... ಹಾ.. ಧನ್ಯನಾದ ಮಹೇಶ್ವರ ಧನ್ಯನಾದೇನು..

ಬೇಡಿದ ವರವನ್ನು ಕೊಟ್ಟಿದ್ದಕ್ಕೆ

ಈಗ ನಿನ್ನ ತ್ರಿಶೂಲವನ್ನು ದಯಾಪಾಲಿಸು ಗುರುದೇವ

ಶಿವ : ತೆಗೆದುಕೋ ಭಕ್ತ ಈ ತ್ರಿಶೂಲವನ್ನು ಕೊಡುತ್ತಿದ್ದೇನೆ.

ಭಸ್ಮಾಸುರ : ಧನ್ಯನಾದೆ ಧನ್ಯನಾದೆ ಮಹೇಶ ಧನ್ಯನಾದೆ
ಈಗ ನಿನ್ನ ಉರಿಗಣ್ಣನ್ನು ದಯಪಾಲಿಸು ಸ್ವಾಮಿ

ಶಿವ : ತೆಗೆದುಕೊ ಭಕ್ತ ಹರ ಹರ ಮಹದೇವ

ಭಸ್ಮಾಸುರ : ಉರಿ ಉರಿ ಸ್ವಾಮಿ ಪಾಹಿಮಾಮ್ ಪಾಹಿಮಾಮ್

ಭಸ್ಮಾಸುರ : ಸ್ವಾಮಿ ಈ ತ್ರಿಶೂಲವೇತಕೆ ಬರುವುದು.

ಶಿವ : ಹೋ ಹೋ ಈ ತ್ರಿಶೂಲದಿಂದ ತ್ರಿಲೋಕವೆ ನಾಶವಾಗುವುದು.

ಭಸ್ಮಾಸುರ : ಪಾಹಿಮಾಮ್ ಪಾಹಿಮಾಮ್
ಹೋ ಹೋ ಸ್ವಾಮಿ ಈ ವಾಮಸ್ತ್ರವೇತಕ ಬರುವುದು?

ಶಿವ : ನಿನ್ನ ವೈರಿಗಳ ತಲೆಮೇಲೆ ಕೈಚಾಚಿದರೆ ಸುಟ್ಟುಬೂದಿ ಆಗುವರು.

ಭಸ್ಮಾಸುರ : ಈ ಉರಿನೇತ್ರ ವೇತಕೆ ಬರುವುದು ಸ್ವಾಮಿ?

ಶಿವ : ಕಾಡಿನಿಂತ ಕಡೆ ಕಣ್ಣು ತೆರೆದು ನೋಡಿದರೆ ಸುಟ್ಟು ಭಸ್ಮವಾಗುವದು

ಭಸ್ಮಾಸುರ : ಸ್ವಾಮಿ ಈ ಲೋಕದಲ್ಲಿ ವರ ಪಡೆದುಕೊಂಡಿರುವ ನನಗೆ ಯಾರು ವೈರಿಗಳಿಲ್ಲವೇ ಮೂವತ್ತ ಮೂರು ಕೋಟಿ ದೇವತೆಗಳು ಅರವತ್ತಾರು ಕೋಟಿ ರಾಕ್ಷಸಿಗಳು ಯಾರು ವೈರಿ ಇಲ್ಲವೋ. ನೀನೆ ನನಗೆ ವೈರಿ ಸ್ವಾಮಿ ನಾನೆ ನನಗೆ ವೈರಿ.

ಶಿವ : ಬೇಡ ಭಕ್ತ ನನ್ನನ್ನು ಕೊಂದು ನೀನು ಪಾಪಕ್ಕೆ ಗುರಿಯಾಗಬೇಡ. ನೀನು ನನ್ನ ಮಗನಲ್ಲವೇ.

ಭಸ್ಮಾಸುರ : ಆದ್ರು ನಿನ್ನ ವರವು ಕರೆವೋ ಸುಳ್ಳೇ ನೋಡಬೇಕಲ್ಲ ಸ್ವಾಮಿ.

ಶಿವ : ಬೇಡ ಭಕ್ತ ಬೇಡ

ಭಸ್ಮಾಸುರ : ಹಾಡು : ನಿಲ್ಲು ನಿಲ್ಲು ಶಂಕರ ನೀನೆಲ್ಲಿ ಹೋಗುವೆ (2)
ಕರೆವೋ ಸುಳ್ಳವೋ ಕೈಚಾಚಿ ನೋಡುವೆ ಶಂಕರsss

ಪಾರ್ವತಿ : ನಿಲ್ಲು ಮೋಹನಾಂಗ ನಿಲ್ಲು

ಹಾಡು : ನಟನಕಳ ಚತುರ ಶಂಕರ
ಡಮರುಗ ವರನಾದ ಗೌರಿ ಪ್ರಿಯಕರ
ಸ್ವರಸಪ್ತಗಳು ತಾಳಮೇಳಗಳು
ಲಯಕರ್ತ ಭರತ ಗಂಧರ್ವಗಾನ

ತುಂಬುರಾದಿ ಗಂಧರ್ವ ಗಾನದೋಳು
ತದಿಂತ ತಕಜಣ ತದಿಂತ ತಕಜಣ
ನಟನಕಳ ಚತುರ ಶಂಕರ
ಡಮರುಗ ವರನಾದ ಗೌರಿಪ್ರಿಯಕರ

ಪಾರ್ವತಿ : ನಿಲ್ಲು ಮೋಹನಾಂಗ ನಿಲ್ಲು

ಭಸ್ಮಾಸುರ : ತಡೆ ತಡೆ ಮೋಹನಾಂಗಿ ಹೊ ಹೊ ಯಾರು ನೀನು

ಪಾರ್ವತಿ : ನಾನು ಮಧ್ಯಮೋಹಿನಿ ಅಲ್ಲವೆ ರಾಜ

ಭಸ್ಮಾಸುರ : ಮಧ್ಯ ರಾತ್ರಿ ಬಂದ ಕಾರಣವೇನು?

ಮೋಹಿನಿ : ಶಂಕರ ಪಾದಪೂಜೆಗಾಗಿ ಬಂದೆ।

ಭಸ್ಮಾಸುರ : ಶಂಕರನು...... ಶಂಕರ ಎಲ್ಲಿರುವನು ನಾನೆ ಶಂಕರನು ಬೇಗನೆ ನನ್ನನ್ನು ಲಗ್ನವನ್ನು ಆಗುವಂತಳಾಗು

ಮೋಹಿನಿ : ಆದರೆ ನಾನು ಮೂರು ನಿಯಮಗಳುಂಟಲ್ಲ ರಾಜ

ಭಸ್ಮಾಸುರ : ಅವೆಂತ ನಿಯಮಗಳು

ಮೋಹಿನಿ : ಒಂದು ನೇತ್ರಭಾವನ ಒಂದು ಹೃದಯ ಭಾವನ ಒಂದು ನಾಟ್ಯ ಭಾವನೆ ವಲ್ಲವೆ.

ಭೀಸ್ಮಾಸುರ: ಹೊಹೊ ಅವು ಹೇಗಾದರೂ ಬರುತ್ತಿರವದು?

ಮೋಹಿನಿ : ಹೊಹೊ ನನ್ನಂತ ನಾಟ್ಯವನ್ನು ಹಾಡಿದರೆ ನಿನ್ನ ಕುಲದೇವತೆ.

ಭೀಸ್ಮಾಸುರ: ಆದರೆ ವೈಶಿಷ್ಟವಾದರೆ

ಮೋಹಿನಿ : ಕುಲದೇವತೆ ಕೊಂದೆಬಿಡುವದಲ್ಲದೆ

ಹಾಡು : ತೊರಲು ನೀ ಪ್ರಿಯನ
ಓ ಲಲ ನಾ
ತೋರಲು ನೀ ಪ್ರಿಯನಾ
ಒ ಲಲ ನಾ
ಹಾಡಲು ನೀ ಸದನಾ ಗಿರಿಧರನಾ
ಹಾಡಲು ನೀ ಸದನಾ ಗಿರಿಧರನಾ
ಜಡಿಮೇಳ ಗಂಗೆಯ ಮೂಡಿಯೋಳು ಶ್ರೀ
ಮುತ್ತಿನ ಹಾರ ನಿನಗೆ ಬಾರ

ವಿರಹದಲಿ ಬಳಲಿ ಬಳಲಿ

ಮಧು ಜನ್ಯನ ಮಧು ಕಂಕಣ

ಮಾತನಾಡುವ ಮಧುವಿ ನೀನ ದೇವನಾ

ಮೋಹಿನಿ : ನನ್ನಂತೆ ಮಾಡಬೇಕಲ್ಲ ಸುಂದರ

ಭಸ್ಮಾಸುರ : ನಿನ್ನಂತೆ ನಾಟ್ಯಮಾಡಲು ಸಿದ್ಧನಿರುವೆನು ಮೋಹಿನಿ.

ಹಾಡು : ಸುಪ್ರಭಾತ ಸುಂದರಿ ಅರುಣರಾಗ ಮಂಜರಿ

ಚಲುವ ಮಧುರ ಮಾಧುರಿ ನನ್ನ ಬಾಳಿಗೆ ಆಸರಿ

ಸಪ್ತಲೋಕ ಸುಂದರಿ ಅರುಣರಾಗ ಮಂಜಿರಿ

ಚಲುವ ಮೊಗವ ಮಾಧುರಿ ಸುರಲೋಕದ ನಾಟ್ಯಮಂದಿರಿ

**ಅಂತರ**

ಮಧುಮಾಸ ಚೈತ್ರದಂತೆ ಕೋಗಿಲೆಯ ಗಾನದಂತೆ

ಮಧು ಮಧುರ ಜೀವನವೆಲ್ಲ ನವಭಾವ ಗೀತೆಯಂತೆ

ಗೀತ ಸಂಗೀತವಾಗಿ ರಾಗ ಅನುರಾಗವಾಗಿ

ಬಾಳೆನಾ ಆಯಾಗಿ

**ಭೀಮ ಆಂಜನೇಯು ಯುದ್ಧದ ಹಾಡು ಮಾತ್ರ ಸಂಭಾಷಿಸಿ**

(ಮು)ಹಾಡು : ಗದ್ದದನೆ ನಡುಗುಸುವೇನು ವೈರಿಗಳನ್ನು ನಾನು

ಬಂಡರ ಗುಂಡಗಳ ಚಂಡಾಡುವೆ ನಾನೀಗ

ಭೀಮ: ನಮ್ಮ ನಸ್ರಾವತಿ ಪಟ್ನವು ನಮ್ಮ ತಂದೆ ಪಾಂಡವ ರಾಜ ನಮ್ಮ ತಾಯಿ ಕುಂತಿದೇವಿ ನಮ್ಮ ಅಣ್ಣ ಧರ್ಮರಾಜರ, ದಾಯದಿ ಗುಡ ಜುಜಾನಾಡಿ ಸಕಲ ಸಾಮ್ರಾಜ್ಯವನ್ನು ಸೋತಿರುವುದು ಹನ್ನೆರಡು ವರ್ಷ ವನವಾಸವು ಒಂದು ವರ್ಷ ಅಜ್ಞಾತವಾಸವು ಕಾಲಕಳೆದವು ಈಗ ಪಾಂಚಾಲಿ ದ್ರೌಪದಿ ನನಗೆ ನಿನಗೆ ಏನು ಕೋರಿಕೆ ಇರುವುದು?

ದ್ರೌಪದಿ : ಪ್ರಾಣೇಶ್ವರ ಸುರಲೋಕ ಸೋಪಿತವಾದ ಸೌಗನ್ನರ ಸೌಪಿತವಿರಬಹುದು

ಭೀಮ : ಹೊಹೊ ಅದು ಎಲ್ಲಿ ಇರುವುದು ಅದು?

ದ್ರೌಪದಿ : ಕರೆ ಕುಬೆಂದ್ರ ವನದಲ್ಲಿರುವುದು ಪ್ರಾಣೇಶ್ವರ

ಭೀಮ : ಗರುಡ ಗರ್ವ ಕಿನ್ನರ ಕಿಂಪುರುಷ ಅಕ್ಷರಾಕ್ಷಸ ಕಾವಲಿರುವರು? ಅದರ ಸುತ್ತ ಕೋಟೆ ಸರ್ಪ ಕಾವಲಿರುವುದು ಅದು ತರ್ಲಿಕಬೇಕಾ?

ದ್ರೌಪದಿ : ತರ್ಲಿಕೆಬೇಕು ಪ್ರಾಣೇಶ್ವರ

ಭೀಮ : ಆದರೆ ನಿವೊಬ್ರೆ ಬಿಟ್ಟು ನಾನು ಹೇಗೆ ಹೋಗಲಿ?

ದ್ರೌಪದಿ : ಹೌದು ಪ್ರಾಣೇಶ್ವರ

ಹಾಡು : ಹಾಡು ಬಾ ಕೋಗಿಲೆ ನಲಿದಾಡು ಬಾ ನವಿಲೆ
ಸಿರಿಗನ್ನಡಾಂಬೆಯ ಜಯದಂಬೆ ಮನುವಿದು

ಭೀಮ : ಆದರೆ ಸಖಿ ನೀನೊಬ್ಬಳನ್ನು ಬಿಟ್ಟು ಹೋಗುತ್ತಿರುವುದು, ಪ್ರಯಾಣದಲ್ಲಿ ಏನಾದರೂ ಬಂದರೆ ನನ್ನನ್ನು ಧ್ಯಾನಿಸು

ದ್ರೌಪದಿ ಹಾಡು: ನಿನ್ನ ನೋಡದೆ ನಾನಿರಲಾರೆ
ನಿನ್ನ ನೋಡದೆ ನಾನಿರಲಾರೆ
ಪ್ರೇಯಸಿ ನನ್ನ ಸೌಂದರ್ಯಸಿ
ನಿನ್ನ ಕಾಣದೆ ನಾನಿರುವೆನು
ನಿನ್ನ ನೋಡದೆ ನಾನಿರಲಾರೆ

ಭೀಮ: ಹೋಗಿ ಬರುವೆನು ಪ್ರೇಯಸಿ ಹೋಗಿ ಬರುವೆನು

ದ್ರೌಪದಿ: ಹೊಗಿ ಬನ್ನಿ ಪ್ರಾಣೇಶ

**ಆಂಜನೇಯ ಪಾತ್ರ ಹಾಡು :**

ಜಯ ರಾಮಪರಂದಾಮ
ಶ್ರೀ ರಾಮ ಪರಂದಾಮ
ಜಯರಾಮ ರಾಮ ರಣರಂಗ ಭೀಮ
ಸಾಕೇತ ಸಾರ್ವಭೌಮ
ಶ್ರೀರಾಮ ಪರಂದಾಮ
ಜಯ ರಾಮ ಪರಂದಾಮ
ಜಯ ಜಯ ರಾಮ ಜಾನಕಿ ರಾಮ
ಜೈ ಶ್ರೀರಾಮ
ಜೈ ಶ್ರೀರಾಮ ಶ್ರೀರಾಮ ರಾಮ
ಶ್ರೀರಾಮ ನಾಮ ಶುಭ ಅಕ್ಷರದಿಂದಲೂ
ಸರ್ವ ಸಂಕಟಗಳು ದೂರಾದವು
ಶುಭ ನಾಮ ಸ್ಮರಣೆಯಿಂದಲೆ

ದ್ವಾರಕಪುರ ಪಟ್ಟಣದಲ್ಲಿ ಸುರ ಸುಖಿಯಾಗಿರುವುದಲ್ಲಿದೆ ಶ್ರೀರಾಮ ಅಯೋಧ್ಯ ರಾಮ ಪಟಾಭಿರಾಮ,

ಜಾನಕಿ ರಾಮ, ಕೋದಂಡ ರಾಮ, ನಿನ್ನ ಸ್ಮರಣೆಯಿಂದ ಗುಡ್ಡ-ಬೆಟ್ಟಗಳು, ಗಿರಿಪರ್ವತಗಳು ಸಪ್ತ ಸಮುದ್ರದಡಿ ಬ್ರಹ್ಮಾಂಡವ ಹಾರಬಲ್ಲುದಲ್ಲದೆ ಸ್ವಾಮಿ ಜೈ ಶ್ರೀರಾಮ ಓ ಅಲ್ಲಿ ಯಾರು ನನ್ನ ಸಹೋದರ ಬಲಭೀಮ ನನ್ನ ಕಡೆ ಬರುತಿರುವನು. ನನ್ನ ಬಾಲವನ್ನು ಅಡ್ಡಹಾಕಿ ಅವನನ್ನು ಪರೀಕ್ಷಿಸುವೆ ಜೈ ಶ್ರೀ ರಾಮ ರಾಮ.

ಹಾಡು : ಎಂತ ಬಲವಂತನು ಕುಂತಿದೇವಿ ಪುತ್ರನು.
ಭೀಮನು ಪ್ರಚಂಡನು ದ್ರೌಪದಿಗೆ ಗಂಡನು

ಭೀಮ : ಛೇ.. ಛೆ... ನಾನು ಹೋಗೊ ದಾರಿಯಲಿ ರಾಮ ರಾಮ ಧ್ಯಾನ ಮಾಡುತಲು ಮುದುಕ ಕಾಡಿನಲ್ಲಿ ಕೂತಿರುವುದು ಕಾರ್ಯಾರ್ಥವೇನು?

ಆಂಜನೇಯ: ಅಯ್ಯೋ ನಾನು ಒಬ್ಬ ಮುದಿ ಕೋತಿ, ನೀನು ಯಾರು? ನಿನ್ನ ನಾಮಂಕಿತ ಏನಯ್ಯ?

ಭೀಮ : ಓ.. ನಾಮಧೇಯ ಕೇಳುತಿರುವೆಯಾ, ನಮ್ಮದು ಹಸ್ತನಾವತಿ ಪುರ ಪಟ್ಟಣವು ನಮ್ಮ ತಂದೆ ಪಾಂಡವರಾಜ, ನಮ್ಮ ತಾಯಿ ಕುಂತಿದೇವಿ, ನಮ್ಮ ಅಣ್ಣನಾದ ಧರ್ಮರಾಜನು ದಾಯಾದಿಗಳ ಕೂಡ ಜೂಜುವನ್ನಾಡಿ ಸಕಲ ಸಾಮ್ರಾಜ್ಯವನ್ನು ಸೋತಿರುವುದು. ಈಗ ಹನ್ನೆರಡು ವರ್ಷ ವನವಾಸವು ಒಂದು ವರ್ಷ ಅಜ್ಞಾತವಾಸ ಕಾಲಕಳದಿವೆ. ಒಂದಾನು ಒಂದು ದಿವಸ ನನ್ನ ಪಾಂಚಾಲಿ ದ್ರೌಪದಿ ಸೌಗಂಧಿಕ ಪುಷ್ಪ ಕೋರಿರುವುದು ತರಲಿಕ್ಕೆ ಬಂದಿರುವೆನು. ಹೀಗೆ ದಾರಿಯಲ್ಲಿ ಬಿದ್ದಿರುವುದು ಕಾರ್ಯಾರ್ಥವೇನು.

ಆಂಜನೇಯ: ಹೋ.. ಹೊ.. ಗೊತ್ತಿದೆ ಭೀಮಸೇನ ಗೊತ್ತಿದ್ದ ಮಾತ್ರಕ್ಕು ಅದನ್ನು ಅರಿತು ತರಲು ಈ ಭೂ ಮಂಡಲದಲ್ಲಿ ಯಾರು ಇಲ್ಲ.

ಭೀಮ : ಈ ಭೀಮಗ ಅಸಾಧ್ಯವಾ?

ಆಂಜನೇಯ: ಈ ಭೀಮನಿಗೇಕೆ ಈ ಭೈರವನಿಗೂ ಕೂಡ ಅಸಾಧ್ಯವೆ.

ಭೀಮ : ಈ ಭೀಮನ ಪರಾಕ್ರಮ ತೋರಿಸಿ ಬಿಡುವೆನು

ಆಂಜನೇಯ: ನೀನು ಅಂತ ಶೂರನಾದರೆ ನನ್ನ ಜೊತೆ ಯುದ್ಧ ಮಾಡು

ಭೀಮ : ಹೇ.. ಹೇ.. ಅದೇನು ಮಹಾಭಾಗ್ಯವು ಈ ಮಾಡುವೆನು ಯುದ್ಧ

ಭೀಮ : ಅಯ್ಯೋ ಯಾರು ನೀನು ನಿನ್ನ ನಿಜರೂಪವನ್ನು ತೋರಿಸುವಂತವನಾಗು.

ಆಂಜನೇಯ: ಅಂತು ನಾನು ಶ್ರೀರಾಮ ಭಕ್ತನಾದ ವೀರಾಂಜನೇಯನಲ್ಲವೆ.

ಭೀಮ : ನನಗೆ ಬಹಳ ಆಶ್ಚರ್ಯವಾಯಿತು. ಅಂಜನೇಯ ನಿನ್ನ ನಿಜರೂಪವನ್ನು ತೋರಿಸಿದೆ ಮಾರುತಿ ಕೃಪದಿಂದ ತೋರಿಸುವಂತವನಾಗು

ಆಂಜನೇಯ: ಹಾಗಾದರೆ ನನ್ನ ಸ್ಮರಣೆಯನ್ನು ಮಾಡುತ್ತ ಇರು ಭಕ್ತ.

**ಹಾಡು**

ಸರ್ವ ಮಂಗಳ ನಾಮ ಸೀತಾ ರಾಮ ರಾಮ

ಸರ್ವ ಎನುತ ಶಾಂತಿದಾತ ರಾಮ ರಾಮ

ವೇದಶಿಲ ಪೂಜಿವಾಸ ರಾಮ ರಾಮ

ತೊಗೇಶ ಬಹುರೂಪವಿನಾಶ ರಾಮ ರಾಮ ಕೋದಂಡರಾಮ

ಊರಿನ ಬೇರೆ ಬೇರೆ ಸ್ಥಳಗಳಲ್ಲಿ

ಈ ರೀತಿಯಾಗಿ ಒಂದು ವಾರಗಟ್ಟಲೆ ನಾಟಕಗಳನ್ನು ಪ್ರದರ್ಶನ ಮಾಡುತ್ತಾರೆ. ಆದರೆ ಒಂದು ವಾರದವರೆಗೂ ಯಾವುದೇ ರೀತಿಯ ಹಣ, ದವಸ-ಧಾನ್ಯಗಳು ಪಡೆದುಕೊಳ್ಳುವುದಿಲ್ಲ. ಒಂದು ವಾರಗಟ್ಟಲೆ ದವಸ-ಧಾನ್ಯ-ಹೂ ಪಡೆಯದೆ ಇದ್ದರು ಜೀವನ ಹೇಗೆ ನಡೆಸುತ್ತೀರಾ ಅಂತ ಕೇಳಿದರೆ ನಮ್ಮ ಮನೆಯ ಹೆಣ್ಣುಮಕ್ಕಳು ಗಂಗೆ-ಗೌರಿ ಮುಂತಾದ ಹಾಡುಗಳನ್ನು ಹಾಡಿ ಭಿಕ್ಷೆ ಬೇಡಿಕೊಂಡು ಬಂದು ನಮ್ಮನ್ನು ಸಲಹುತ್ತಾರೆ ಎಂದು ಹೇಳುತ್ತಾರೆ.

ಹೀಗೆ ಒಂದು ವಾರಗಟ್ಟಲೆ ನಾಟಕಗಳನ್ನು ಪ್ರದರ್ಶನ ಮಾಡಿ ಕೊನೆಯ ದಿವಸ ಯಾವುದೇ ಪಾತ್ರಗಳನ್ನು ಮಡದೇ ಕೇವಲ ವೇಷಹಾಕಿಕೊಂಡು ಕೊರಳಲ್ಲಿ ಹಾರ್ಮೋನಿಯಂ ತಬಲ ಹಾಕಿಕೊಂಡು ಭಕ್ತಿಗೀತೆ, ಜಾನಪದಗೀತೆ, ದಾಸರ ಪದಗಳು, ತತ್ವಪದಗಳು ಮತ್ತು ಶಿವಶರಣರ ವಚನಗಳನ್ನು ಹಾಡಿ ಹಣ-ದವಸ-ಧಾನ್ಯಗಳನ್ನು ಪಡೆದುಕೊಂಡು ಬರುತ್ತಾರೆ. ಇವರ ಹತ್ತಿರ ಹಲವಾರು ಸಾಹಿತ್ಯದ ಭಂಡಾರವೆ ಇದೆ. ಇವರ ಹಾಡುಗಾರಿಕೆ ವಿಶಿಷ್ಟವೇನೆಂದರೆ ಯಾವುದೆ ಮನೆಗೆ ಭಿಕ್ಷೆಗೆ ಹೋದ ಸಂದರ್ಭದಲ್ಲಿ ಅವರ ಮನೆಯಲ್ಲಿ ಹಾಕಿರುವ ದೇವರ ಫೋಟೋಗಳನ್ನು ನೋಡಿ ಆ ದೇವರ ಮೇಲೆ ಹಾಡನ್ನು ಹಾಡುತ್ತಾರೆ. ಈ ರೀತಿಯಾಗಿ ಅವರವರ ಮನೆದೇವರ ಕುರಿತಾದಂತ ಹಾಡುಹಾಡಿದರೆ ಭಿಕ್ಷೆ ನೀಡದೆ ಹಾಗೆ ವಾಪಾಸ್ ಕಳಿಸುವುದಿಲ್ಲ. ಭಿಕ್ಷೆಕೊಟ್ಟೇ ಕೊಡುತ್ತಾರೆ. ಎನ್ನುವ ನಂಬಿಕೆ ಕಲಾವಿದರದು.

**ಇವರು ಭಿಕ್ಷೆ ಬೇಡುವ ಸಂದರ್ಭದಲ್ಲಿ ಹಾಡುವಂತ ಹಾಡುಗಳು**

ಉದಾ: ಇವರ ಮೇಳದಲ್ಲಿ ಹಾಡುವಂತ ಹಾಡುಗಳು

1. ಗಣೇಶನ ಸ್ತುತಿ

2. ಕನಕದಾಸ, ಪುರಂದರ ದಾಸ, ವಿಜಯ ವಿಠಲ ದಾಸರ ಕೀರ್ತನೆಗಳು

3. ಬಸವಣ್ಣ, ಅಕ್ಕಮಹಾದೇವಿ, ಬೇಡರ ದಾಸಿಮಯ್ಯ, ಅಲ್ಲಮಪ್ರಭುಗಳ ಸೋನ್ನಲಿಗಿ, ಸಿದ್ಧರಾಮೇಶ್ವರರ ವಚನಗಳು

4. ಕಡಕೋಳ ಮಡಿವಾಳಪ್ಪ, ಶಿಶುನಾಳ ಶರೀಫ, ಕೊಡೆಕಲ್ ಬಸವಣ್ಣನವರ ವಚನಗಳು, ರಾಮ-ಲಕ್ಷ್ಮಣರ ಕುರಿತು, ಆಂಜಿನೇಯನ ಮತ್ತು ಪಾಂಡವರ ಕುರಿತಾದ ಹಾಡುಗಳ ಜೊತೆಗೆ ಹಲವಾರು ಜನಮೆಚ್ಚುಗೆಯ ಜಾನಪದ ಗೀತೆಗಳನ್ನು ಹಾಡುತ್ತಾರೆ.

**ವಾದ್ಯಗಳು ತಯಾರಿಕೆ, ನುಡಿಸುವ ಕ್ರಮ**

**ವಾದ್ಯಗಳು** : ಪ್ರಾರಂಭದಲ್ಲಿ ಏಕತಾರಿ ಮತ್ತು ದಮಡಿ ವಾದ್ಯಗಳು ನುಡಿಸುವುದು ಕಂಡುಬರುತ್ತಿದ್ದವು. ನಂತರದಲ್ಲಿ ಹಾರ್ಮೋನಿಯಂ, ತಬಲ ವಾದ್ಯಗಳು ಕೂಡ ನುಡಿಸಲು ಪ್ರಾರಂಭಿಸಿದರು.



ವೇಷಗಾರರು ಅಲೆಮಾರಿ ಕಲಾವಿದರಾಗಿರುವುದರಿಂದ ಊರೂರು ತಿರುಗುತ್ತ ಬೀದಿ ಬೀದಿ, ಮನೆ ಮನೆ ತಿರುಗುತ್ತ ಹಾಡಿಕೊಂಡು ಭಿಕ್ಷೆ ಬೇಡುವ ಕಾಯಕವಾಗಿರುವುದರಿಂದ ಇವರು ಹಾರ್ಮೋನಿಯಂ ವಾದ್ಯದ ಬಗಲಿನ ಕೈಹಿಡಿಕೆಗೆ ಹಗ್ಗ ಕಟ್ಟಿ ಅದನ್ನು ಕೆಳಗೆ ಹಾಕಿಕೊಂಡು ನುಡಿಸುತ್ತಾರೆ.

ಈ ವೇಷಗಾರರ ಹಾಡುಗಾರಿಕೆಯಲ್ಲಿ ಈ ಹಾರ್ಮೋನಿಯಂ ವಾದ್ಯವು ಶ್ರುತಿಯನ್ನು ಕೊಡುವ ಶ್ರುತಿ ವಾದ್ಯದ ಜೊತೆಯಲ್ಲಿ ನಿರಂತವಾಗಿ ಹಾಡಿನುದ್ದಕ್ಕೂ ಹಾಡಿನ ಧ್ವನಿಯಲ್ಲಿ ಸಾಗುತ್ತದೆ.

**ತಬಲ–ಡಗ್ಗಾ**

ಭಾರತೀಯ ಸಂಗೀತದ ಅತ್ಯಂತ ಜನಪ್ರಿಯ ಲಯ ವಾದ್ಯವೆಂದರೆ ಅದು ತಬಲ ವಾದ್ಯವೆಂದು ಹೇಳಬಹುದು. ಉತ್ತಾರಾದಿ ಶಾಸ್ತ್ರೀಯ ಸಂಗೀತ ಇಂದು ಜಾನಪದ ಸಂಗೀತಕ್ಕೂ ನುಡಿಸಲ್ಪಡುತ್ತಿರುವ ಈ ತಬಲ ವಾದ್ಯವು ಪ್ರಸ್ತುತ ಶಾಸ್ತ್ರೀಯ ಸಂಗೀತ, ಜಾನಪದ ಸಂಗೀತ, ಲಘು ಸಂಗೀತ, ಸುಗಮ ಸಂಗೀತ, ಚಿತ್ರ ಸಂಗೀತ ಮತ್ತು ಭಜನೆ ಹೀಗೆ ನಾನಾ ಪ್ರಕಾರದ ಸಂಗೀತಕ್ಕೆ ಲಯಬದ್ಧವಾಗಿ ನುಡಿಸಲ್ಪಡುತ್ತದೆ. ಪ್ರಾರಂಭದಲ್ಲಿ ಮೃದಂಗದಿಂದ ತಬಲ ವಿಕಾಸವಾಯಿತೆಂದು ನಮಗೆ ತಿಳಿದುಬರುತ್ತದೆ. ಆದರೆ ಈ ತಬಲ ವಾದ್ಯವು ಮೃದಂಗಕ್ಕಿಂತ ಹಲವಾರು ಭಾಗಗಳಲ್ಲಿ ಬೇರೆ ಬೇರೆಯಾಗಿ ಕಾಣಿಸುತ್ತವೆ. ಈ ವಾದ್ಯ ಎರಡು ಪ್ರತ್ಯೇಕ ಪದಗಳನ್ನು ಹೊಂದಿದ್ದು, ಒಂದು ಕಬ್ಬಿಣದ್ದು ಮತ್ತೊಂದು ಮರದಿಂದ ತಯಾರಿಸಿದ್ದು.



ತಬಲ ವಾದ್ಯವು ವಿದೇಶಿ ವಾದ್ಯವೆಂದು ಹೇಳುತ್ತಾರೆ. ಕೆಲವರು ಸ್ವದೇಶಿ ವಾದ್ಯವೆಂದು ಹೇಳುತ್ತಾರೆ. ಆದರೆ ತಬಲ ಉತ್ಪತ್ತಿಗೆ ಏಕಾಭಿಪ್ರಾಯವಿಲ್ಲ. ಇದು ಮಧ್ಯಯುಗದಲ್ಲಿ ಉತ್ತರ ಭಾರತದಲ್ಲಿ ಪ್ರಚಾರಕ್ಕೆ ಬಂದಿದೆ. ಎಂದು ತಿಳಿದು ಬರುತ್ತದೆ. ಈ ತಬಲ ವಾದ್ಯ ಉತ್ಪತ್ತಿ 'ಟ್ಯೂಬಲ್' ಎಂಬುವನು ಮಾಡಿದ್ದಾನೆ ಎಂದು ಹೇಳುವವರು ಇದ್ದಾರೆ. ಮೃದಂಗ, ಪಖವಾಜ್, ಸಂಬಾಳ– ದಿಲ್ಲೂ ವಾದ್ಯಗಳು ಭಾರತದ ಪ್ರಾಚೀನ ವಾದ್ಯಗಳಾಗಿರುವುದರಿಂದ ಇವುಗಳನ್ನು ಎರಡು ಭಾಗ ಮಾಡಿ ಅಮೀರ ಖುಸ್ರೋ ತಬಲ ಉತ್ಪತ್ತಿ ಮಾಡಿದನೆಂದು ತಿಳಿದುಬರುತ್ತದೆ. ಮೊಘಲರ ಕಾಲದಲ್ಲಿ ತಬಲ ಹೆಚ್ಚು ಪ್ರಚಾರ ಪಡೆಯಿತು ಎಂದು ತಿಳಿದುಬರುತ್ತದೆ.

ಸಂಗೀತಕ್ಕೆ ಭಾಷೆ ಇಲ್ಲ, ಸಂಗೀತ ಒಂದು ವಿಶ್ವ ಭಾಷೆ ಎಂದು ಹೇಳುತ್ತಾರೆ. ಅದೇನೆ ಇರಲಿ ಈ ತಬಲ ವಾದ್ಯ ಸ್ವತಂತ್ರ ವಾದ್ಯವಾಗಿ ಮತ್ತು ಹಲವಾರು ಸಂಗೀತ ಪ್ರಕಾರಗಳಿಗೆ ಪಕ್ಕವಾಗಿ ನುಡಿಸುವುದು ಕಂಡುಬರುತ್ತದೆ.

ಎಡಭಾಗದ ಡಗ್ಗಾದ ಪಡಗಕ್ಕಿಂತ ಬಲಭಾಗದ ತಬಲದ ಪಡಗ ಚಿಕ್ಕದಿರುತ್ತದೆ. ಎಡಭಾಗದ ಪಡಗ ಕಬ್ಬಿಣದಿಂದ ತಯಾರಿಸಲಾಗಿದ್ದು, ಬಲಭಾಗದ ತಬಲದ ಪಡಗವನ್ನು ಮರದಿಂದ ತಯಾರಿಸಲ್ಪಟ್ಟಿರುತ್ತದೆ. ಈ ಪಡಗಗಳ ಒಳಗೆ ಆಡಿನ ಅಥವಾ ಮೇಕೆಯ ಚರ್ಮವನ್ನು ಮುಚ್ಚಿರುತ್ತಾರೆ. ಚರ್ಮದ ಅಂಚಿಗೆ ಹೊಂದಿಕೊಳ್ಳುವಲ್ಲಿ ಒಂದು ಇಂಚು ಅಗಲದ ಬೇರೆ ತಿಳುವಾದ ಚರ್ಮದ ಪದರ ಮೇಲೆ ಅಂಟಿಕೊಂಡಿರುವಂತೆ ಮಾಡಿರುತ್ತಾರೆ. ಚರ್ಮದ ಮಧ್ಯೆ ಭಾಗದಲ್ಲಿ ಕರ್ಣೆ ಲೇಪಿಸುತ್ತಾರೆ. ಇದು ಬಲಭಾಗದ ತಬಲಕ್ಕೆ ಮಾತ್ರ ಮಧ್ಯಭಾಗದಲ್ಲಿ ಇರುತ್ತದೆ. ಎಡಗಡೆಯ ದಗ್ಗಾ ವಾದ್ಯಕ್ಕೆ ಕರಣಿಯು ಮಧ್ಯಭಾಗದಲ್ಲಿರದೆ ಮಧ್ಯಭಾಗದ ಸಮೀಪ ಲೇಪಿಸುತ್ತಾರೆ. ಚರ್ಮದ ಹೆಣಿಕೆಯಿಂದ ಕೂಡಿದ ಮುಚ್ಚಳಿಕೆಯ ಕೊನೆಯ ಭಾಗ ಬಿಟ್ಟು ಗಾತ್ರದಷ್ಟಿರುತ್ತದೆ. ಅದರ ಒಳಗಡೆಯಿಂದ ಚರ್ಮದ ಬಾರುಗಳನ್ನು ಎಳೆದು ತಂದು ಹೊಳವಿನ ನಡುವೆ ಕಟ್ಟಿಗೆಯ ತಂಡುಗಳನ್ನು ಕೂಡಿಸಿದ್ದು, ಇವುಗಳನ್ನು 'ಗಟ್ಟಿ' ಎಂದು ಕರೆಯುತ್ತಾರೆ. ಸುತ್ತಿಗೆಯನ್ನು ತೆಗೆದುಕೊಂಡು ಈ ಗಟ್ಟಿಗೆಗಳನ್ನು ಹಿಂದಕ್ಕೆ ಮುಂದಕ್ಕೆ ಹೊಡೆಯುವುದರ ಮುಖಾಂತರ ಶ್ರುತಿಕೂಡಿಸುತ್ತಾರೆ. ಇದೆ ರೀತಿಯಾಗಿ ತಬಲದ ಜೊತೆಗೆ ನುಡಿಸಲಾಗುವ ಡಗ್ಗಾ ವಾದ್ಯದ ಪಡಗವನ್ನು ಮೊದ ಮೊದಲು ಮಣ್ಣಿನಿಂದ ತಯಾರಿಸಲ್ಪಡುತ್ತಿದ್ದರು. ಆದರೆ ಪ್ರಸ್ತುತ ಹಿತ್ತಾಳೆ, ತಾಮ್ರ, ಸ್ಟೇನ್‌ಲೆಸ್ ಸ್ಟೀಲ್, ಬೆಳ್ಳಿಗಳಿಂದಲೂ ತಯಾರಿಸುತ್ತಾರೆ. ಕೆಳಗಿನ ಭಾಗವನ್ನು ಸುಮಾರು ನಾಲ್ಕು ಇಂಚು ವ್ಯಾಸವುಳ್ಳದಾಗಿದ್ದು, ಮೇಲ್ಭಾಗ ಸುಮಾರು 4 ಇಂಚು ವ್ಯಸದುಳ್ಳದ್ದಾಗಿರುತ್ತದೆ. ಇದರ ಮುಚ್ಚಳಿಕೆ ಬಾರುಗಳು ತಬಲ ಬಾರಗಳಂತೆ ಇದ್ದು, ಚರ್ಮದ ಬಾರುಗಳಿಗೆ ತಬಲಕ್ಕೆ ಇರುವಂತ ದೊಡ್ಡ ದೊಡ್ಡ ಗಟ್ಟಿಗಳು ಇರುವುದಿಲ್ಲ. ಚಿಕ್ಕ ಚಿಕ್ಕದಾಗಿರುತಕ್ಕಂತ 'ಗಟ್ಟಿ'ಗಳು ಕೂಡಿಸಿರುತ್ತಾರೆ. ಚರ್ಮದ ಶೃತಿ ತರ ಸಪ್ತಕದಲ್ಲಿ ನುಡಿದರೆ ಡಗ್ಗಾದ ಶ್ರುತಿ ಮಂದ್ರ ಸಪ್ತಕದಲ್ಲಿ ನುಡಿಯುತ್ತದೆ. ವೇಷಗಾರ ಕಲಾವಿದರು ಮೂಲತಃ ಅಲೆಮಾರಿ ಕಲಾವಿದರಾಗಿರುವುದರಿಂದ ತಿರಿಗಾಡುತ್ತ ಸಂಗೀತ ಪ್ರದರ್ಶನ ಮಾಡುವ ಕಲೆಯಾಗಿದೆ. ಆದ್ದರಿಂದ ತಬಲ ಮತ್ತು ಡಗ್ಗಾ ಎರಡು ಜೋಡಿಸಿ ಅದಕ್ಕೆ ಒಂದು ಉದ್ದವಾದ ಹಗ್ಗ ಕಟ್ಟಿಕೊರಳಲ್ಲಿ ಹಾಕಿಕೊಂಡು ನುಡಿಸುತ್ತಾರೆ. ಇಲ್ಲಿ ಮುಖ್ಯಗಾಯಕನ ಹಾಡಿಗೆ ತಕ್ಕಂತ ನುಡಿಸುತ್ತಾನೆ. ಇವರು ತಮ್ಮ ತಬಲವಾದನದಲ್ಲಿ ಶಾಸ್ತ್ರೀಯ ಮತ್ತು ಸುಗಮ ಸಂಗೀತದ ಎಲ್ಲ ತಾಳಗಳು ನುಡಿಸುತ್ತಾರೆ ಮತ್ತು ವಿವಿಧ ರೀತಿಯ ತಾಳಕ್ಕೆ ತಕ್ಕಂತೆ ಲಗ್ಗಿಯನ್ನು ನುಡಿಸುತ್ತಾರೆ. ಎಲ್ಲಾ ತಾಳಗಳು ಸರಿಯಾಗಿ ನುಡಿಸಿದರು ಕೂಡ ಸೂಕ್ಷ್ಮತೆ ಕಂಡುಬರುವುದಿಲ್ಲ. ಜನಮೆಚ್ಚುಗೆಗಾಗಿ ಮತ್ತು ಧ್ವನಿವರ್ಧಕ ಇರದಿದ್ದ ಕಾರಣ ಜೋರಾಗಿ ನುಡಿಸುವುದು ಕಂಡುಬರುತ್ತದೆ. ಇದೇ ರೀತಿ ಜೋರಾಗಿ ನುಡಿಸಿ ಜನರನ್ನು ಆಕರ್ಷಿಸುವ ಶಕ್ತಿ ಇವರ ತಬಲವಾದನದಲ್ಲಿ ಕಂಡುಬರುತ್ತದೆ.



**ಗೆಜ್ಜೆ :** (ಜಾನಪದ ಮತ್ತು ಶಾಸ್ತ್ರೀಯ ಸಂಗೀತಗಳೆರಡರಲ್ಲಿ) ಜಾನಪದ ನೃತ್ಯ ಮತ್ತು ಶಾಸ್ತ್ರೀಯ ನೃತ್ಯಗಳಲ್ಲಿ ಬಳಕೆಯಾಗುವ ವಾದ್ಯ ಈ ಗೆಜ್ಜೆ ವಾದ್ಯ. ಕಂಚಿನಿಂದ ತಯಾರಿಸಲ್ಪಟ್ಟ ಚಿಕ್ಕ ಚಿಕ್ಕದಾದ ಗುಂಡುಗಳ ಮದ್ಯದಲ್ಲಿ ಟೊಳ್ಳು ಟೊಳ್ಳುಮಾಡಿ ಟೋಳುಮಾಡಿದ ಜಾಗದೊಳಗೆ ಸೀಸದ ಗುಂಡುಗಳನ್ನು ಹಾಕಿ, ಆ ಗುಂಡುಗಳು ಹೊರಗಡೆ ಬಾರದ ರೀತಿಯಲ್ಲಿ ಸೀಳಿದ ಬಾಯಿಯನ್ನು ಮುಚ್ಚಿರುತ್ತಾರೆ.



ದಾರವನ್ನು ಕಟ್ಟಲು ಆ ಗೆಜ್ಜೆಗಳ ಮೇಲ್ಭಾಗದಲ್ಲಿ ಕೊಂಡಿಗಳಿರುತ್ತವೆ. ಈ ಕೊಂಡಿಗಳಿಗೆ ಹೂವಿನ ಹಾಗೆ ದಾರದಿಂದ ಎಣೆದು ಕಾಲಿಗೆ ಅಥವಾ ಕೈಗೆ ಕಟ್ಟಿಕೊಂಡು ಇದನ್ನು ನುಡಿಸುತ್ತಾರೆ. ವೇಷಗಾರ ಕಲಾವಿದರೂ ಕೂಡ ತಮ್ಮ ಸಂಗೀತದಲ್ಲಿ ಈ ಗೆಜ್ಜೆವಾದ್ಯವನ್ನು ನುಡಿಸುತ್ತಾರೆ. ಈ ಗೆಜ್ಜೆವಾದ್ಯ ತಬಲ ನುಡಿಸುವ ಕಲಾವಿದ ತನ್ನ ಬಲಗೈಗೆ ಕಟ್ಟಿಕೊಂಡು ತಬಲ ನುಡಿಸುವುದರಿಂದ ತಬಲ ಮತ್ತು ಗೆಜ್ಜೆನಾದ ವಿಶೇಷವಾಗಿ ಕೇಳಿಬರುತ್ತದೆ. ಜನರನ್ನು ರಂಜಿಸುವುದಕ್ಕೋಸ್ಕರ ಈ ರೀತಿ ಗೆಜ್ಜೆಯನ್ನು ಕೈಗೆ ಕಟ್ಟಿಕೊಂಡು ನುಡಿಸುವುದು ಕಂಡುಬರುತ್ತದೆ ಮತ್ತು ಪಾತ್ರಧಾರಿಗಳು ತಮ್ಮ ಕಾಲಿಗೆ ಕಟ್ಟಿಕೊಂಡು ವಿವಿಧ ರೀತಿಯಲ್ಲಿ ನೃತ್ಯಮಾಡುತ್ತಾರೆ. ಆದರೆ ಇದರ ನೃತ್ಯದಲ್ಲಿ ಅಷ್ಟಮುದ್ರೆಗಳು ಕಂಡುಬರುವುದಿಲ್ಲ.

**ದಮ್ಮಡಿ :** ಸುಮಾರು 7 ಅಂಗುಲ ವ್ಯಾಸವುಳ್ಳ ವೃತ್ತಾಕಾರದ ಮರದ ಚೌಕಟ್ಟಿಗೆ ಉಡದ ಚರ್ಮದಿಂದ ಬಿಗಿಯಾಗಿ ಕಟ್ಟಿ ಈ ದಮ್ಮಡಿ ವಾದ್ಯ ತಯಾರಿಸುಲಾಗಿರುತ್ತದೆ. ಸಾಮಾನ್ಯವಾಗಿ ಮರದ ಚೌಕಟ್ಟಿಗೆ ಒಂದು ಮೋಹದ ಬಿಲ್ಲೆಯನ್ನು ಸಹ ಅಳವಡಿಸಲಾಗಿರುತ್ತದೆ. ದಮ್ಮಡಿ ವಾದ್ಯವನ್ನು ನುಡಿಸುವಾಗ ಈ ಲೋಹದ ಬಿಲ್ಲೆಯು ಕೂಡ ವಿವಿಧ ರೀತಿಯಲ್ಲಿ ಲಯಕ್ಕನುಗುಣವಾಗಿ ನಾದಹೊರಹೊಮ್ಮುತ್ತದೆ. ತಬಲ, ಡಗ್ಗಾ, ಪಖವಾಜ, ಮೃದಂಗ ವಾದ್ಯ ಸಲಕರಣೆ ಇರುವಂತೆ ದಮ್ಮಡಿ ವಾದ್ಯಗಳಿಗೆ ಸಲಕರಣಿ ಇರುವುದಿಲ್ಲ ಮತ್ತು ಈ ದಮ್ಮಡಿ ಶೃತಿಗೊಳಿಸಲು ತಬಲ ವಾದ್ಯವನ್ನು ಶೃತಿಗೊಳಿಸಲು ಉಪಯೋಗಿಸುವಂತೆ 'ಸುತ್ತಿಗೆ' ಉಪಯೋಗಿಸುವುದಿಲ್ಲ. ಬೆಂಕಿಯ ಝಳಕ್ಕೆ ಕಾಯಿಸುವುದರ ಮುಖಾಂತರ ದಮ್ಮಡಿ ವಾದ್ಯವನ್ನು ಶೃತಿ ಗೊಳಿಸುತ್ತಾರೆ. ಹಗಲುವೇಷಗಾರ ಕಲಾವಿದರು ಪ್ರಾರಂಭದಲ್ಲಿ ಹಾರ್ಮೋನಿಯಂ ಜೊತೆಗೆ ಈ ದಮ್ಮಡಿ ವಾದ್ಯವನ್ನು ನುಡಿಸುತ್ತಿದ್ದರು. ನಂತರದ ದಿನಗಳಲ್ಲಿ ತಬಲ ನುಡಿಸಲು ಪ್ರಾರಂಭಿಸಿದಾಗ ದಮ್ಮಡಿ ನುಡಿಸುವುದು ಕಡಿಮೆ ಯಾಗಿದೆ. ಎಡಗೈನಲ್ಲಿ ಹಿಡಿದುಕೊಂಡು ಬಲಗೈನ ಎಲ್ಲ ಬೆರಳುಗಳಿಂದ ನುಡಿಸಲಾಗುತ್ತದೆ ಆದರೂ ತೋರುಬೆರಳಿನ ಪಾತ್ರ ಮುಖ್ಯವಾಗಿರುತ್ತದೆ. ಪ್ರಥಮದಲ್ಲಿ ತೋರುಬೆಳನಿಂದ ಬಡಿದು ನಂತರ ಎಲ್ಲ ಬೆರಳುಗಳನ್ನು ಬಳಕೆಮಾಡುತ್ತಾರೆ. ಈ ವಾದ್ಯ ಜಾನಪದ ಸಂಗೀತದವಲ್ಲದೆ ಕರ್ನಾಟಕ ಶಾಸ್ತ್ರೀಯ ಸಂಗೀತದಲ್ಲಿಯು ಕೂಡ ನುಡಿಸಲಾಗುತ್ತದೆ.



**ನೃತ್ಯ :** ಇವರ ನೃತ್ಯಗಳಲ್ಲಿ ಯಾವುದೇ ರೀತಿಯ ಶಾಸ್ತ್ರೀಯ ಮುದ್ರೆಗಳು ಕಂಡುಬರುವುದಿಲ್ಲ. ಆದರೆ ಊರಿನ ಜಾತ್ರೆ, ಸಂತೆ, ಊರಿನ ಅಗಸಿಗಳಲ್ಲಿ ಜನರನ್ನು ಆಕರ್ಷಿಸಲು ತಮ್ಮದೇ ಆದ ಶೈಲಿಯಲ್ಲಿ ತಾಳ-ಲಯಕ್ಕನುಗುಣವಾಗಿ ಎದ್ದುನಿಂತು, ಕುಳಿತುಕೊಂಡು, ತಿರುಗಾಡಿ ಹೆಜ್ಜೆ ಹಾಕುತ್ತಾ ಜನರನ್ನು ಸುತ್ತುವರೆದು ನೃತ್ಯಮಾಡುವುದು ಕಂಡುಬರುತ್ತದೆ. ಕೇವಲ ಪಾತ್ರಧಾರಿಗಳು ಮಾತ್ರ ನೃತ್ಯ ಮಾಡುವುದು ಕಂಡುಬರುತ್ತದೆ. ಮುಮ್ಮೇಳ, ಹಿಮ್ಮೇಳ ಗಾಯಕರು ನುಡಿಸುವುದು ಕಂಡುಬರುತ್ತದೆ. ಇಲ್ಲಿ ಹಿಮ್ಮೇಳ ಮತ್ತು ಮುಮ್ಮೇಳ ಕಲಾವಿದರು ಮಾತ್ರ ಯಾವುದೇ ನೃತ್ಯ ಮಾಡದೆ ಭಾವಪೂರ್ವಕವಾಗಿ ಮೈ ಜೋಲಿ ಹೊಡೆದು ಹಾಡುವುದು ಕಂಡುಬರುತ್ತದೆ. ಮುಮ್ಮೇಳ ಮತ್ತು ಹಿಮ್ಮೇಳ ಗಾಯಕರು ನೃತ್ಯ ಮಾಡದೆ ಇರುವುದಕ್ಕೆ ಕೆಲವು ಕಾರಣಗಳು ಕಂಡುಬರುತ್ತವೆ. ಗುಲಬರ್ಗಾ ಜಿಲ್ಲೆಯ ಶಹಾಪೂರ ತಾಲೂಕಿನ ವೀರಭದ್ರಪ್ಪ, ವೇಷಗಾರ ಕಲಾವಿದರು ಹೇಳುವಂತೆ ಕೊರಳಲ್ಲಿ ಭಾರವಾದಂತ ಹಾರ್ಮೋನಿಯಂ ಇರುವುದು ಒಂದಾದರೆ, ತಬಲ ಮತ್ತು ನೃತ್ಯ ಮಾಡುತ್ತ ಹಾಡಿದರೆ ಅವರು ಹಾಡಿರುವ ಸಾಹಿತ್ಯ ಸ್ಪಷ್ಟವಾಗಿ ಕೇಳದೆ ಇರುವುದರಿಂದ ನೃತ್ಯಮಾಡುವುದು ಕಷ್ಟವಾಗುತ್ತದೆ ಎಂಬುದಾಗಿ ತಿಳಿಸುತ್ತಾರೆ.

**ಬಾಲಸಂತರ ವೇಷ**

ಬುಡ್ಗ ಜಂಗಮ ಸಮುದಾಯದ ಕಲಾವಿದರು ಹಾಕುವ ಹಲವಾರು ವೇಷಗಳಲ್ಲಿ ಬಾಲ ಸಂತರ ವೇಷವು ಒಂದು. ಬುರ‍್ರಕಥಾ ಮತ್ತು ಹಗಲು ವೇಷಗಾರಿಕೆಯಲ್ಲಿ ಬರುವಂತ ಹಾಡುಗಾರಿಕೆ, ವಾದ್ಯ ನುಡಿಸುವುದು ಮತ್ತು ನೃತ್ಯ ಹೆಚ್ಚು ಕಂಡುಬರುವುದಿಲ್ಲ. ಸ್ವಲ್ಪಮಟ್ಟಿಗೆ ಹಾಡುಗಾರಿಕೆ ಕಂಡುಬಂದರೂ ಸಹ ಆ ಹಾಡುಗಾರಿಕೆಯಲ್ಲಿ ಏರಿಳಿತಗಳು, ಆಲಾಪನೆ ಹೆಚ್ಚಾಗಿ ಕಂಡುಬರುವುದಿಲ್ಲ. ಒಂದೇ ದಾಟಿಯಲ್ಲಿ ಹಾಡುವುದು ಕಂಡುಬರುತ್ತದೆ. ಶರಣ-ಸತ್ಪುರುಷರು ಧರಿಸುವಂತ ಕಾವಿ, ರುಮಾಲನ್ನು ತಲೆಗೆ ಸುತ್ತಿಕೊಂಡು, ಹಣೆಗೆ ಭಸ್ಮ ಧರಿಸಿಕೊಂಡು ಹಣೆಯಲ್ಲಿ ಕುಂಕುಮ ಹಚ್ಚಿಕೊಂಡು ಕೊರಳಲ್ಲಿ ರುದ್ರಾಕ್ಷಿ ಮಾಲೆಯನ್ನು ಹಾಕಿಕೊಂಡು ಬಿದರಿನ ಕಟ್ಟಿಗೆಯ ಎರಡು ಕಡೆ ತುದಿ ಭಾಗಗಳಲ್ಲಿ ಜೋಳಿಗೆಯನ್ನು ಕಟ್ಟಿ, ಅದನ್ನು ಹೆಗಲಮೇಲೆ ಹಾಕಿಕೊಂಡು ಎಡಗೈಯಲ್ಲಿ ಘಂಟೆ, ಬಲಗೈಯಲ್ಲಿ ಶಂಖ ಹಿಡಿದುಕೊಂಡು ಬೆಳಗಿನ ಜಾವ 5 ಗಂಟೆಗೆ ಮನೆ ಮನೆಗೆ ಹೋಗಿ ಘಂಟೆಯನ್ನು ಬಾರಿಸುತ್ತ ಭಿಕ್ಷೆ ಬೇಡುತ್ತಾರೆ. ಭಿಕ್ಷೆ ನೀಡಿದ ನಂತರ ಭಿಕ್ಷೆ ನೀಡಿದವರ ಮನೆದೇವರ ಹೆಸರು ಹೇಳಿ ಆ ಮನೆದೇವರ ಹೆಸರಿನ ಜೊತೆಗೆ ಅನೇಕ ದೇವರ ಹೆಸರುಗಳನ್ನು ತೆಗೆದುಕೊಂಡು ಒಂದೇ ಉಸಿರಿನಲ್ಲಿ ಒಂದೇ ಸ್ವರದ ಮೇಲೆ ನಿಂತುಕೊಂಡು ಲಯದ ಗತಿಯಲ್ಲಿ ಹೇಳಿ ಜೊತೆಗೆ ಶಂಖ ಊದಿ ಮುಂದಿನ ಮನೆಗೆ ಹೊರಡುತ್ತಾರೆ. ಈ ರೀತಿಯಾಗಿ ಬಾಲಸಂತರು ಘಂಟೆ ಮತ್ತು ಶಂಖ ಊದಿಕೊಂಡು ದೇವರ ಸ್ಮರಣೆ ಮಾಡುತ್ತ ಊರೂರು, ಕೇರಿಕೇರಿ ಸಂಚರಿಸುತ್ತ ಹೊರಟರೆ ಅಲ್ಲಿ ಭೂತಪ್ರೇತಗಳು ಸಂಚರಿಸುವುದಿಲ್ಲವೆಂಬುದು ಒಂದು ನಂಬಿಕೆ ಇರುವುದರಿಂದ ಬಾಲಸಂತ ಕಲಾವಿದರು ಈ ರೀತಿಯಾಗಿ ಬೇಡಿಕೊಳ್ಳುತ್ತಾರೆ.

ಹರಹರ ಸೀತಾಮಾತ – ಅಯ್ಯೋಧ್ಯರಾಮ

ಬಾಣತಿ ನನ್ನಮ್ಮ – ಬಯಲಿಗೆ ಬಾ ತಾಯಿ

ಹಾಲುಕುಡಿಯುವ ನಿನ್ನ ಬಾಲಗಳು – ಆರೋಗ್ಯದಿಂದಿದ್ದಾವೆ

ನಿನ್ನಣೆಯ ಕುಂಕುಮ ಸದಾಕಾಲ ಉಳಿಯಲಿ

ಈ ಮಾತು ಹೇಳುತ್ತೇನೆ – ನಿನ್ನ ರಾಮಯ್ಯ

ತಾಯಿ ಸೀತಾಮಾತೆ – ಬಾಣತಿ ತಾಯಿ

ಓ ಹುಚ್ಚು ಸೀತಮ್ಮ – ನಿನ್ನ ಮನಸ್ಸು ಬಿಚ್ಚಮ್ಮ

ಅಯ್ಯೋಧ್ಯ ಪಟ್ಟಣದ – ಮುತ್ತೈದೆ ಬಾರಮ್ಮ

ಗೊರಾರು ಅರಣ್ಯದಲ್ಲಿ – ಬಿಟ್ಟಬಂದ ಪಾಪಿ ನಾನು

ನಿನ್ನ ಮುದ್ದು ಮಕ್ಕಳನ್ನು ಆಡಿಸಲು ಬಂದ ಬಾಲಸಂತ ಈ ರೀತಿಯಾಗಿ ಹಾಡಲಿಕ್ಕೆ ಸಮುದಾಯದ ಹಿರಿಯ ಕಲಾವಿದರು ಹೇಳಿರುವ ಒಂದು ಕಥೆ. ರಾಮಾಯಣದಲ್ಲಿ ಬರುವ ಒಂದು ಕಥೆ ಹೀಗೆ ಹೇಳುತ್ತಾರೆ. ಸೀತಾಮಾತೆ ಲಂಕೆಯಲ್ಲಿ ಇದ್ದುದಕ್ಕಾಗಿ ಶ್ರೀರಾಮನು ಸೀತಾಮಾತೆಯ ಮೇಲೆ ಅನುಮಾನ ಪಟ್ಟು ತುಂಬು ಗರ್ಭಿಣಿಯಾಗಿದ್ದ ಸೀತಾಮಾತೆಯನ್ನು ಅರಣ್ಯದಲ್ಲಿ ಬಿಟ್ಟು ಬರುತ್ತಾರೆ. ನಂತರ ಆ ಸೀತಾಮಾತೆಗೆ ಲವ ಮತ್ತು ಕುಶ ಎಂಬ ಎರಡು ಗಂಡುಮಕ್ಕಳು ಹುಟ್ಟುತ್ತಾರೆ. ಆಗ ಸೀತಾಮಾತೆಯನ್ನು ಮತ್ತು ಆ ಎರಡು ಮಕ್ಕಳಿಗೆ ಆಶೀರ್ವಾದ ಮಾಡಬೇಕೆಂದರೆ ಅಣ್ಣನ ಮಾತು ಮೀರಿದಂತಾಗುತ್ತದೆ ಎಂದು ತಿಳಿದು ಈ ಬಾಲ ಸಂತವೇಷ ಧರಿಸಿಕೊಂಡು ಸೀತೆ ಹಾಗೂ ಮಕ್ಕಳಿಗೆ ಆಶೀರ್ವಾದ ಮಾಡಿಬರುತ್ತಾನೆ. ಅವತ್ತಿನಿಂದ 'ಬಾಲಸಂತರು' ಎಂದು ಹೆಸರು ಬಂದಿದೆ ಎಂದು ತಿಳಿದುಬರುತ್ತದೆ.

**ಡಿಲು ಮೇಳ :** ಆಧುನಿಕ ಸಮಾಜದ ಜನತೆ ಜಾಗತೀಕರಣ ದಟ್ಟ ಪ್ರಭಾವಕ್ಕೆ ಸಿಕ್ಕಿ ನಾಗಲೋಟದಲ್ಲಿ ಸಾಗುತ್ತದೆ. ಅಂತರದಲ್ಲಿ ಸಮಾಜದ ಮುಖ್ಯವಾಹಿನಿಗೆ ಬುಡ್ಗಜಂಗಮರು ಇಂದಿಗೂ ಕೂಡ ತಮ್ಮ ಮೂಲ ಸಂಸ್ಕೃತಿಯೊಂದಿಗೆ ಅಂಟಿಕೊಂಡು ಜೀವನ ನಡೆಸುತ್ತ ಬಂದಿದ್ದಾರೆ. ಜಾಗತೀಕರಣದ ದಟ್ಟ ಪ್ರಭಾವದಲ್ಲಿ ತಮ್ಮ ಮೂಲ ಸಂಸ್ಕೃತಿಯ ಪಳಯುಳಿಕೆಗಳನ್ನು ಇಂದಿಗೂ ಜೀವಂತವಾಗಿ ಉಳಿಸಿಕೊಂಡು ಬಂದಿದ್ದಾರೆ.

ಬುಡ್ಗ ಜಂಗಮರು ಉಳಿಸಿ ಬೆಳಸಿಕೊಂಡು ಬಂದಿರುವ ಹಲವಾರು ಪ್ರದರ್ಶಕ ಕಲೆಗಳಲ್ಲಿ ಡಿಮ್ಮಿ ಮೇಳವು ಒಂದು. ತೆಲುಗಿನಲ್ಲಿ ಡೆರೆ ಪದಾಲು ಅಂತ ಕರೆಯುತ್ತಾರೆ. ಕನ್ನಡದಲ್ಲಿ ದಮ್ಮಡಿ ಹಾಡುಗಳು ಎಂದು ಕರೆಯುತ್ತಾರೆ. ಈ ದಮ್ಮಡಿ ಹಾಡುಗಳನ್ನು ಬಹುತೇಕ ಬುಡ್ಗಜಂಗಮ ಸಮುದಾಯದ ಮಹಿಳೆಯರೆ ಹಾಡುತ್ತಾರೆ. ಬೆಳಗಿನ ಜಾವ ಎದ್ದು ಎಲ್ಲರು ಜೊತೆಯಾಗಿ ಸೇರಿ ತೊಳಲ್ಲಿ ಜೋಳಿಗೆ ಹಾಕಿಕೊಂಡು ಕೊರಳದಲ್ಲಿ 'ಡಿಮ್ಮಿ' ವಾದ್ಯ ಹಾಕಿಕೊಂಡು ಶಿವಶರಣ–ಶರಣೆಯರ ವಚನಗಳು,

ತತ್ವಪದಗಳು, ಸರ್ವಜ್ಞನ ಪದಗಳು ಮತ್ತು ದಾಸರ ಪದಗಳನ್ನು ಹಾಡುತ್ತಾರೆ. ಇವರು ಯಾವುದೇ ರೀತಿ ಶಾಸ್ತ್ರೀಯ ಸಂಗೀತ ಕಲಿತ ಕಲಾವಿದರಲ್ಲ, ಆದರೂ ಕೂಡ ದಾದ್ರ, ಕೆಹರವಾ ತಾಳದಲ್ಲಿ ಸುಮಧುರವಾಗಿ ಹಾಡುತ್ತಾರೆ. ಇವರ ಹಾಡುಗಾರಿಕೆಯಲ್ಲಿ ಆಲಾಪನೆಗೆ ಹೆಚ್ಚು ಮಹತ್ವಕೊಡದೆ ಸಾಹಿತ್ಯಕ್ಕೆ ಹೆಚ್ಚು ಮಹತ್ವಕೊಟ್ಟು ಹಾಡುತ್ತಾರೆ. ಎಲ್ಲ ಶಿವಶರಣರ ಹಾಡುಗಳನ್ನು ಹಾಡಿದ ನಂತರ ಕೊನೆಯಲ್ಲಿ "ಬಾ ಅಮ್ಮ, ಬಾ ತಾಯಿ ನಮ್ಮ ಹಡದವ್ವ" ನಿನಗೆ ಐದು ಮಂದಿ ಗಂಡುಮಕ್ಕಳು ಐದು ಮಂದಿ ಹೆಣ್ಣುಮಕ್ಕಳಾಗಲಿ, ಮಕ್ಕಳ ಮದುವೆ ಆಗಲಿ ತಾಯಿ, ಹೇಮರೆಡ್ಡಿ ಮಲ್ಲಮ್ಮ, ಅಕ್ಕಮಹಾದೇವಿ, ಪಾರ್ವತಿ ಇದ್ದಂಗ ಇದ್ದಿ ತಾಯಿ ಧರ್ಮದೇವತೆ ತಾಯಿ, ಅನ್ನಪೂರ್ಣತಾಯಿ ಎಂದು ತಮ್ಮ ಕಲೆಯನ್ನು ಪ್ರದರ್ಶನ ನೀಡಿ ದವಸ-ಧಾನ್ಯಗಳನ್ನು ದಾನವಾಗಿ ಪಡೆದುಕೊಂಡು ಬರುತ್ತಾರೆ.

ಬುಡ್ಗಜಂಗಮ ಸಮುದಾಯದವರು ಹಾಡುವ ಹಲವಾರು ವೇಷಗಳಲ್ಲಿ ಕೊಂಡಮಾಮ ವೇಷವು ಒಂದು. ಈ ಕುರುಕುರು ಮಾಮವೇಷ ಹಾಕುವ ವ್ಯಕ್ತಿ ಸಂಗೀತಗಾರನಾಗಿರದೇ ಭವಿಷ್ಯ ಹೇಳುವುದು ಮತ್ತು ವೈದ್ಯರೂ ಆಗಿರುತ್ತಾರೆ. (ದಾಸರ ಸಮುದಾಯದಂತೆ ಇವರ ಕೈಯಲ್ಲಿ ಕೂಡ ಏಕತಾರಿ ವಾದ್ಯ ಇರುತ್ತದೆ.)

ಚನ್ನದಾಸರ ಸಮುದಾಯದವರು ಕೈಯಲ್ಲಿ ಏಕತಾರಿ ವಾದ್ಯವನ್ನು ನುಡಿಸುತ್ತ ಹಾಡುವಂತೆ ಈ 'ಕೊಂಡಮಾಮ' ಕಲಾವಿದನು ಸಹ ಕೈಯಲ್ಲಿ ಏಕತಾರಿ ವಾದ್ಯವನ್ನು ನುಡಿಸುತ್ತ ಹಾಡುತ್ತಾರೆ.

ಕೊಂಡಮಾಮನ ವೇಷ ಹಾಕುವ ಬುಡ್ಗಜಂಗಮ ಸಮುದಾಯವನ್ನು 'ರಾಮಕೊಂಡರು' 'ಕೊಂಡಮಾವ' ಕುರುಮಾಮ 'ಕುರುಕುರು ಮಾಮ', 'ಶ್ರೀ ಜಂಗಾಲು' ಮುಂತಾದ ಹೆಸರುಗಳಿಂದ ಕರೆಯುತ್ತಾರೆ. 'ಕೊಂಡಮಾಮ' ಎಂಬುದು ಬುಡ್ಗ ಜಂಗಮರು ಧರಿಸುವ ಒಂದು ವೇಷದ ಹೆಸರು ಮತ್ತು ಅದು ಜಾತಿಯ ಹೆಸರು.

ಕನ್ನಡದ ಗ್ರಾಮ್ಯ ನುಡಿಯಲ್ಲಿ 'ಕುರು' ಎಂದರೆ ಕುರುಹು ಗುರುತು, ನಂಬು ಬಗ್ಗೆ ಅಥವಾ ಕುಲಿತು ಎಂಬ ಅರ್ಥವಾಗುತ್ತಿದೆ ಎಂದು ತಿಳಿದುಬರುತ್ತದೆ. ಆದರೆ ಸಂಸ್ಕೃತದಲ್ಲಿ 'ಕುರು' ಎಂದರೆ ಮಾಡು ಅಥವಾ ಹುಡುಕು ಎಂದರ್ಥವಾಗುತ್ತದೆ. ಡಾ. ವಡ್ಡಗೆರೆ ನಾಗರಾಜಯ್ಯ, ಬುಡ್ಗ ಜಂಗಮ ಸಮುದಾಯ, ಡಾ. ಬಿ.ಆರ್. ಅಂಬೇಡ್ಕರ ಸಂಶೋಧನೆ ಸಂಸ್ಥೆ ಬೆಂಗಳೂರು 2016 ಪುಟ.184) ಕುರುಕುರು ಮಾಮ ಕಲಾವಿದರೂ ಕೂಡ ದಾಸ ಸಮುದಾಯದವರಂತೆ ಕೈಯಲ್ಲಿ ಏಕತಾರಿ ವಾದ್ಯ ಹಿಡ್ಕೊಂಡು ಹಾಡುತ್ತಾರೆ. ಏಕತಾರಿ ವಾದ್ಯ ಇವರ ಕೈಗೆ ಹೇಗೆ ಬಂತು ಎಂಬುದಕ್ಕೆ ಒಂದು ಸಣ್ಣ ದಂತಕಥೆ ಇದೆ. ಇವರು ಮೂಲತಃ ಅಲೆಮಾರಿಗಳಾಗಿರುವುದರಿಂದ ಹೊಟ್ಟೆಪಾಡಿಗೋಸ್ಕರ ಭಿಕ್ಷೆ ಬೇಡುತ್ತ ಜೀವನ ನಡೆಸುತ್ತಿದ್ದರು. ಕೊಂಡಮಾಮರ ಮೂಲ ಪುರುಷರು ಕಾಡುವಾಸಿಗಳಾಗಿದ್ದರು. ಕಾಡುವಾಸಿಗಳಾಗಿರುವದರಿಂದ ಇವರನ್ನು 'ಜಂಗಾಲರು' ಎಂದು ಕರೆಯುತ್ತಾರೆ. ಇವರು ತಮ್ಮದೇ ಆದ ನಿಯಮಗಳನ್ನು ಹಾಗೂ ಸಾಂಸ್ಕೃತಿಕ ಆಚರಣೆಗಳನ್ನು ರೂಢಿಸಿಕೊಂಡು ಕಾಡು ಜನರ ಜೀವನ

ಶೈಲಿಗೆ ತಕ್ಕಂತೆ ಬಟ್ಟೆಗಳನ್ನು ಧರಿಸದೆ ಬಿಲ್ಲು, ಬಾಣ, ಬತ್ತಳಿಕೆಗಳನ್ನು ಆಯುಧಗಳನ್ನಾಗಿ ಬಳಸಿ ಕಾಡುಪ್ರಾಣಿಗಳನ್ನು ಬೇಟೆಯಾಡಿ ಅವುಗಳ ಮಾಂಸ ಹಾಗೂ ಗೆಡ್ಡೆ-ಗೆಣಸುಗಳನ್ನು ತಿಂದು ಬದುಕುತ್ತಿದ್ದರು. ಇವರ ಕಷ್ಟಗಳನ್ನು ನೋಡಿ ಒಮ್ಮೆ ಆದಿ ದೇವನಾದ ಶ್ರೀಶೈಲ ಮಲ್ಲಿಕಾರ್ಜುನನು ನಾರದನ ರೂಪದಲ್ಲಿ ವೇಷಧರಿಸಿ ಇವರನ್ನು ಕಾಣಲು ಬಂದನು. ಬಟ್ಟೆಗಳನ್ನು ಧರಿಸದೆ ವಿವಸ್ತ್ರರಾಗಿದ್ದ ಇವರನ್ನು ಕಂಡು ಬಹಳಷ್ಟು ಮರುಗಿ(ನೊಂದು) ವಸ್ತ್ರಗಳನ್ನು ನೀಡಿ ಸೋರೆ ಬುರುಡೆಯ ತಂತಿ ವಾದ್ಯವನ್ನು ನೀಡಿ ಇನ್ನು ಮುಂದೆ ತನ್ನನ್ನು ತಪ್ಪದೆ ನಾಮಸ್ಮರಣೆ ಮಾಡಬೇಕೆಂದು ಅಪ್ಪಣೆಯನ್ನಿತ ಮಾಡಿದನಂತೆ ಅದೆ ಪು.186) ಅವತ್ತಿನಿಂದ ಇವತ್ತಿನವರೆಗೂ ಕೂಡ ಕುರುಕುರು ಮಾಮ ಕಲಾವಿದರು ಏಕತಾರಿ ವಾದ್ಯ ಹಿಡಿದುಕೊಂಡು ಹಾಡುತ್ತಾರೆ. ಇವರದು ಭವಿಷ್ಯ ಹೇಳುವ ಸಂಪ್ರದಾಯವಿದ್ದರೂ ಕೂಡ ಆ ಭವಿಷ್ಯದ ನುಡಿಗಳು ಸ್ವರ ಬದ್ಧ, ತಾಳ-ಲಯಬದ್ಧವಾಗಿ ಹೇಳುವುದು ಕಂಡುಬರುತ್ತದೆ.

**ಉದಾ:** ರಾಮನಂದುಡಾ ರಾಮನಂದುಡಾ ಮಾಸ್ತು ನನ್ನ ಗುರುನಾದನ್ನ ಕೊಂಡ ದೇವುಡಾ ಜಗನ್ನಾಧುಡಾ ಎಗಡುಂಡಾವು ಮಂಜುನಾಥುಡಾ ಎಗಡುಂಡಾವು

ಶ್ರೀ ಶೈಲುಡಾ ಎಗಡುಂಡಾವು ರಾಮನಂದುಡ ಎಗಡುಂಡಾವು
ಹೆಸರು ಯಾವುದು? ಮಾಮ ನಿಂದು
ಹುಟ್ಟಿದ ಯೋಗ ರೈಟು ಉಂಟು
ಬೆಳೆದ ಯೋಗ ರೈಟು ಉಂಟು
ಅದೃಷ್ಟೆಂಬುದು ಆರುಂಟು
ಗುಣ ಎಂಬುದು ನಾಲ್ಕುಂಟು
ನಸೀಪು ಎಂಬುದು ಒಂಭತ್ತೈತಿ
ಚಂದ್ರಾನ ಬೆಳದು ಸೂರ್ಯನ ರವಸು
ಗಂಡುವಾರದ ಯೋಗದಲ್ಲಿ ಸೂರ್ಯನ ರವಸು
ಗಂಡುವಾರದ ಯೋಗದಲ್ಲಿ ನೀ ಹುಟ್ಟಿದಿರಿ
ಅನ್ನರೇಕದಲ್ಲಿ ತೊಂದರೆ ಇಲ್ಲ

ಬಲುಭಾಗದ ಮರ್ಮಸ್ತಾನದಲ್ಲಿ ಮಚ್ಚೆಯ ಉಂಟು ಆಯುಷ್ಯ ಐತೆ ಎಂಬತ್ತೆರಡು ವರ್ಷ ಪರ್ಯಾಣ ಉಂಟು ನೀ ಹುಟ್ಟಿದ ಹದಿನಾಲ್ಕು ವರ್ಷ ಪ್ರಯೋಜನವಿಲ್ಲ

ಕೃಷ್ಣಾಗಿ ತಿರುಗಿದಿದ್ದಯ
ಮಾಮನಾಗಿ ಮೆರದಿದ್ದಯ
ಮರೆದರು ಅಣ್ಣ ನಿನ್ನ ರಾಣಿ
ಮಾನ ಹೋದ ಅಮವಾಸ್ಯೆಗಣ್ಣ
ನಿನ್ನ ಕಷ್ಟ ಬಿಡುಗಡೆಯಾಯಿತು

ಮುಂದು ಭವಿಷ್ಯ ಬರಬ್ಬರಿ ಉಂಟು
ಮಿಸ್ಪೀಕಿಲ್ಲ ಕೇಳಲು ಬೇಡ ಕೊರ ರರ – ಮಾಮ

ಈ ಮೇಲಿನ ಹಾಡು 'ಭಜನ' ತಾಳದಲ್ಲಿದ್ದು ಕೇವಲ ಮೂರೆ ಮೂರು ಸ್ವರಗಳ ಮೇಲೆ ಈ ಹಾಡು ಸಂಚರಿಸುತ್ತದೆ ನಿನಿ ಸಸಸಪ, ನಿನಿಸಸರೆಸ ಕುರು ಕುರು ಮಾಮನ ಪಾಂಡಿತ್ಯ ಮೆಚ್ಚಬೇಕಾದುದೆ. ಕಾರಣ ಯಾವುದೇ ರೀತಿಯ ಶಿಷ್ಯ ಸಂಗೀತ ಅಭ್ಯಾಸ ಮಾಡಿರದಿದ್ದರೂ ಸಹ, ಭವಿಷ್ಯ ಹೇಳುವ ಸಾಹಿತ್ಯವನ್ನು ಒಂದು ಶೃತಿ ಹಿಡಿದುಕೊಂಡು ಒಂದು ತಾಳದ ಚೌಕಟ್ಟಿನೊಳಗೆ ಅಪಶೃತಿ ಮಾಡದೆ ಲಯಬದ್ದವಾಗಿ ಹಾಡುತ್ತಾನೆ. ಆದರೆ ಈ ಹಾಡಿನಲ್ಲಿ ಆಲಾಪನೆ ಬಹಳಷ್ಟು ಕಡಿಮೆ ಇರುವುದು ಕಂಡುಬರುತ್ತದೆ. ಇದರ ಹಾಡುಗಾರಿಕೆಯಲ್ಲಿ 75 ಪ್ರತಿಶತ ಸಾಹಿತ್ಯದ ಅರ್ಥಕ್ಕೆ ಮಹತ್ವಕೊಡುತ್ತಾರೆ. ಈ ಮೇಲಿನ ಭವಿಷ್ಯ ಹೇಳುವ ಸಂದರ್ಭದಲ್ಲಿ ಹಾಡುವಂತ ಹಾಡಾಗಿದ್ದರೆ? ಮನೆ ಮನೆಗೆ ತಿರುಗಿ ಭಿಕ್ಷೆ ಬೇಡುವ ಸಂದರ್ಭದಲ್ಲಿ

ಹಾಡುವ ಹಾಡು: ಈ ರೀತಿಯಾಗಿರುತ್ತದೆ.

ದೇಶವೊಂದನ್ನು ಬೇಡಿಕೊಂಡನ್ನ
ಪಡಗಲುನಾಥ ಭಿಕ್ಷೆಯ ಮಡಗು
ಮಡಗಲು ಸೀತ ಭಿಕ್ಷೆಯ ಮಡಗು
ಶ್ರೀ ರಾಮಕೊಂಡನ್ನ ರಾಮಕೊಂಡನ್ನ
ರಾಮಕೊಂಡನ್ನ
ಪಡಗನಾಥ ಏಕಮೂತನ್ನ

ಹೀಗೆ ದಿನಾಲು ಊರು ಅಲೆಯುವಾಗ ಈ ರೀತಿ ಹಾಡುಗಳನ್ನು ಹಾಡಿಕೊಂಡು ಜೀವನ ನಡೆಸುತ್ತಾರೆ. ಇವರು ತಮ್ಮ ತಿರುಗಾಟದ ಸಂಗೀತದಲ್ಲಿ ಏಕತಾರಿ ವಾದ್ಯ ಬಿಟ್ಟರೆ ಬೇರೆಯಾವ ವಾದ್ಯವು ಸಹ ಬಳಸುವುದಿಲ್ಲ. ಕುರುಕುರು ಮಾಮರು ಸಂಗೀತಗಾರರು, ಭವಿಷ್ಯಕಾರರು ಮಾತ್ರವಲ್ಲದೆ ವೈದ್ಯರೂ ಕೂಡ ಆಗಿದ್ದಾರೆ. ವೈದ್ಯ ವೃತ್ತಿಯೆಂದರೆ ಯಾವುದೇ ಅಸ್ಪತ್ರೆಯಲ್ಲಿ ಕುಳಿತುಕೊಂಡು ವೈದ್ಯಕೀಯ ಮಾಡುವುದಿಲ್ಲ. ತಮ್ಮ ಭಿಕ್ಷಾಟನೆ ಸಂದರ್ಭದಲ್ಲಿ ಏಕತಾರಿ ತಂತಿಯನ್ನು ಮೀಟುತ್ತ ತಾವು ಯಾವ ಯಾವ ಕಾಯಿಲೆಗಳಿಗೆ ಔಷಧಿ ನೀಡುತ್ತಾರೋ ಆ ವಿವರಣೆಯನ್ನು ಅಂದರೆ ಹರಿಯೋ ಕಾಲದಲ್ಲಿ ಅಂಚುಕಡ್ಡಿ ಕಳೆಯೋ ಕಾಲದಲ್ಲಿ ಒಂದು ಹುಲ್ಲುಕಡ್ಡಿ ಮಾಡತಿದಿ

ಮಂಡಿ ನೋವು, ಕೀಲುನೋವು
ಮುಂಗೈ ನೋವು, ಜಲಬಾಧೆ
ನೆಗಡಿ ಕೆಮ್ಮು ಏನಾದ್ರು ಇರಲಿ
ಜೀವಸ್ಥಾನ ಜನಾಸ್ತುನ ಜನಸ್ತುನ

ಹಿಡಿದು ಕಳತಿನಿ

ಹೊಟ್ಟೆ ನೋವು, ಸುಸ್ತು ಸಂಕಟ

ಕಣ್ಣಲ್ಲಿ ಮಂಜು ಕಾಣಿಸಿದ್ರ ಹೀಗೆ ತಮ್ಮ ಗಿಡಮೂಲಿಕೆಯ ವಿವರಗಳನ್ನು ಲಯದ ಗತಿಯಲ್ಲಿ ಮತ್ತು ಸರಗಳ ಚೌಕಟ್ಟಿನಲ್ಲಿ ಹೇಳುವುದು ತುಂಬ ಅಧ್ಭುತವಾದಂತ ಕಲೆಯಾಗಿ ಕಂಡುಬರುತ್ತದೆ. ಅವರಿಗೆ ಯಾವುದೇ ಶಾಲೆಯ ಶಿಕ್ಷಣ ಮತ್ತು ಸಂಗೀತ ಜ್ಞಾನ ಇರದಿದ್ದರೂ ಕೂಡ ತಾವು ನೀಡುವ ಗಿಡ ಮೂಲಿಕೆಯ ವಿವಿರಗಳನ್ನು 'ಶ್ರುತಿ' ಬದ್ದವಾಗಿ ಲಯದ ಗತಿಯಲ್ಲಿ ಹೇಳುತ್ತಾರೆ.

ಇವರು ಭಿಕ್ಷಾಟನೆ ಸಂದರ್ಭದಲ್ಲಿ ಹಾಕುವ ವೇಷಭೂಷಣಗಳು ವಿಶೇಷವಾಗಿ ಕಂಡುಬರುತ್ತವೆ. ಮನೆಯಿಂದ ಹೊರಡಬೇಕಾದರೆ ಯಾವುದೇ ರೀತಿಯ ವೇಷಭೂಷಣಗಳು ಹಾಕಿಕೊಂಡಿರುವುದಿಲ್ಲ. ತಾವು ಭಿಕ್ಷಾಟನೆಗೆ ಹೋಗುವ ಊರಿನ ಸಮೀಪದ ಒಂದು ದೇವಸ್ಥಾನದಲ್ಲಿ ಅಥವಾ ಒಂದು ಗಿಡದ ಕೆಳಗೆ ಕುಳಿತುಕೊಂಡು ತಲೆಗೆ ರುಮಾಲು ಸುತ್ತಿಕೊಂಡು ಅದರೊಳಗೆ ಕೋಳಿಯಪುಕ್ಕ ಸೇರಿಸಿಕೊಂಡಿರುತ್ತಾರೆ. ಹಣೆಯಲ್ಲಿ ವಿಭೂತಿಯ ಮೂರುನಾಮ ಅದರ ನಡುವೆ ಕುಂಕುಮದ ಉದ್ದನೆಯ ನಾಮ, ಕೊರಳೊಳು ರುದ್ರಾಕ್ಷಿ ಮಾಲೆಗಳು, ತಾಯತ, ಕೆಳಗೆ ಪಂಚೆ (ಬಣ್ಣ ಬಣ್ಣದ) ಕೈಯಲ್ಲಿ ಏಕತಾರಿ, ಖಡ್ಗ ಮತ್ತು ತಮ್ಮ ವೇಷಕ್ಕೆ ತಕ್ಕಂತೆ ಗಡ್ಡಬಿಟ್ಟುಕೊಂಡು ಮೀಸೆಯನ್ನು ಸರಿಯಾಗಿ ಹುರಿಮಾಡಿಕೊಂಡು ಭಿಕ್ಷಾಟನೆಗೆ ತೆರಳುತ್ತಾರೆ.

ಪರಂಪರೆಯಿಂದಲೂ ಹೊಟ್ಟೆಪಾಡಿಗೋಸ್ಕರ ಕುರು ಕುರು ವೇಷಗಳನ್ನು ಹಾಕಿಕೊಂಡು ಜೀವನ ನಡೆಸುತ್ತ ಈ ಬುಡ್ಗಜಂಗಮ ಸಮುದಾಯದ ಕುರು ಕುರು ಮಾಮ ವೇಷದ ಕಲಾವಿದರು ಈ ಆಧುನಿಕ ಕಾಲದ ಜಾಗತೀಕರಣದ ದಟ್ಟ ಪ್ರಭಾವಕ್ಕೆ ಸಿಕ್ಕಿ ಈ ಕುರು ಕುರು ಮಾಮ ಕಲೆ ಮರೆಯಾಗಿ ಹೋಗುತ್ತಿದೆ. ಮರೆಯಾಗಿ ಹೋಗುತ್ತಿರುವ ಈ ಮೂಲ ಪರಂಪರೆಯ ಕಲೆಯನ್ನು ಸರ್ಕಾರ ಸಂಘ ಸಂಸ್ಥೆಗಳ ಸಹಾಯ ಸಹಕಾರ ನೀಡಿ ಉಳಿಸಿ ಬೆಳಸಬೇಕಾದ ಅನಿವಾರ್ಯತೆ ಕಂಡುಬರುತ್ತದೆ.

ಕುರು ಕುರು ಮಾಮ ಕಲಾವಿದರ ಮೂಲತಃ 'ತೆಲುಗು' ಭಾಷೆಯಾಗಿರುವುದರಿಂದ ತೆಲುಗು ಭಾಷೆಯಲ್ಲಿಯೇ ವ್ಯವಹರಿಸುತ್ತಾರೆ. ಬೇರೆಯವರ ಜೊತೆ ಮಾತನಾಡಬೇಕಾದರೆ ಅರ್ಧ ಕನ್ನಡ ಅರ್ಧ ತೆಲುಗು ಭಾಷೆಯಲ್ಲಿ ಮಾತನಾಡುತ್ತಾರೆ. ಇವರು ಹಾಡುವ ಹಾಡಿನ ಸಾಹಿತ್ಯದಲ್ಲಿಯೂ ಕೂಡ ಅರ್ಧ ತೆಲುಗು ಅರ್ಧ ಕನ್ನಡ ಭಾಷೆ ಬಳಸುತ್ತಾರೆ.

**ಬಹುರೂಪಿ ಚೌಡಯ್ಯ**

'ಕಾಯಕವೇ ಕೈಲಾಸ' ಎಂದು ಸಂದೇಶವನ್ನು ಸಾರಿದ ಜಾತಿ ಧರ್ಮವನ್ನು ಮೀರುವ ದಾರಿಯನ್ನು ತೋರಿ, ಎಲ್ಲ ಜಾತಿ, ಜನವರ್ಗಗಳನ್ನು ಒಂದು ಗೂಡಿಸಿಕೊಂಡು ಇವನಾರವ 'ಇವನಾರವ ಇವ ನಮ್ಮವ ಇವ ನಮ್ಮವ' ಎಂದು 12ನೇ ಶತಮಾನದ ಮಹಾ ಮಾನವತಾವಾದಿ ಜಗಜ್ಯೋತಿ ವಿದ್ಯಾಗುರು ಬಸವಣ್ಣನವರ ಅನುಭವ ಮಂಟಪದಲ್ಲಿದ್ದ ಹಲವಾರು ಶರಣ-ಶರಣಿಯರಲ್ಲಿದ್ದ ಬಹುರೂಪಿ ಚೌಡಯ್ಯನವರು ಮೂಲತಃ ಬುಡಕಟ್ಟು ಜನಾಂಗಕ್ಕೆ ಸೇರಿದವನು. ಬುರ್ರಕಥೆಯವರು,

ಬಾಲಸಂತರು, ಹಗಲು ವೇಷಗಾರರು ಎಂಬ ಅನೇಕ ಹೆಸರುಗಳಿಂದ ಕರೆಯಲ್ಪಡುವ ಬುಡ್ಗಜಂಗಮ ಸಮುದಾಯಕ್ಕೆ ಸೇರಿದ ವಚನಕಾರ ಇವರೆಂದು ತಿಳಿದುಬರುತ್ತದೆ.

ಬಹುರೂಪಿ ಚೌಡಯ್ಯ ಕಲಾಪರಂಪರೆಯ ಮನೆತನದಲ್ಲಿಯೇ ಹುಟ್ಟಿದ್ದರಿಂದ ಸಂಗೀತ ಮತ್ತು ನಾಟ್ಯದಲ್ಲಿ ರಕ್ತಗತವಾಗಿ ಜೊತೆಯಲ್ಲಿಯೇ ಬಂದಿದೆ. ಬಸವಣ್ಣ ಹಾಗೂ ಅಲ್ಲಮ ಪ್ರಭುಗಳ ಆಕರ್ಷಣೆಗೆ ಒಳಗಾಗಿ ಬಹುರೂಪಿ ಚೌಡಯ್ಯ ಅನುಭವ ಮಂಟಪವನ್ನು ಪ್ರವೇಶಮಾಡುತ್ತಾನೆ.

ಬಹುರೂಪಿ ಚೌಡಯ್ಯನು ಬರೆದಿರುವ ಒಂದು ವಚನ ಗಮನಿಸೋಣ

ಅನುದಿನಗಳೆಂಬವು ಪ್ರಣತಿಯಾಗಿ
ವರುಷವೆಂಬವು ಬತ್ತಿಯಾಗಿ
ಜೀವ ಜ್ಯೋತಿಯಾಗಿ
ಬೆಳಗಿನ ಬೆಳಗು, ಬಳಗ ಬೆಳಗಿನಲರಿಯಬೇಕು
ಬೆಳಗುಳಲ್ಲಿ ಆತ ನಡೆಸಿದಂತೆ ನಡೆಯಬೇಕು
ಬೆಳಗುಳಲ್ಲಿ ಆತ ನುಡಿಸಿದಂತೆ ನುಡಿಯಬೇಕು
ಎಣ್ಣಿಯಂಬೀ ಜೀವನ ಸವೆಯದ ಮುನ್ನ
ಬೆಳಗು ಕತ್ತಲೆಯಾಗದ ಮುನ್ನ

ರೇವಣ್ಣಪ್ರಿಯ ವಾಗಿನಾಥನ ಬೆಳಗ ಬೆಳಗಿನಲರಿಯ ಬೇಕು ಹೈದರಾಬಾದ್–ಕರ್ನಾಟಕ ಆರು ಜಿಲ್ಲೆಗಳಲ್ಲಿ ಬುಡ್ಗಜಂಗಮ ಸಮುದಾಯದ ಹಗಲು ವೇಷಗಾರನನ್ನು 'ಬಹುರೂಪಿ'ಗಳು ಎಂದು ಕರೆಯುತ್ತಾರೆ. ಈ ಬಹುರೂಪಿಗಳು ಮೂಲತಃ ಅಲೆಮಾರಿಗಳಾಗಿರುವುದರಿಂದ ಹಾಡಿ ಕುಣಿದು ಭಿಕ್ಷೆಬೇಡಿ ಬದುಕುವುದು ಇವರ ಕಾಯಕ ಬಹುರೂಪಿ ಚೌಡಯ್ಯನ ಈ ಕಲೆಯನ್ನು ವೀರಶೈವವು ಲಿಂಗಾಯತ ಧರ್ಮದ ಸಾಂಸ್ಕೃತಿಕ ನೆಲೆಗಳನ್ನು ನಾಡಿನಾದ್ಯಂತ ಭಿತ್ತರಿಸಿಕೊಂಡು ಬರಲು ಬಳಕೆ ಮಾಡಿಕೊಂಡಿರುವ ಸಾದ್ಯತೆ ಇದೆ.

ಕಾರಣ ಇದುವರೆಗಿನ ಸಂಶೋಧಕರು ತಿಳಿಸಿರುವಂತೆ ಕಲ್ಯಾಣ ಕರ್ನಾಟಕದಲ್ಲಿ ಉಸಿರು ಪಡೆದಿರುವ ಲಿಂಗಾಯತ ಧರ್ಮವನ್ನು ನಾಡಿನಾದ್ಯಂತ ಪ್ರಚಾರ ಮಾಡುವಲ್ಲಿ ಬುಡ್ಗಜಂಗಮ ಸಮುದಾಯದ ಜನಪದ ಕಲಾವಿದರ ಕಾಣಿಕೆ ಬಹುದೊಡ್ಡದಿದೆ. ಇಂತಹ ಕಲಾವಿದರಿಂದಾಗಿಯೇ ಎಲ್ಲ ವರ್ಗಗಳನ್ನು ವೀರಶೈವವು ಮುಟ್ಟಲು ಸಾದ್ಯವಾಯಿತು.

ಬಹುರೂಪಿ ಚೌಡಯ್ಯನು ಇಂತಹ ಶರಣ ಪರಂಪರೆಗೆ ಒಲಿದು ಚರಮೂರ್ತಿ ರೇವಣನಾಥಾ ಚಾರ್ಯ ಎಂಬ ಗುರುವಿನ ಶರಣ ದೀಕ್ಷೆ ಸ್ವೀಕರಿಸಿ "ರೇವಣ್ಣಪ್ರಿಯವಾಗಿನಾಥ" ಎಂಬ ಅಂಕಿತ ನಾಮದಲ್ಲಿ ವಚನಗಳ ರಚನೆಗೆ ತೊಡಗಿದನೆಂದು ತಿಳಿದುಬರುತ್ತದೆ.,

ಉದಾ: ವಚನ

ಅನುದಿನಂಗಳೆಂಬವು ಪ್ರಣತಿಯಾಗಿ

ವರುಷವೆಂಬವು ಬತ್ತಿಯಾಗಿ
ಬೆಳಗಿನ ಬೆಳಗು, ಬೆಳಗ ಬೆಳಗಿನಲರಿಯ ವೇರು
ಬೆಳಗುಳಲ್ಲಿ ಆತ ನಡೆಸಿದಂತೆ ನಡೆಯಬೇಕು
ಬೆಳಗುಳಲ್ಲಿ ಆತ ನುಡಿಸಿಂತೆ ನುಡಿಯಬೇಕು
ಎಣ್ಣೆಯಬಿ ಜೀವನ ಸವೆಯದ ಮುನ್ನ
ಬೆಳಗು ಕತ್ತಲೆಯಾಗದ ಮುನ್ನ
ರೇವಣ್ಣಪ್ರಿಯ ವಾಗಿನಾಥನ ಬೆಳಗ ಬೆಳಗಿನರಿಯ ಬೇಕು

ಈ ರೀತಿಯಾಗಿ ತಾನು ಬರೆದ ವಚನಗಳನ್ನು ತನ್ನದೆ ಆದ ಬಹುರೂಪಿ ಮೇಳದೊಂದಿಗೆ ಚೌಡಯ್ಯನ ಜನಸಾಮಾನ್ಯರಿಗೆ ತಲುಪಿಸುತ್ತಿದ್ದನು ಎಂದು ತಿಳಿದುಬರುತ್ತದೆ.

**೫.೪. ಚನ್ನದಾಸರ ಸಂಗೀತ**

ಹಲವಾರು ಹೆಸರುಗಳಿಂದ ಕರೆಸಿಕೊಳ್ಳುವ ಚನ್ನದಾಸರ ಕಲಾವಿದರು ಮೂಲತಃ ವೃತ್ತಿ ಸಂಗೀತ ಕಲಾವಿದರಾಗಿದ್ದು. ಹುಟ್ಟುತ್ತಲೆ ಕಲೆಯನ್ನು ಮೈಗೂಡಿಸಿಕೊಂಡು ಬಂದಂತಹ ಕಲಾವಿದರಾಗಿದ್ದಾರೆ. ಇವರಲ್ಲಿ ಎರಡು ಪ್ರಕಾರಗಳ ಕಲೆಗಳು ಮುಖ್ಯವಾಗಿ ಕಂಡುಬರುತ್ತವೆ.

ಮೊದಲನೆಯದಾಗಿ ತತ್ವಪದ ಸಂಗೀತ
ಎರಡನೆಯದಾಗಿ ಬಯಲಾಟ ಕಲೆ

'ತತ್' ಎನ್ನುವ ಪದದ ಅರ್ಥ ಸಿದ್ಧಾಂತ, ಪರಮಾತ್ಮ ಎಂದಾಗುತ್ತದೆ. ತತ್ವವನ್ನು ಹೇಳುವವನಿಗೆ 'ತತ್ವಜ್ಞಾನಿ ಪಂಡಿತ' ಎಂದು ಕರೆಯುತ್ತಾರೆ. 'ಪದ' ಎಂಬುದರ ಅರ್ಥ ಹಾಡು ಹದಗೊಂಡ 'ಶಬ್ದ' ಎಂದು ಕರೆಯುತ್ತಾರೆ. ಆತ್ಮ-ಪರಮಾತ್ಮ ಅಂದರೆ ಶಿವನಿಗೆ ಸಂಬಂಧಪಟ್ಟಂತ ಸಿದ್ಧಾಂತವನ್ನು ಹಾಡಿನ ಮೂಲಕ ಪ್ರಸ್ತುತಪಡಿಸುವ ಕಾರ್ಯಕ್ಕೆ 'ತತ್ವಪದ' ಎಂದು ಕರೆಯುತ್ತಾರೆ. ತತ್ವಪದದಲ್ಲಿ 'ತತ್ವ' ಎನ್ನುವುದು ವಸ್ತುವಾದರೆ 'ಪದ' ಅಭಿವ್ಯಕ್ತಿ ಮಾಧ್ಯಮ ವಸ್ತು ಹಾಗೂ ಅಭಿವ್ಯಕ್ತಿ ಎರಡನ್ನು ಸಮನ್ವಯಗೊಳಿಸಿಕೊಂಡಿರುವ ತತ್ವಪದ ಕನ್ನಡ ಸಾಹಿತ್ಯದಲ್ಲಿ ಒಂದು ವಿಶಿಷ್ಟ ಸಾಹಿತ್ಯ ಪ್ರಕಾರವಾಗಿದಲ್ಲದೇ ಹಲವಾರು ಗಾಯನ ಪ್ರಕಾರಗಳಲ್ಲಿ ತತ್ವಪದ ಒಂದು ಗಾಯನ ಪ್ರಕಾರವಾಗಿದೆ. ಸಮಾಜದ ಜನರಿಗೆ ಒಂದು ಒಳ ಸಂದೇಶ ತಿಳಿಸುವ ತತ್ವಪದಗಳನ್ನು ಅನುಭಾವ ಪದಗಳು, ಭಜನೆ ಪದಗಳೆಂದು ಕರೆಯುತ್ತಾರೆ. ಈ ಭಜನೆಗಳಲ್ಲಿ ಎರಡು ಪ್ರಕಾರಗಳ ಭಜನೆಗಳು ಕಂಡುಬರುತ್ತವೆ. ಮೊದಲನೆಯದ್ದು ವ್ಯಕ್ತಿಗಳ ಭಜನೆ, ಎರಡನೆಯದು ಸಾಮಾಜಿಕ ಭಜನೆ.

**ಹಾಡುಗಾರಿಕೆ :** ಚನ್ನದಾಸರ ಕಲಾವಿದರು ಹಾಡುವಂತಹ ಹಾಡುಗಾರಿಕೆಯಲ್ಲಿ ಕಠಿಣವಾದಂತಹ ಸಂಗತಿಗಳೇನು ಕಂಡುಬರುವುದಿಲ್ಲ ಮತ್ತು ಶಾಸ್ತ್ರೀಯ ಸಂಗೀತದ ನಿಯಮಗಳು, ಚೌಕಟ್ಟುಗಳು ಇದೇ ರಾಗದಲ್ಲಿ ಹಾಡಬೇಕು ಇದೇ ತಾಳದಲ್ಲಿ ಹಾಡಬೇಕು. ಶುದ್ಧರಾಗದಲ್ಲೇ ಹಾಡಬೇಕೆನ್ನುವ ನಿಯಮಗಳು

ಕಂಡುಬರುವುದಿಲ್ಲ. ಇವರು ಹಾಡುವ ಸಾಹಿತ್ಯವನ್ನು ರಾಗದ ಜೊತೆಗೆ ಹೆಚ್ಚಾಗಿ ಪಲುಕಿಸಿ ಹಾಡುವ ನಿಯಮಗಳು ಕಂಡುಬರುವುದಿಲ್ಲ. ಇಲ್ಲಿ ಗಾಯಕ ಹಾಡಿನಲ್ಲಿರುವ ಸಾಹಿತ್ಯವನ್ನು ಒತ್ತಿ ಒತ್ತಿ ಹಾಡುವುದು ಕಂಡುಬರುತ್ತದೆ. ಇವರು ಯಾವುದೇ ರೀತಿಯ ಶಿಷ್ಟ ಸಂಗೀತ ಕಲಿತಿರುವುದಿಲ್ಲ. ಆದರೂ ಸಹ ಕೇಳಿ ಕೇಳಿ ಕಲಿತ ಸಂಗೀತ ಸುಮಧುರವಾಗಿ ಹಾಡುತ್ತಾರೆ. ಇವರ ಬಾಯಿಯಲ್ಲಿ ತತ್ವಪದಗಳನ್ನು ಕೇಳುವುದೇ ಒಂದು ಭಾಗ್ಯ. ಅಷ್ಟೊಂದು ಸುಮಧುರವಾಗಿ ಸುಶ್ರಾವ್ಯವಾಗಿ ಹಾಡುವಂತ ಕಲಾವಿದರು ಈ ಚನ್ನದಾಸರು.

ಇವರ ಹಾಡುಗಾರಿಕೆಯಲ್ಲಿ ಸರಳತೆ ಕಂಡುಬರುತ್ತದೆ. ಬೇರೆ ಬೇರೆ ಅಲೆಮಾರಿ ಕಲಾವಿದರು ಆಯಾ ಸ್ಥಳಕ್ಕೆ ತಕ್ಕಂತೆ ಸಂದರ್ಭಕ್ಕೆ ತಕ್ಕಂತೆ ಸಾಹಿತ್ಯ ಬದಲಾವಣೆ ಮಾಡುತ್ತಾ ಹಾಡುತ್ತಾರೆ. ಆದರೆ ಚನ್ನದಾಸ ಸಮುದಾಯವು ಕೂಡ ಒಂದು ಅಲೆಮಾರಿ ಸಮುದಾಯವಾಗಿದೆ. ಇವರು ಕೂಡ ಹಾಡಿಕೊಂಡು ಹೊಟ್ಟೆಪಾಡಿಗೋಸ್ಕರ ಊರೂರು ತಿರುಗುತ್ತಾರೆ.

ಆದರೆ ಇವರು ತತ್ವಪದಗಳು ಮತ್ತು ದಾಸರ ಪದಗಳನ್ನು ಬಿಟ್ಟರೆ ಬೇರೆ ಯಾವುದೇ ಗೀತೆಗಳನ್ನು ಹೆಚ್ಚಾಗಿ ಹಾಡುವುದು ಕಂಡುಬರುವುದಿಲ್ಲ. ಶಿಶುನಾಳ ಶರೀಫರ ತತ್ವಪದಗಳು, ಕಡಕೋಳ ಮಡಿವಾಳೇಶ್ವರ ತತ್ವಪದಗಳು ಮತ್ತು ನಿಜಗುಣ ಶಿವಯೋಗಿಗಳಂತಹ ತತ್ವಪದಗಳನ್ನು ತಮ್ಮದೇ ಆದ ದಾಟಿಯಲ್ಲಿ ಹಾಡುವುದು ಕಂಡುಬರುತ್ತದೆ. ಈ ಸಾಹಿತ್ಯಕ್ಕೆ ಇಂತದ್ದೆ ರಾಗ ಹಾಕಬೇಕು ಇಂತದ್ದೇ ತಾಳ ನುಡಿಸಬೇಕು ಎನ್ನುವ ನಿಯಮ ಇಟ್ಟುಕೊಂಡು ಹಾಡುವುದಿಲ್ಲ. ಆ ಸಾಹಿತ್ಯದ ಅರ್ಥ ಅಥವಾ ಸಂದೇಶಗಳಿಗನುಗುಣವಾಗಿ ತಮ್ಮ ಭಾವನೆಗಳಿಗೆ ತಕ್ಕಂತೆ ಹಾಡುವುದು ಕಂಡುಬರುತ್ತದೆ. ಇವರ ಹಾಡುಗಾರಿಕೆಯಲ್ಲಿ ಸಾಹಿತ್ಯಕ್ಕೆ ಹೆಚ್ಚು ಒತ್ತು ಕೊಡುವುದರಿಂದ ಆಲಾಪನೆಗಳು, ರಾಗ ವಿಸ್ತಾರ ಮಾಡುವುದು ಕಂಡುಬರುವುದಿಲ್ಲ. ಜೀವನದ ಜಂಜಟಾದಲ್ಲಿ ಬದುಕುತ್ತಿರುವ ಜನರಿಗೆ ಜೀವನದಲ್ಲಿ ಅಳವಡಿಸಿಕೊಳ್ಳಬೇಕಾದಂತಹ ನೀತಿ ಸಂದೇಶ ತಿಳಿಸುವ ಹಲವಾರು ತತ್ವಪದಗಳನ್ನು ಹಾಡುವುದರ ಮುಖಾಂತರ ಜನರನ್ನು ತಮ್ಮ ಕಡೆ ಸೆಳೆದುಕೊಳ್ಳುತ್ತಾರೆ. ಯಾವುದೇ ರೀತಿಯ ಹಾಡಾಗಿದ್ದರು ಆ ಹಾಡುಗಾರಿಕೆಯಲ್ಲಿ ಸೂಕ್ಷ್ಮ ಸಂಗತಿಗಳು ಹೆಚ್ಚಾಗಿ ಕಂಡುಬರದೆ ಸ್ವಲ್ಪ ಒರಟುತನದಿಂದ ಹಾಡುವುದು ಕಂಡುಬರುತ್ತದೆ. ಇವರು ಹೆಚ್ಚಾಗಿ ಭಿಕ್ಷೆ ಬೇಡುತ್ತ ಬೀದಿ ಬಿದಿಯಲ್ಲಿ ಹಾಡೋದಿಂದ್ರ ಅಲ್ಲಿ ಸೂಕ್ಷ್ಮತೆಯಿಂದ ಹಾಡಿದರೆ ದೂರದ ವ್ಯಕ್ತಿಗಳಿಗೆ ಕೇಳುಸುವುದಿಲ್ಲ ಎಂಬ ನಂಬಿಕೆಯಿಂದ ಜೋರಾಗಿ ಹಾಡಿ ಹಾಡಿ ತಮ್ಮ ಧ್ವನಿ ಗುಣಧರ್ಮವನ್ನು ಆ ರೀತಿಯಲ್ಲಿ ಮಾಡಿಕೊಂಡಿದ್ದಾರೆ. ಎಷ್ಟೇ ಜೋರಾಗಿ ಒರಟುತನದಿಂದ ಹಾಡಿದರೂ ಕೂಡ ಹಾಡುಗಾರಿಕೆಯಲ್ಲಿ ಯಾವುದೇ ಅಪಸ್ವರ ಕೇಳಿ ಬರುವುದಿಲ್ಲ. ಏಕತಾರಿಯ ನಾದದ ಶ್ರುತಿಯಲ್ಲೆ ಹಾಡುವುದು ಕಂಡುಬರುತ್ತದೆ. ಇದೇ ರೀತಿಯಾಗಿ ಚನ್ನದಾಸರ ಹಾಡುಗಾರಿಕೆಯಲ್ಲೂ ಪರಿಶುದ್ಧ ರಾಗ ಅಲ್ಲದಿದ್ದರು ಮಿಶ್ರರಾಗ ಅಥವಾ ಪರಿಶುದ್ಧ ರಾಗಕ್ಕೆ ಹತ್ತಿರವಿರುವಂತಹ ರಾಗಗಳು ಕಂಡುಬರುತ್ತವೆ. ಇವರ ಹಾಡುಗಾರಿಕೆಯಲ್ಲಿ ಫಿರತ್, ಗಮಕ್, ಸಣ್ಣ ಸಣ್ಣ ಫಿರತ್‌ಗಳು ಕಂಡುಬರುವುದಿಲ್ಲ. ಸರಳ ರೀತಿಯಲ್ಲಿ ಹಾಡುವುದು ಕಂಡುಬರುತ್ತದೆ. ಅಷ್ಟೊಂದು ಸುಮಧುರವಾಗಿ ಕಂಠದಿಂದ ಸಾಮಾನ್ಯ

ಜನರ ಮನಗಳಿಗೆ ತಟ್ಟುವಂತೆ ಹಾಡುತ್ತಾರೆ. ಮಾರೆಪ್ಪ ದಾಸರ ಇವರು ಚನ್ನದಾಸರ ಸಮುದಾಯಗಳಲ್ಲಿ ಕಂಡುಬರುವ ಹಲವಾರು ಕಲಾವಿದರಲ್ಲಿ ಒಬ್ಬರು.

ಇವರ ಮೇಳದಲ್ಲಿ ಒಬ್ಬ ಕಲಾವಿದನೆ ತಂಬೂರಿಯನ್ನು ನುಡಿಸಿಕೊಳ್ಳುತ್ತಾ ಹಾಡುತ್ತಾನೆ. ಆದರೆ ಇವರದು ಮೂಲ ಭಿಕ್ಷಾವೃತ್ತಿಯಾಗಿರುವುದರಿಂದ ಮೇಳಗೂಡಿ ಭಿಕ್ಷೆಗೆ ಹೋಗುವ ಸಂದರ್ಭದಲ್ಲಿ ಒಬ್ಬ ಮುಖ್ಯಗಾಯಕ ಏಕತಾರಿ ಮತ್ತೊಬ್ಬರು ಶಂಖ, ಇನ್ನೊಬ್ಬ ಗಾಯಕ ಜಾಗಟೆ ನುಡಿಸುತ್ತಿರುತ್ತಾನೆ. ಇಲ್ಲಿ ಮುಖ್ಯಗಾಯಕ ಏಕತಾರಿ ಹಿಡ್ಕೊಂಡು ಹಾಡುತ್ತಿದ್ದರೆ. ಹಿಮ್ಮೇಳ ಗಾಯಕರು ಸಂದರ್ಭಕ್ಕೆ ತಕ್ಕಂತೆ ಜಾಗಟೆ ಮತ್ತು ಶಂಖ ನುಡಿಸುವುದರ ಜೊತೆಗೆ ಹಾಡಿನ ಪಲ್ಲವಿಯ ಕೊನೆಯ ಸಾಲಿನಲ್ಲಿ ಗೋವಿಂದ ಗೋವಿಂದ ಎಂದು ಸಾತ್ ನೀಡುತ್ತಾರೆ.

ಈ ತತ್ವಪದಕಾರರ ಮೇಳದಲ್ಲಿ ಬಹುಮುಖ್ಯವಾಗಿ ಬಳಸುವ ವಾದ್ಯವೆಂದರೆ ಅದು ಏಕತಾರಿ ವಾದ್ಯ. ವಿಶೇಷವಾಗಿ ಒಬ್ಬ ಕಲಾವಿದ ಭಿಕ್ಷೆಗೆ ಹೊರಡುವಾಗ ಈ ಏಕತಾರಿಯನ್ನು ಮಾತ್ರ ಒಯ್ಯುತ್ತಾರೆ ಕೆಲವೊಂದು ಸಲ ಮೂರು ಜನ ಕಲಾವಿದರು ಭಿಕ್ಷೆಗೆ ಹೊರಟ ಸಂದರ್ಭದಲ್ಲಿ ಮುಖ್ಯ ಗಾಯಕ ಏಕತಾರಿ ವಾದ್ಯ, ಇನ್ನೊಬ್ಬರ ಕೈಯಲ್ಲಿ ಶಂಖ ಮತ್ತು ಜಾಗಟೆ ಹಿಡ್ಕೊಂಡು ಹೋಗುತ್ತಾರೆ. ಇಲ್ಲಿ ಮುಖ್ಯಗಾಯಕ ಏಕತಾರಿ ಹಿಡ್ಕೊಂಡು ಹಾಡುತ್ತಿದ್ದರೆ. ಹಿಂದೆ ಹೋದವರು ಹಾಡಿಗೆ ತಕ್ಕಂತೆ ಜಾಗಟೆ ಮತ್ತು ಶಂಖ ನುಡಿಸುವುದರ ಜೊತೆಗೆ ಹಾಡಿನ ಪಲ್ಲವಿಯ ಕೊನೆಯ ಸಾಲಿನಲ್ಲಿ ಗೋವಿಂದ ಗೋವಿಂದ ಎಂದು ಗೋವಿಂದ ನಾಮಸ್ಮರಣೆ ಮಾಡುತ್ತಾರೆ.

ಗೋಂಧಳಿ, ಬುಡ್ಗಜಂಗಮ ಮತ್ತು ಹಂಡಿಜೋಗಿ ಮೇಳದಲ್ಲಿ ಮುಮ್ಮೇಳ ಗಾಯಕ ಹಾಡಿರುವ ಹಾಡುಗಳ ಸಾಲನ್ನು ಹಿಮ್ಮೇಳ ಗಾಯಕರು ಹಾಡುವುದು ಕಂಡುಬರುತ್ತದೆ. ಆದರೆ ಚನ್ನದಾಸರ ತತ್ವಪದಕಾರರ ಮೇಳದಲ್ಲಿ ಹಿಮ್ಮೇಳ ಮುಮ್ಮೇಳ ಹೆಚ್ಚಾಗಿ ಕಂಡುಬರುವುದಿಲ್ಲ. ಎಲ್ಲ ಕಲಾವಿದರು ಒಟ್ಟಿಗೆ ಹಾಡುತ್ತಾರೆ. ಈ ರೀತಿಯಾಗಿ ಭಿಕ್ಷೆಗೆ ಒಬ್ಬರೊ, ಇಬ್ಬರು ಅಥವಾ ಮೂರು ಜನ ಕಲಾವಿದರು ಹೊರಡುವುದು ಕಂಡುಬರುತ್ತದೆ. ಆದರೆ ಸಂಘ ಸಂಸ್ಥೆಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯವರು ಮತ್ತು ಬೇರೆ ಬೇರೆ ಇಲಾಖೆಯವರು ಆಯೋಜನೆ ಮಾಡಿರುವ ವೇದಿಕೆ ಕಾರ್ಯಕ್ರಮಗಳಲ್ಲಿ ಸುಮಾರು ನಾಲ್ಕೈದು ಜನ ಕಲಾವಿದರು ಕಂಡುಬರುತ್ತಾರೆ. ಮೊದಲಿಂದಲೂ ಏಕತಾರಿಯಲ್ಲಿ ಹಾಡುತ್ತಿದ್ದ ಚನ್ನದಾಸ ಕಲಾವಿದರು ಇತ್ತೀಚಿನ ದಿನಗಳಲ್ಲಿ ಪಿಟೀಲು ವಾದ್ಯವನ್ನು ಬಳಸುತ್ತಿದ್ದಾರೆ. ಐದು ಜನ ಕಲಾವಿದರು ಇರುವ ವೇದಿಕೆ ಕಾರ್ಯಕ್ರಮಗಳಲ್ಲಿ ಮೂವರ ಕೈಯಲ್ಲಿ ಏಕತಾರಿ ಒಬ್ಬರ ಕೈಯಲ್ಲಿ ಪಿಟಿಲು ಮತ್ತೊಬ್ಬ ಕೈಯಲ್ಲಿ ಚಿಟಿಗೆ ತಾಳ ಇಲ್ಲಿ ಎಲ್ಲಾ ಕಲಾವಿದರು ಒಟ್ಟಿಗೆ ಹಾಡೊದ್ರಿಂದ ಮುಖ್ಯಗಾಯಕ ಎಂದು ಗುರುತಿಸುವುದು ಕಷ್ಟ. ಇಲ್ಲಿ ಎಲ್ಲರೂ ಮುಖ್ಯಗಾಯಕರಾಗಿ ಕಂಡುಬರುತ್ತಾರೆ. ತಾಳ–ಲಯಗೋಸ್ಕರ ಬೇರೆ ಬೇರೆ ಸಂಗೀತ ಮೇಳಗಳಲ್ಲಿ ಸಂಭಾಳ, ದಮ್ಮಡಿ, ದಿಮ್ಮಿ, ಬಳಸಿದರೆ ಈ ತತ್ವಪದ ಮೇಳದಲ್ಲಿ ಏಕತಾರಿ ವಾದ್ಯವೇ ಶ್ರುತಿ–ತಾಳ–ಲಯಕ್ಕಾಗಿ ಬಳಸುತ್ತಾರೆ. ಎರಡು ಅಥವಾ ಮೂರು ಏಕತಾರಿ ವಾದ್ಯಗಳನ್ನು ನುಡಿಸುವ ಈ ಮೇಳದಲ್ಲಿ ಶ್ರುತಿಗೋಸ್ಕರ ಒಬ್ಬ ಕಲಾವಿದ ಏಕತಾರಿಯನ್ನು ಬೆರಳಿನಿಂದ ನುಡಿಸಿ ನಾದ ಹೊರಡುವಂತೆ ಮಾಡುತ್ತಾನೆ. ತಾಳ–ಲಯಕ್ಕಾಗಿ ಇದೇ

ಏಕತಾರಿ ವಾದ್ಯವನ್ನು ಮತ್ತೊಬ್ಬ ಕಲಾವಿದ ಕಟ್ಟಿಗೆಯಿಂದ ತಯಾರಿಸಲಾದ ಒಂದು ಕೋಲನ್ನು ತೆಗೆದುಕೊಂಡು ಹಾಡಿಗೆ ತಕ್ಕಂತೆ ಆ ಕೋಲಿನಿಂದ ಆ ಏಕತಾರಿಯ ತಂತಿಯನ್ನು ಬಡಿಯುತ್ತಾನೆ. ಈ ರೀತಿಯಾಗಿ ಕೋಲಿನಿಂದ ತಂತಿಯನ್ನು ಬಡಿಯುವುದರಿಂದ ಶ್ರುತಿ ಜೊತೆಗೆ ಉಳಿದ ಲಯಕಾರರಿಗೆ ಕೂಡ ಸ್ಪಷ್ಟವಾಗಿ ಕೇಳುತ್ತದೆ. ತಂತಿ ವಾದ್ಯವನ್ನು ಶ್ರುತಿಗಾಗಿ ಅಥವಾ ಪಕ್ಕವಾದ್ಯವಾಗಿ ನುಡಿಸುವುದು ಕಂಡುಬರುತ್ತದೆ. ಆದರೆ ತಾಳ-ಲಯಕ್ಕಾಗಿ ಕೋಲಿನಿಂದ ತಂತಿಯನ್ನು ಬಡಿಯೋದು ಚನ್ನದಾಸರ ತತ್ವಪದ ಮೇಳದಲ್ಲಿ ಬಿಟ್ಟರೆ ಬೇರೆ ಯಾವ ಮೇಳದಲ್ಲಿ ಸಹ ಕಂಡುಬರುವುದಿಲ್ಲವೆಂದು ಹೇಳಬಹುದು.

ಯಾವುದೇ ರೀತಿಯ ಶಾಸ್ತ್ರೀಯ ಸಂಗೀತ ಕಲಿಯದಿದ್ದರು ಎಲ್ಲರೂ ಸೇರಿ ಒಟ್ಟಿಗೆ ಹಾಡುವುದು ಈ ಕಲಾವಿದರು ಯಾವುದೇ ಶಾಸ್ತ್ರಬದ್ಧವಾಗಿ ಸಂಗೀತ ಕಲಿತವರಲ್ಲ. ಸಂಗೀತ ಕಲಿಯದಿದ್ದರೂ ಸಹ ಏಕತಾರಿಯ ನಾದಕ್ಕೆ ತಕ್ಕಂತೆ ಶ್ರುತಿ ತಪ್ಪದೇನೆ ಸುಂದರವಾಗಿ ಹಾಡುತ್ತಾರೆ. ಇವರು ಹೆಚ್ಚಾಗಿ ಕೆಹರವಾ, ದಾದ್ರ ಮತ್ತು ಭಜನ ತಾಳಗಳಲ್ಲಿ ಹಾಡುತ್ತಾರೆ. ಇವರ್‍ಯಾರು ಗುರುಮುಖೇನ ಕಲಿತ ಕಲಾವಿದರಲ್ಲ. ಹಿರಿಯ ಕಲಾವಿದರ ಜೊತೆ ಅಥವಾ ತಂದೆ ತಾಯಿ ಅಣ್ಣಂದಿರ ಜೊತೆ ಕಾರ್ಯಕ್ರಮಗಳಲ್ಲಿ ಹಾಡಿ ಹಾಡಿ ಕಲಿಯುತ್ತಾರೆ. ಕೇಳುತ್ತಾ ಕೇಳುತ್ತ ಸುಮಧುರವಾಗಿ ಹಾಡುತ್ತಾರೆ. ಇತ್ತಿಚೀನ ದಿನಗಳಲ್ಲಿ ಹಿರಿಯ ಕಲಾವಿದರು ತಮ್ಮ ಮಕ್ಕಳಿಗೆ ಶಾಸ್ತ್ರೀಯ ಸಂಗೀತ ಕಲಿಸುತ್ತಿದ್ದಾರೆ. ಇವರ ಮಕ್ಕಳು ಎಷ್ಟೇ ಶಾಸ್ತ್ರೀಯ ಸಂಗೀತ ಕಲಿತಿದ್ದರು ಮೇಳದಲ್ಲಿ ಹಾಡುವಾಗ ತಮ್ಮ ಮೂಲದಾಟಿಯಲ್ಲೇ ಹಾಡುತ್ತಾರೆ. ನಮ್ಮ ನಾಡಿಗೆ ತಮ್ಮ ಅನುಭವದ ತತ್ವಪದಗಳ ಮೂಲಕ ಒಂದು ಸಂದೇಶಗಳನ್ನು ನೀಡಿದ ಶಿಶುನಾಳ ಶರೀಫ, ಕಡಕೋಳ ಮಡಿವಾಳಪ್ಪ, ಇಂತವರನ್ನು ನಾವು ಮತ್ತೇ ಕಾಣಬೇಕೆಂದರೆ ಚನ್ನದಾಸರ ತತ್ವಪದಗಳಲ್ಲಿ ಮಾತ್ರ ಸಾಧ್ಯ. ಇವರು ಹೆಚ್ಚಾಗಿ ಭೀಮ್‌ಪಲಾಸಿ, ಜೀವನಪೂರಿ, ದರ್ಬಾರಿ ಕಾನಡ, ಮದಮಾದ್ ಸಾರಂಗ, ಭೂಪ, ದುರ್ಗ, ಭೈರವ, ಚಾರುಕೇಶಿ, ನಟಭೈರವ ಮತ್ತು ಅಹಿರ ಭೈರವ ರಾಗಗಳಲ್ಲಿ ತತ್ವಪದಗಳನ್ನು ಹಾಡುವುದು ಕಂಡುಬರುತ್ತದೆ. ಈ ತತ್ವಪದಗಳನ್ನು ಹಾಡುವಂತ ಕಲಾವಿದರಿಗೆ ಇದು ಭೈರವರಾಗ, ಬೂಪರಾಗ ಅಂತ ತಿಳಿದಿರುವುದಿಲ್ಲ.

ಇದೇ ಸಮುದಾಯದ ಕೆಲವು ಕಲಾವಿದರು ಶಂಖ, ಜಾಗಟೆ ಮತ್ತು ಚೆನ್ನು ಅಥವಾ ಬೋಕಿ ವಾದ್ಯವನ್ನು 'ಡಗ್‌ಡಗ್' ಎಂದು ನುಡಿಸುತ್ತಾ ವಿಷ್ಣು ಸ್ತೋತ್ರ ಮಾಡುತ್ತ ಭಿಕ್ಷೆ ಬೇಡುತ್ತಾರೆ. ಈ ಮೇಳದಲ್ಲಿ ಹಾಡುಗಾರಿಕೆ ಕಡಿಮೆ ಇರುವುದು ಕಂಡುಬರುತ್ತದೆ. ಶ್ರೀಮದ್ ಲಕ್ಷ್ಮೀ ವೆಂಕಟರಮಣ ಗೋವಿಂದಾ ಗೋವಿಂದ ಎಂದು ವಿಷ್ಣುವಿನ ನಾಮಸ್ತೋತ್ರ ಮಾಡುತ್ತಾರೆ. ವಿಷ್ಣು ಸ್ತೋತ್ರ ಮಾಡುತ್ತಾ ಭಿಕ್ಷೆ ಬೇಡುವವರಲ್ಲಿ ಶಂಖ, ಜಾಗಟೆ ಮಾಡುತ್ತಾರೆ. ಬೋಂಕಿ ವಾದ್ಯಗಳು ಕಂಡುಬರುತ್ತವೆ.

**ಶುಭಕಾರ್ಯಗಳಲ್ಲಿ** : ಊರುಗಳಲ್ಲಿ ಯಾವುದೇ ಸಮುದಾಯದ ಜನಾಂಗದವರ ಮನೆಯಲ್ಲಿ ಹುಡುಗಿ ನೋಡುವ ಕಾರ್ಯಕ್ರಮ ಅಥವಾ ಹುಡುಗನ ನೋಡುವ ಕಾರ್ಯಕ್ರಮಗಳಲ್ಲಿ ಕಡ್ಡಾಯವಾಗಿ ಈ ದಾಸ ಸಮುದಾಯದವರನ್ನು ಕರೆಸುತ್ತಾರೆ. ಗಂಡು ಮತ್ತು ಹೆಣ್ಣಿನವರಿಗೆ ಹೊಂದಾಣಿಕೆಯಾಯಿತು ಎಂದರೆ ಇವರು ಶಂಖ, ಜಾಗಟೆ ಊದಿ ಮೂರು ಬಾರಿ ಗೋವಿಂದ ಗೋವಿಂದ ಗೋವಿಂದ

ಇವರ ಹೆಣ್ಣು ಅವರಿಗೆ ಕೊಡಲಾಗಿದೆ ಎಂದು ಕೂಗುತ್ತಾರೆ. ಈ ರೀತಿಯಾಗಿ ಕೂಗಿದಾಗ ಮಾತ್ರ ಅವರ ಸಂಬಂಧಗಳ ಗಟ್ಟಿಯಾದವು ಎಂದು ಅರ್ಥವಾಗುತ್ತದೆ.

ಪ್ರತಿ ಶನಿವಾರ ಆಂಜನೇಯಸ್ವಾಮಿ ದೇವಸ್ಥಾನಕ್ಕೆ ಹೋಗಿ ಕೆಲವು ಕಲಾವಿದರು ಹಾಡಲು ಬಂದರೆ ಹಾಡುಗಳನ್ನು (ಹಾಡುತ್ತಾರೆ ಇತ್ತೀಚಿನ ದಿನಗಳಲ್ಲಿ ಹಾಡುವುದು ಕಡಿಮೆಯಾಗಿದೆ. ಕೇವಲ ಶಂಖ, ಜಾಗಟೆ ಊದಿ ದೇವರಿಗೆ ತಮ್ಮ ಭಕ್ತಿ ಸೇವೆಸಲ್ಲಿಸಿ ಬರುತ್ತಾರೆ.) ಹಾಡಿ ನಂತರ ಶಂಖ, ಜಾಗಟೆ ನುಡಿಸುತ್ತಿದ್ದರು ಕೆಲವು ಕಲಾವಿದರು ಹಾಡಲಿಕ್ಕೆ ಬರದೆ ಇದ್ದೋರು ಶಂಖ, ಜಾಗಟೆ ಊದಿ ದೇವರಿಗೆ ತಮ್ಮ ಸಂಗೀತ ಸೇವೆ ಸಲ್ಲಿಸಿ ಬರುತ್ತಾರೆ.

**ಚನ್ನದಾಸರ ವಾದ್ಯಗಳು**

**ತತ್ವಪದದಲ್ಲಿ ಬಳಸುವಂತಹ ವಾದ್ಯಗಳು**

೧. ಏಕತಾರಿ, ತಂಬೂರಿ, ದಮ್ಮಡಿ, ಜಾಗಟೆ, ಶಂಖ ಇತ್ತೀಚಿನ ದಿನಗಳಲ್ಲಿ ಪಿಟೀಲು ಕೂಡ ನುಡಿಸುತ್ತಾರೆ. ಏಕತಾರಿಯೂ ಸಹ ಕಿನ್ನರಿ, ಚೌಡಿಕೆ ಮತ್ತು ಬುರ್ರಕಥೆ ತಂಬೂರಿಯಂತೆ ಒಂದು ತಂತಿ ವಾದ್ಯ. ದೊಡ್ಡದಾಗಿರುವ ಒಂದು ಹಸಿ ಸೋರೆಕಾಯಿಯನ್ನು ತೆಗೆದುಕೊಂಡು ಅದನ್ನು ಒಣಗಿಸಿ ತುಂಬಿನ ಭಾಗವನ್ನು ಗೋಲಾಕಾರದಲ್ಲಿ ಕೆತ್ತಿ ಪೊಳ್ಳು ಮಾಡುತ್ತಾರೆ. ಈ ಪೊಳ್ಳಾದ ಭಾಗ ಹಿಂದಕ್ಕೆ ಬರುವ ರೀತಿ ಕೋಲಿಗಿಂತ ಸ್ವಲ್ಪದಪ್ಪಾಗಿರುವಂತ ಬಿದರಿನ ಬೊಂಬನ್ನು ತೆಗೆದುಕೊಂಡು ಸೋರೆಕಾಯಿಯಲ್ಲಿ ಸೇರಿಸಿರುತ್ತಾರೆ. ಸೋರೆಕಾಯಿಯ ಕೆಳಭಾಗದ ಬೊಂಬು ನಾಲ್ಕೈದು ಇಂಚು ಬಂದಿರುತ್ತದೆ.

ಬೊಂಬು ಗಟ್ಟಿಯಾಗಿ ಅಂಟಿಕೊಳ್ಳಲು ಆ ಸೋರೆಕಾಯಿಗೆ ಮೇಣಮೆತ್ತಿರುತ್ತಾರೆ ಮತ್ತು ಕೆಳಗಿನ ಬೊಂಬಿನ ತುದಿಗೆ ನಾಲ್ಕೈದು ಇಂಚು ಬಿಟ್ಟು ತಂತಿಯನ್ನು ಸುತ್ತಿರುತ್ತಾರೆ. ಇದೇ ತಂತಿಯನ್ನು ಬಿದರಿನ ಬೊಂಬಿನ ಮೇಲಿನ ಭಾಗದ ನಾಲ್ಕೈದು ಇಂಚು ಬಿಟ್ಟು ಅಲ್ಲಿ ಒಂದು ರಂಧ್ರ ಹಾಕಿ ಆ ರಂಧ್ರದೊಳಗೆ(ಕಟ್ಟಿಗೆಯಿಂದ ತಯಾರಿಸಲಾದ ಒಂದು ಕಿವಿಯನ್ನು ಸೇರಿಸಿ ಆ ಕಿವಿಗೆ ಕೆಳಗಿಂದ ಎಳೆದ ತಂತಿಯನ್ನು ಬಿಗಿಯುತ್ತಾರೆ. ತಂತಿಸುತ್ತಿದ ಕಿವಿಯನ್ನು ತಿರುಗಿಸುವುದರ ಮೂಲಕ ಶ್ರುತಿ ಹೆಚ್ಚುಕಡಿಮೆ ಮಾಡುತ್ತಾರೆ.) ಸೇರಿಸುವ ನಾಲ್ಕು ಇಂಚಿನ ಬೆರಳು ಗಾತ್ರದ ಕಟ್ಟಿಗೆಯ ತುಂಡಿಗೆ ಬಿರಡಿ ಎನ್ನುತ್ತಾರೆ. ಈ ಬಿರಡಿಗೆ ಬೇರೆ ಬೇರೆ ಕಡೆ ಬೆಣಕು ಎಂದು ಕರೆಯುತ್ತಾರೆ. ಈ ಬಿರಡಿ ಅಥವಾ ಬೆಣಕು ತಿರುಗಿಸುವುದರ ಮುಖಾಂತರ ಏಕತಾರಿಯ ನಾದ ತಮ್ಮ ಧ್ವನಿಗನುಸಾರವಾಗಿ ಹೆಚ್ಚು ಕಡಿಮೆ ಮಾಡಿಕೊಳ್ಳುತ್ತಾರೆ.

ತಂತಿ ಸೋರೆಕಾಯಿಗೆ ಹತ್ತಿಕೊಂಡಿರುವುದರಿಂದ ನಾದ ಹೊರ ಹೊಮ್ಮುವುದಿಲ್ಲ. ಅದಕಾರಣ ಸೋರೆಕಾಯಿಯ ಮೇಲೆ ಹೋಗಿರುವ ತಂತಿಯನ್ನು ಕಾಯಿಯಿಂದ ಬಿಡಿಸಿ ಮೇಲಕ್ಕೆ ಎತ್ತಲು ಎರಡು ಇಂಚಿನ ಯಾವುದಾದರೂ ಕಟ್ಟಿಗೆ ತುಂಡು ಇಟ್ಟಿರುತ್ತಾರೆ. ಈ ತುಂಡು ಕಟ್ಟಿಗೆಗೆ ಮೆಟ್ಟು ಎಂದು ಕರೆಯುತ್ತಾರೆ. ಶಾಸ್ತ್ರೀಯ ಸಂಗೀತಕ್ಕೆ ಬಳಸುವಂತಹ ತಂಬೂರಿಗೂ ಸಹ ಇದೇ ರೀತಿ ಆನೆಯ

ಕೊರೆಯಿಂದ ಸೊರೆಕಾಯಿ ಮಧ್ಯಮ ತಂತಿಯ ಮಧ್ಯ ಕೂಡಿಸಲಾಗಿರುತ್ತದೆ. ಅದಕ್ಕೆ ನಾವು ಬ್ರಿಜೆ ಎಂದು ಕರೆಯುತ್ತಾರೆ. ಈ ರೀತಿಯಾಗಿ ತಯಾರಿಸಲಾದಂತಹ ಏಕತಾರಿಯನ್ನು ತತ್ವಪದದಲ್ಲಿ ಮುಖ್ಯಗಾಯಕ ಬಲಗೈಯಲ್ಲಿ ಹಿಡಿದುಕೊಂಡು ಬಲಗೈನ ತೋರುಬೆರಳು ಅಥವಾ ಮಧ್ಯದ ಬೆರಳಿನಿಂದ ಹಾಡಿನ ವಿವಿಧ ಲಯಕಾರಿಗಳಿಗೆ ತಕ್ಕಂತೆ ತಂತಿಯನ್ನು ಮೀಟಿ ಸುಮಧುರವಾದಂತ ನಾದ ಬರುವಂತೆ ಮಾಡುತ್ತಾರೆ. ಎಡಗೈ ತೋರುಬೆರಳನ್ನು ಸೋರೆಕಾಯಿಯ ಮೇಲಿಟ್ಟು ಹಾಡಿನ ತಾಳ-ಲಯಕ್ಕೆ ತಕ್ಕಂತೆ ಬಡಿಯುವುದುರ ಮುಖಾಂತರ ಕೇಳುಗರಿಗೆ ಸಂಗೀತ ರಸದೌತಣ ನೀಡುತ್ತಾರೆ.

ಈ ಏಕಾತರಿ ವಾದ್ಯವನ್ನು ಶ್ರುತಿಗಾಗಿ ಬಳಸಿಕೊಳ್ಳುವುದಲ್ಲದೆ ತಾಳ-ಲಯಕ್ಕಾಗಿಯೂ ಬಳಸುತ್ತಾರೆ. ಮೇಳದಲ್ಲಿ ಒಬ್ಬಗಾಯಕ ಶ್ರುತಿಗೋಸ್ಕರ ಈ ಏಕತಾರಿಯನ್ನು ಬಲಗೈಯನ ತೋರುಬೆರಳು ಅಥವಾ ಮಧ್ಯಬೆರಳನಿಂದ ನುಡಿಸಿ ನಾದ ಬರುವಂತೆ ಮಾಡುತ್ತಾರೆ. ಇದೆ ಏಕತಾರಿಯನ್ನು ತಾಳ-ಲಯಗೋಸ್ಕರ ಮೇಳದ ಮತ್ತೊಬ್ಬ ಕಲಾವಿದ ಆ ಏಕತಾರಿಯನ್ನು ತಾವು ಹಾಡುವ 'ಧ್ವನಿಗೆ' ತಕ್ಕಂತೆ ಶ್ರುತಿ ಕೂಡ ಕೈಯಲ್ಲಿರುತ್ತದೆ.

ಇದೇ ಚನ್ನದಾಸ ಕಲಾವಿದರು ವಾದ್ಯವನ್ನು ಸಹ ನುಡಿಸುತ್ತಾರೆ. ಏಕತಾರಿ ವಾದ್ಯಕ್ಕೆ ಒಂದು ತಂತಿಯಿದ್ದರೆ ತಂಬೂರಿಗೆ ನಾಲ್ಕು ತಂತಿಗಳು. ತಮ್ಮ ಸಂಗೀತದ ಪ್ರಾರಂಭದಲ್ಲಿ ಒಂದು ತಂತಿಯ ಏಕತಾರಿ ವಾದ್ಯ ಹಿಡಿದುಕೊಂಡು ತತ್ವಪದಗಳನ್ನು ಹಾಡುತ್ತಿದ್ದ ಚನ್ನದಾಸರ ಸಮುದಾಯ ಒಂದು ತಂತಿಯ ನಾದ ಹೆಚ್ಚು ಕೇಳಿಸದೆ ಇರುವುದರಿಂದ ಮತ್ತು ಆ ಷಡ್ಜ ಸ್ವರದಲ್ಲಿ ಪಂಚಮ ಸೇರಿಸಬೇಕು ಎನ್ನುವ ದೃಷ್ಟಿಯಿಂದ ನಾಲ್ಕು ತಂತಿಯ ತಂಬೂರಿ ತಯಾರಿಸಲಾಗಿದೆ ಎಂದು ತಿಳಿದುಬರುತ್ತದೆ. ಶಾಸ್ತ್ರೀಯ ಸಂಗೀತದ ತಂಬೂರಿಗಿಂತ ಚನ್ನದಾಸರು ಬಳಸುವ ಉಪಯೋಗಿಸುವ ತಂಬೂರಿ ವಿಶೇಷವಾಗಿದೆ.



**ತಯಾರಿಕೆ :** ಹಲಸಿನ ಮರವನ್ನು ತೆಗೆದುಕೊಂಡು ಎರಡು ಮೊಳ ಉದ್ದ ಕಡಿದು ಇದರ ಒಂದು ತುದಿಯಲ್ಲಿ ನಾಗರಹೆಡೆ ಅಥವಾ ಸಿಂಹದ ಮುಖವನ್ನು ಬಿಡಿಸಲಾಗಿರುತ್ತೆ. ಹಲಸಿನ ಮರದ ಸ್ವಲ್ಪ ಗೋಲಾಕಾರದ ಕಟ್ಟಿಗೆಯ ಪಡಗದ ಮೇಲ್ಭಾಗದಲ್ಲಿ ಕಟ್ಟಿಗೆಯಿಂದ ತಯಾರಿಸಲಾದ ದಂಡಿಗೆಯನ್ನು ಜೋಡಿಸಲಾಗಿರುತ್ತದೆ. ಕೆಳಗಿನ ಭಾಗದಲ್ಲಿ ವೃತ್ತಾಕಾರ, ಮೇಲ್ಭಾಗದಲ್ಲಿ ಚಪ್ಪಟೆಯಾಗಿರುವ ದಂಡಿಗೆಯ ಉದ್ದ ಸುಮಾರು ನಾಲ್ಕು ಅಡಿ ಇರುತ್ತದೆ. ತಂಬೂರಿ ತಂತಿಗಳನ್ನು ಮೆಟ್ಟು ಎಂಬ ಕಲೆಯ ತುಂಡಿಗೆ ಬಿಗಿದೇಳಿಸಿ ದಂಡಿಗೆಯ ಮೇಲೆ ಎಳೆದು ಮೇಲಿರುವ ಬಿರಡೆಗಳಿಗೆ ಸುತ್ತಿರುತ್ತಾರೆ. ದಂಡಿಗೆಯ ಮೇಲ್ಭಾಗದಲ್ಲಿ ನಾಲ್ಕು ಬಿರಡೆಗಳು ಸೇರಿಸುವ ಸಲುವಾಗಿ ನಾಲ್ಕು ರಂಧ್ರಗಳು ಹಾಕಿ ಆ ನಾಲ್ಕು ರಂಧ್ರದೊಳಗೆ ನಾಲ್ಕು ಬಿರಡೆಗಳು ಸೇರಿಸಿ ಕೆಳಗಿನಿಂದ ಎಳೆಯಲಾದ ನಾಲ್ಕು ತಂತಿಗಳನ್ನು ಬಿರಡೆಗಳಿಗೆ ಸುತ್ತಿರುತ್ತಾರೆ. ತಂಬೂರಿ ಶ್ರುತಿಗೊಳಿಸಲು

ಈ ಬಿರಡೆಗಳನ್ನು ತಿರುಗಿಸಬೇಕು. ಶಾಸ್ತ್ರೀಯ ಸಂಗೀತದ ತಂಬೂರಿಯಂತೆ ಈ ತಂಬೂರಿ ಯಲ್ಲಿಯೂ ಕೂಡ ಸಪಸ ಎಂದು ನುಡಿಯುತ್ತದೆ. ಈ ತಂಬೂರಿಯನ್ನು ದಂಡಿಗೆ ಅಂದರೆ ಕಟ್ಟಿಗೆಯಿಂದ ತಯಾರಿಸಿರುವುದರಿಂದ ಇದನ್ನು ದಂಡಿಗೆ ವಾದ್ಯ ಎಂದು ಕರೆಯುತ್ತಾರೆ. ಈ ವಾದ್ಯವನ್ನು ನುಡಿಸುವ ಕಲಾವಿದರು ಕೊರಳಲ್ಲಿ ಹಾಕಿಕೊಂಡು ಬಲಗೈ ಬೆರಳುಗಳಿಂದ ಸ ಸ ಸ ಎಂದು ಎಲ್ಲ ತಂತಿಗಳನ್ನು ಒಟ್ಟಿಗೆ ನುಡಿಸುತ್ತಾರೆ. ಈ ತಂಬೂರಿ ವಾದ್ಯಕ್ಕೆ 'ಸರಸ್ವತಿ' ಎಂದು ಕರೆಯುತ್ತಾರೆ.

ದಂಡಿಗೆಯ ಹೆಸರಿನ ತಂಬೂರಿ ವಾದ್ಯದ ಇತಿಹಾಸ ೧೦ನೇ ಶತಮಾನ ಪೂರ್ವಕ್ಕೂ ಹೋಗುತ್ತದೆ. ಪಂಪನ ಆದಿಪುರಾಣದಲ್ಲಿ 'ಎನ್ನ ಕಾಯವ ದಂಡಿಗೆಯ ಮಾಡಯ್ಯ' ಎಂಬ ಬಸವಣ್ಣನವರ ವಚನಗಳಲ್ಲಿ ಹರಿಹರನ ಗಿರಿಜಾಕಲ್ಯಾಣ, ರಾಘವಾಂಕನ ಹರಿಶ್ಚಂದ್ರ ಕಾವ್ಯದಲ್ಲಿ, ಕನಕದಾಸರ ಮತ್ತು ಪುರಂದರ ದಾಸರ ಕೀರ್ತನೆಗಳಲ್ಲಿ ಕಂಡುಬರುತ್ತದೆ. ಭಿಕ್ಷಾಟನೆಯ ಸಂದರ್ಭದಲ್ಲಿ ಮುಖ್ಯವಾಗಿ ಈ ವಾದ್ಯವನ್ನು ಬಳಸುವುದರಿಂದ ಈ ಹಾಡುಗಾರರನ್ನು ದಂಡಿಗೆ ದಾಸರೆಂದು ಕರೆಯುತ್ತಾರೆ.

**ಗೆಜ್ಜೆ :** ಜಾನಪದ ಮತ್ತು ಶಾಸ್ತ್ರೀಯ ಸಂಗೀತಗಳಲ್ಲಿ ಬಳಸುವಂತ ವಾದ್ಯ. ಈ ಗೆಜ್ಜೆಯನ್ನು ಎಲ್ಲರೂ ಕಾಲಲ್ಲಿ ನೃತ್ಯ ಮಾಡುವ ಸಲುವಾಗಿ ಬಳಸುವಂತ ವಾದ್ಯವಾಗಿದೆ. ಆದರೆ ಚನ್ನದಾಸ ಸಮುದಾಯದ ಕಲಾವಿದರು ತತ್ವಪದ ಸಂಗೀತದಲ್ಲಿ ತಾಳ-ಲಯಕ್ಕಾಗಿ ಬಳಸುವ ಏಕತಾರಿಯ ತಂತಿಯನ್ನು ಮೀಟುವ ಗುಣಿಯ ಹಿಂದೆ ಕಟ್ಟಿರುತ್ತಾರೆ.

ಕಂಚಿನಿಂದ ತಯಾರಿಸಲಾದ ಸಣ್ಣಪುಟ್ಟ ಗುಂಡುಗಳ ಮಧ್ಯದಲ್ಲಿ ಟೊಳ್ಳು ಮಾಡಲಾಗಿರುತ್ತದೆ. ಟೊಳ್ಳು ಮಾಡಿದ ಜಾಗದಲ್ಲಿ ಸೀಸದ ಗುಂಡುಗಳನ್ನು ಹಾಕಿ, ಆ ಗುಂಡುಗಳು ಹೊರಕ್ಕೆ ಬಾರದ ಹಾಗೆ ಸೀಳಿದ ಗೆಜ್ಜೆಯ ಬಾಯಿಯನ್ನು ಮುಚ್ಚಿರುತ್ತಾರೆ. ಈ ಗೆಜ್ಜೆಯನ್ನು ತಂತಿ ಅಥವಾ ದಾರವನ್ನು ಸೇರಿಸಲು ಅಥವಾ ಕಟ್ಟಲು ಗೆಜ್ಜೆಯ ಹಿಂಭಾಗದಲ್ಲಿ ಕೊಂಡಿಗಳಿರುತ್ತವೆ. ಏಕತಾರಿ ನುಡಿಸುವಾಗ ಏಕತಾರಿ ನುಡಿಸುವ ಗುಣಿಕೆಯಿಂದ ಒಂದು ರಂಧ್ರ ಹಾಕಿ ಆ ಬಿಡಿ ಬಿಡಿಯಾಗಿರುವ ಗೆಜ್ಜೆಗಳ ಕೊಂಡಿಗಳಿಗೆ ತಂತಿಯನ್ನು ಸೇರಿಸಿ ಆ ತಂತಿಯನ್ನು ಗುಣಿಹಿಂದೆ ಹಾಕಿರುವ ರಂಧ್ರದೊಳಗೆ ಸೇರಿಸಿ ಬಿಗಿದಿರುತ್ತಾರೆ.

ಈ ವಾದ್ಯವನ್ನು ತತ್ವಪದಕಾರರು ತತ್ವಪದಗಳನ್ನು ಹಾಡುವ ಸಂದರ್ಭದಲ್ಲಿ ಈ ಗೆಜ್ಜೆಕಟ್ಟಿದ ಗುಣಿ ಏಕತಾರಿಯ ತಂತಿಯನ್ನು ತಾಳ-ಲಯಕನುಗುಣವಾಗಿ ಬಾರಿಸುವುದರಿಂದ ಏಕತಾರಿಯ ತಂತಿಯ ನಾದದ ತಾಳದ ಜೊತೆಗೆ ಗೆಜ್ಜೆಯ ನಾದವು ಕೂಡ ಸುಮಧುರವಾಗಿ ಕೇಳುತ್ತದೆ.



**ಚಿಟಕಿ/ಚಿಟಗಿ ತಾಳ :** ಈ ಚಿಟಕಿ ತಾಳವನ್ನು ಎರಡು ಅಡ್ಡಲಾಗಿರುವ ಮರದ ತುಂಡುಗಳಿಂದ ಮಾಡಲಾಗಿರುತ್ತದೆ. ಕೈಬೆರಳಿಗೆ ಹಾಕಿಕೊಳ್ಳಲು ಚಿಟಕಿಯ ಮೇಲ್ಭಾಗದಲ್ಲಿ ಕಬ್ಬಿಣದಿಂದ ತಯಾರಿಸಲಾದ ಬಳೆ ಇರುತ್ತದೆ. ಕೆಳಭಾಗದ ತಾಳವನ್ನು ಎಡಗೈ ಹೆಬ್ಬೆಟ್ಟಿಗೆ ಹಾಗೂ ಮೇಲ್ಭಾಗದ ತಾಳವನ್ನು ಹೆಬ್ಬೆರಳು, ತೋರುಬೆರಳು ಮತ್ತು ಮಧ್ಯದ ಬೆರಳಿಗೆ ಹಾಕಿಕೊಂಡು ಹಾಡು ಮತ್ತು ಏಕತಾರಿಯ ಲಯದ ಗತ್ತಿಗೆ ಈ

ಚಿಟಿಕೆ ತಾಳವನ್ನು ನುಡಿಸುತ್ತಾರೆ. ಈ ವಾದ್ಯವನ್ನು ತತ್ವಪದ ಮೇಳದಲ್ಲಿ ತಾಳ ಲಯಕ್ಕಾಗಿ ತತ್ವಪದಕಾರರು ಹಾಡಿಕೊಂಡು ಈ ಚಿಟಕಿ ತಾಳವನ್ನು ಹರಿದಾಸರೂ ಕೂಡ ನುಡಿಸುತ್ತಿದ್ದರು. ರೈಲುಗಳಲ್ಲಿ ಭಿಕ್ಷುಕರು, ಕುರುಡರು ಈ ವಾದ್ಯವನ್ನು ನುಡಿಸಿಕೊಂಡು ಜನಪ್ರಿಯ ಪದಗಳನ್ನು ಹಾಡುತ್ತಾರೆ. ಈ ಚಿಟಕೆ ತಾಳದಲ್ಲಿ ಯಾವುದೇ ರೀತಿಯ ತಾಳದಲ್ಲಿ ಬೋಲುಗಳು ಕಂಡುಬರುವುದಿಲ್ಲ. ತಾಳದ ಮಾತ್ರೆಗಳು ಪೆಟ್ಟುಗಳು ಮಾತ್ರ ಕಂಡುಬರುತ್ತವೆ.

**ಪಿಟೀಲು :** ಪ್ರಾರಂಭದಿಂದಲೂ ಏಕತಾರಿಯಲ್ಲಿ ಹಾಡುತ್ತಿದ್ದ ಚನ್ನದಾಸ ಕಲಾವಿದರು ಇತ್ತೀಚಿನ ದಿನಗಳಲ್ಲಿ ಪಿಟೀಲನೂ ಕೂಡ ಬಳಸುತ್ತಿದ್ದಾರೆ. ಹಲವಾರು ತಂತಿವಾದ್ಯಗಳಲ್ಲಿ ಪಿಟೀಲು ವಾದ್ಯವು ಒಂದು. ವಿಶ್ವ ಪ್ರಸಿದ್ಧವಾಗಿ, ಪ್ರಧಾನ ಮತ್ತು ಪಕ್ಕ ವಾದ್ಯವಾಗಿಯೂ ವಿಜೃಂಭಿಸುತ್ತಿರುವ ಈ ವಾದ್ಯವನ್ನು ಕಮಾನಿಂದ ನುಡಿಸುತ್ತಾರೆ. ಪಾಶ್ಚಾತ್ಯ ವಾದ್ಯವಾಗಿರುವ ಈ ಪಿಟೀಲು ವಾದ್ಯವು ತಂಜಾವೂರ ರಾಜ್ಯದ ಮಂತ್ರಿಯಾದ ವರಾಹ ಅಪ್ಪಯ್ಯ ಎಂಬುವರು ಪ್ರಥಮವಾಗಿ ಈ ವಾದ್ಯವನ್ನು ಪ್ರಚಾರದಲ್ಲಿ ತಂದರೂ ಎಂದು ತಿಳಿದುಬರುತ್ತದೆ.

ಈ ವಾದ್ಯದ ಉದ್ದಳತೆ ಸಾಮಾನ್ಯವಾಗಿ ೬೦ ಸೆಂ.ಮೀ. ಉದ್ದವಿದ್ದು ಅದರಲ್ಲಿ ಕಂಪಿಸುವ ತಂತಿಯ ಭಾಗವು ಅಂದರೆ ಮೇರುವಿನಿಂದ ಕುದುರೆಯವರೆಗಿನ ಭಾಗವು ಸುಮಾರು ೩೨ ಸೆಂ.ಮೀ. ಉದ್ದವಿರುತ್ತದೆ.ಈ ತಂತಿಯ ಮೇಲೆ ಕಮಾನಿನ ಕೂದಲಿನಿಂದ ನಾಜುಕ್ಕಾಗಿ ಉಜ್ಜಿ ತೀಡುವುದರಿಂದ ನಾದೋತ್ಪತ್ತಿಯಾಗುತ್ತದೆ. ಈ ಕಮಾನಿನ ಉದ್ದ ಸರಿಸುಮಾರು ೬೮ ಸೆಂ.ಮೀ.ಗಳಷ್ಟಿರುತ್ತಧ ಕಮಾನಿನ ಮುಂಭಾಗದಲ್ಲಿರುವ ಸ್ವಲ್ಪ ಅಗಲವಾಗಿರುವ ಭಾಗಕ್ಕೆ ಕೂದಲನ್ನು ಬಂಧಿಸಿ ಕಮಾನಿನ ಮತ್ತೊಂದು ಕೊನೆಯಲ್ಲಿ ಅಳವಡಿಸಲಾಗಿರುವ ತಿರುಗಣೆಯ ಸಾಧನದಿಂದ ಕಮಾನಿನ ಕೂದಲಿನ ಬಿಗಿತವನ್ನು ಹೆಚ್ಚು ಕಡಿಮೆ ಮಾಡಬಹುದು. ಪಿಟೀಲಿನ ಮುಖ್ಯವಾದಂತ ಅಂಗಗಳು ಈ ರೀತಿ ಕಂಡುಬರುತ್ತವೆ.

೧. ನಾದದ ಪೆಟ್ಟಿಗೆ ೨. ಚಕ್ಕೆ ಕುದುರೆ ಬೆರಳ ಫಲಕ ತಂತಿಗಳು ನಾಲ್ಕು, ಮೇರು, ನಾಲ್ಕು ಬಿರಡೆಗಳು ಹೊಂದಿರುವ ಬಿರಡೆ ಪೆಟ್ಟಿಗೆ, ತಲೆ, ಸೂಕ್ಷ್ಮ ಶ್ರುತಿ ಮಾಡಲು ತಿರುವುಗಳು ಮತ್ತು ಕಮಾನು.

ಪಿಟೀಲಿನ ನಾದದ ಪೆಟ್ಟಿಗೆಯ ಆಯತಾಕಾರವಾಗಿರದೆ ವಿಶೇಷ ಆಕಾರವನ್ನು ಹೊಂದಿದೆ. ಪೆಟ್ಟಿಗೆಯ ಮೂಲೆಗಳು ವೃತ್ತಾಕಾರದಲ್ಲಿ ಬಗ್ಗಿಸಲ್ಪಟ್ಟಿವೆ. ಪೆಟ್ಟಿಗೆಯ ನಡುವಿನ ಭಾಗವು ಸೊಂಟದಂತೆ ಎರಡು ಭಾಗಗಳಿಂದಲೂ ಅರ್ಧವೃತ್ತಾಕಾರದಲ್ಲಿ ಒಳಕ್ಕೆ ತಳಲ್ಪಟ್ಟಿದೆ. ಇದರ ಮುಂಭಾಗವು ಎದೆಹಲಗೆಯಿಂದ ಹಿಂದಿನ ಭಾಗವು ಬೆನ್ನುಹಲಗೆಯಿಂದಲೂ ಮಾಡಲ್ಪಟ್ಟಿದೆ. ಈ ರೆಡು ಭಾಗಗಳನ್ನು ಪೆಟ್ಟಿಗೆಯಾಕಾರದಲ್ಲಿ ಬಂಧಿಸಿರುವ ಪಕ್ಕಲ್ಲಿನ ಹಲಗೆಗಳಿಗೆ ಪಕ್ಕೆಗಳೆಂದು ಹೆಸರು. ಪೆಟ್ಟಿಗೆಯ ಮುಂದಿನ ಭಾಗದಲ್ಲಿ ಅಂದರೆ ಎದೆಹಲಗೆಯ ಮೇಲೆ f ಆಕಾರದ ಎರಡು ರಂಧ್ರಗಳಿವೆ. ಈ ರಂಧ್ರುಗಳು ಎದೆಹಲಗೆಯ ಮಧ್ಯಭಾಗದಿಂದ ಸಮದೂರದಲ್ಲಿವೆ. ಈ ರಂಧ್ರಗಳು ನಾದದ ಪೆಟ್ಟಿಗೆಯಲ್ಲಿ ಗಾಳಿಯ ಅನುಕರಣೆಯನ್ನು ಉಂಟುಮಾಡಿ ನಾದವನ್ನು ಪುಷ್ಟಿಗೊಳಿಸುತ್ತವೆ.

ಎದೆ ಹಲಗೆಯ ಮೇಲೆ ಈ f ರಂಧ್ರಗಳ ನಡುವಿನಲ್ಲಿ ಸುಮಾರು ೧ ½ ಅಗಲ ಎತ್ತರ ೧ ½ ಅಂಗುಲ ಅಗಲವು ಇರುವ ತೆಳುವಾದ ಮತ್ತು ಹಗುರವಾದಂತ ಕುದುರೆ ಇರಿಸಲಾಗಿದೆ. ಪೆಟ್ಟಿಗೆಯ ಕೆಳಭಾಗದಲ್ಲಿ ದಂಡಿಯ ಸೇರಿಸಲ್ಪಟ್ಟಿದೆ. ಈ ದಂಡಿಗೆ ಬೆರಳಿನ ಫಲಕವು ಅಂಟಿಸಲ್ಪಟ್ಟಿದೆ. ಇದರ ಕೆಳ ತುದಿಯಲ್ಲಿ ಮೇರು ಹಾಗೂ ಬಿರಡೆಗಳಿವೆ. ದಂಡಿಯ ಕೊನೆಯ ಭಾಗವು ಸುರಳಿಯಾಕಾರದಲ್ಲಿದೆ. ಪೆಟ್ಟಿಗೆಯ ಮೇಲ್ಭಾಗದಲ್ಲಿ ಕುದುರೆಯ ಹಿಂದೆ ಮರದ ಚಕ್ಕೆ ತೂಗು ಹಾಕಲಾಗಿದೆ. ಈ ಚಕ್ಕೆಯಲ್ಲಿ ತಂತಿಗಳನ್ನು ಕಟ್ಟಲು ನಾಲ್ಕು ರಂಧ್ರಗಳು ಮಾಡಲಾಗಿದೆ. ಈ ಚಕ್ಕೆಗೆ ನಾಲ್ಕು ತಂತಿಗಳು ಕಟ್ಟಲ್ಪಟ್ಟು ಅವು ಕುದುರೆಯ ಮೇಲೆ ಸಾಗಿ ದಂಡಿಯ ಮೇಲಿಂದ ಮೇರುವಿನ ಮೇಲೆ ಹಾದು ಬಿರಡೆಗಳಿಗೆ ಕಟ್ಟಲಾಗಿರುತ್ತದೆ.

ಈ ಚಕ್ಕೆಯ ಮೇಲೆ ಸೂಕ್ಷ್ಮವಾಗಿ ಶ್ರುತಿ ಮಾಡಿಕೊಳ್ಳಲು ನಾಲ್ಕು ತಿರುವುಗಳು ಕೂಡ ಇರುತ್ತವೆ. ಒಂದು ಪಿಟೀಲನ್ನು ರಚಿಸಲು ಸುಮಾರು ೭೦ ಬಿಡಿ ಭಾಗಗಳು ಬೇಕಾಗುತ್ತವೆ. ಅಷ್ಟೇ ಅಲ್ಲದೆ ಪಿಟೀಲಿನ ಒಂದೊಂದು ಭಾಗಗಳು ಬೇರೆ ಬೇರೆ ಮರಗಳಿಂದ ತಯಾರಿಸಲ್ಪಟ್ಟಿರುತ್ತದೆ. ಉದಾಹರಣೆಗೆ ಎದೆಹಲಗೆಯು 'ಪೈನ್' ಮರದಿಂದ, ಬೆನ್ನಹಲಗೆ ಮತ್ತು ಕುದುರೆಗಳು 'ಮೊಪೆಲ್' ಮರದಿಂದ, ದಂಡಿಹಲಗೆ ಚಕ್ಕೆ ಮತ್ತು ಬಿರಡೆಗಳು 'ಎಬೋನಿ' ಮರದಿಂದ ತಯಾರಿಸಲಾಗಿರುತ್ತದೆ.

ಕುದುರೆಯ ಬಲಗಾಲಿನ ಕೆಳಭಾಗದಲ್ಲಿ ಎದೆ ಹಲಗೆ ಹಾಗೂ ಬೆನ್ನು ಹಲಗೆಗಳನ್ನು ಕೂಡಿಕೊಳ್ಳುವಂತೆ ಇರುವ ನಾದ ಸ್ಥಂಭವು ಕಂಪಿಸುವ ಕುದುರೆಗೆ ಬಲಭಾಗದ ಸ್ತಿರವಾದ ಆಧಾರಸ್ತಂಭದಂತೆ ಕಾರ್ಯ ನಿರ್ವಹಿಸುತ್ತದೆ. ಕುದುರೆಯ ಎಡಗಾಲಿನ ಅಡಿಯಲ್ಲಿ 'ಬಾಸಬಾರ್' ಎಂಬ ಪಟ್ಟಿಯನ್ನು ಎದೆಹಲಗೆಯ ಒಳಭಾಗದಲ್ಲಿ ಉದ್ದವಾಗಿ ಅಂಟಿಸಲಾಗಿರುತ್ತದೆ. ಇದು ಕಂಪನ ಶೀಲವಾಗಿರುವ ಕುದುರೆಯ ಎಡಗಾಲಿನಿಂದ ಉತ್ಪತ್ತಿಯಾಗುವ ನಾದವನ್ನು ಅಗಲವಾಗಿರುವ ಎದೆ ಹಲಗೆಗೆ ರವಾನಿಸುತ್ತದೆ ಮತ್ತು ನಾದ ಸೃಷ್ಟಿ ಕೊಡುತ್ತದೆ.

ಈ ಪಿಟಿಲು ವಾದ್ಯವನ್ನು ಭಾರತೀಯ ಶಾಸ್ತ್ರೀಯ ಸಂಗೀತದ ಕಛೇರಿಗಳಲ್ಲಿ ಪಿಟೀಲುವಾದ್ಯವನ್ನು ಕುಳಿತುಕೊಂಡೆ ಬಾರಿಸುತ್ತಾರೆ. ಈ ವಾದ್ಯವನ್ನು ಭುಜದ ಮೇಲಿರುವಂತೆ ಎದೆಗೆ ಒರಗಿಸಿಕೊಂಡು ಸುರುಳಿಯಾಕಾರದ ಬಿರಡೆ ಪೆಟ್ಟಿಗೆ ಭಾಗವನ್ನು ಬಲಗಾಲಿನ ಹಿಮ್ಮಡಿ ಮೇಲಿಟ್ಟುಕೊಂಡು ಎಡಗೈಯಿನ ನಾಲ್ಕು ಬೆರಳುಗಳನ್ನು ಉಪಯೋಗಿಸಿಕೊಂಡು ಬೆರಳ ತುದಿಯಿಂದ ತಂತಿಯನ್ನು ಒತ್ತುವುದರಿಂದ ವಿವಿಧ ಸ್ವರಗಳನ್ನು ಮತ್ತು ಬೆರಳುಗಳಿಂದ ತಂತಿಯನ್ನು ಒತ್ತಿ ಜಾರಿಸಿ ಉಜ್ಜುವುದರಿಂದ ಗಮಕಗಳನ್ನು ಪಡೆಯಬಹುದು. ಆದರೆ ಚನ್ನದಾಸ ಕಲಾವಿದರು ಹಿಂದೂಸ್ತಾನಿಶಾಸ್ತ್ರೀಯ ಸಂಗೀತ ಕಲಾವಿದರಂತೆ ಪಿಟೀಲನ್ನು ಬಲಗಾಲಿನ ಮೇಲೆ ಇಟ್ಟು ನುಡಿಸುವುದಿಲ್ಲ.

ವಾದ್ಯವನ್ನು ಭುಜದ ಮೇಲೆ ಇಟ್ಟುಕೊಂಡು ಸುರಳಿಯಾಕಾರದ ಬಿರಡೆ ಪೆಟ್ಟಿಗೆಯ ಭಾಗವನ್ನು ಎಡಗೈಯನ ಹಸ್ತದಲ್ಲಿ ಇರಿಸಿಕೊಂಡು ಎಡಗೈಯನ ನಾಲ್ಕು ಬೆರಳುಗಳು ಉಪಯೋಗಿಸಿಕೊಂಡು ಬೆರಳ ತುದಿಯಿಂದ ತಂತಿಯನ್ನು ಒತ್ತುವುದರಿಂದ ವಿವಿಧ ಸ್ವರಗಳು ಬರುತ್ತವೆ.

ನಾಲ್ಕು ತಂತಿಗಳುಳ್ಳ ಪಿಟೀಲು ವಾದ್ಯದಲ್ಲಿ ಮೊದಲ ತಂತಿಯನ್ನು ಮಧ್ಯ ಪಂಚಮಕ್ಕೆ ಎರಡನೆ ತಂತಿ ಮಧ್ಯೆ ಷಡ್ಜಕ್ಕೆ, ಮೂರನೇ ತಂತಿ ಮಂದ್ರ ಪಂಚಮ ಮತ್ತು ನಾಲ್ಕನೆಯ ತಂತಿಯನ್ನು ಮಂದ್ರ ಷಡ್ಜಕ್ಕೆ ಶ್ರುತಿ ಕೂಡಿಸುತ್ತಾರೆ.

ಚನ್ನದಾಸರು ಈ ಪಿಟಿಲು ವಾದ್ಯವನ್ನು ತಮ್ಮ ತತ್ವಪದ ಮೇಳದಲ್ಲಿ ನುಡಿಸುತ್ತಾರೆ. ಸುಗಮ ಸಂಗೀತ ಅಥವಾ ಶಾಸ್ತ್ರೀಯ ಸಂಗೀತದಲ್ಲಿ ಹಾರ್ಮೋನಿಯಂ ಸಾಥಿ ಇರುವಂತೆ ತತ್ವಪದದಲ್ಲಿ ಈ ಪಿಟಿಲು ವಾದ್ಯ ಬಳಸಿಕೊಂಡಿರಬಹುದು ಎಂದು ತಿಳಿದುಬರುತ್ತದೆ. ಕಾರಣ ತಾವು ಹಾಡುವ ಸಂದರ್ಭದಲ್ಲಿ ಹಾಡಿಕೊಂಡೇ ಹಾಡುವ ದಾಟಿಯನ್ನು ಪಿಟೀಲಿನಲ್ಲಿ ನುಡಿಸುತ್ತಾರೆ. ಪಿಟೀಲಿನ ನಾದಕ್ಕೂ ಮತ್ತು ಅವರ ಧ್ವನಿಗೂ ಹಾಡುವ ಸಂದರ್ಭದಲ್ಲಿ ವ್ಯಾತ್ಯಾಸನೆ ಕಾಣುತ್ತಿಲ್ಲ. ಅಷ್ಟೊಂದು ಇಂಪಾಗಿ ಕೇಳುತ್ತದೆ. ತಾವು ಹಾಡಿಬಿಟ್ಟ ಮೇಲೆ ಹಾಡಿನ ದಾಟಿಯನ್ನು ಎರಡು ಬಾರಿ ನುಡಿಸಿ ಮುಂದೆ ಅಂತರದ ಸಾಲಿನ ದಾಟಿ ಕೂಡ ಪಿಟೀಲಿನಲ್ಲಿ ನುಡಿಸಿ ನಂತರ ತಾವು ಹಾಡುತ್ತಾರೆ. ಮುಂದಿನ ನುಡಿಗಳನ್ನು ವಾದ್ಯದಲ್ಲಿ ನುಡಿಸಿ ನಂತರ ಹಾಡುವ ಪದ್ಧತಿ ಇರುವುದು ಇವರ ತತ್ವಪದ ಸಂಗೀತದಲ್ಲಿ ಮಾತ್ರ ಕಂಡುಬರುತ್ತದೆ ಎಂದು ಹೇಳಬಹುದು. ಈ ಪಿಟೀಲು ವಾದ್ಯವನ್ನು ತತ್ವಪದ ಮೇಳದ ಹಿರಿಯ ಕಲಾವಿದರು ನುಡಿಸುವುದು ಕಂಡುಬರುತ್ತದೆ.

**ನೃತ್ಯ** : ಚನ್ನದಾಸರ ತತ್ವಪದ ಸಂಗೀತದಲ್ಲಿ ಹಾಡುಗಾರಿಕೆ ಪ್ರಧಾನವಾಗಿದ್ದರಿಂದ ಇಲ್ಲಿ ಬಹಳ ನೃತ್ಯ ಕಂಡುಬರುವುದಿಲ್ಲ. ಅಭಿನಯಪೂರ್ವಕವಾಗಿ ಹಾಡುವುದು ಮಾತ್ರ ಕಂಡುಬರುತ್ತದೆ. ಭಿಕ್ಷಕ್ಕೆ ಹೋದಾಗ ಮಾತ್ರ ನಿಂತುಕೊಂಡು ತಿರುಗಾಡಿ ಹಾಡುತ್ತಾರೆ. ನಿಂತ್ಕೊಂಡು ಹಾಡಿದರು ಸಹನು ಇವರು ನೃತ್ಯ ಮಾಡುವುದು ಕಂಡುಬರುವುದಿಲ್ಲ. ಮತ್ತು ವೇದಿಕೆ ಕಾರ್ಯಕ್ರಮಗಳಲ್ಲಿಯೂ ಕೂಡನು ಶಾಸ್ತ್ರೀಯ ಸಂಗೀತ ಕಲಾವಿದರಂತೆ ಕುಳಿತುಕೊಂಡೆ ಹಾಡುತ್ತಾರೆ.

**ವೇಷಭೂಷಣಗಳು** : ಚನ್ನದಾಸ ಕಲಾವಿದರಲ್ಲಿ ಅಂತಹ ಹೇಳಿಕೊಳ್ಳುವಂತಹ ವೇಷಭೂಷಣಗಳೇನು ಕಂಡುಬರುವುದಿಲ್ಲ. ಹಂಡಿಜೋಗಿ ಕಲಾವಿದರು ಮತ್ತು ಗೊಂಧಳಿ ಸಮುದಾಯದ ಕಲಾವಿದರಂತೆ ಸಂಗೀತ ಕಾರ್ಯಕ್ರಮ ನೀಡುವ ಸಮಯದಲ್ಲಿ ವಿಶೇಷ ವೇಷಭೂಷಣಗಳು ಹಾಕುವಂತೆ ಚನ್ನದಾಸ ತತ್ವಪದಕಾರ ಕಲಾವಿದರಲ್ಲಿ ಅಂತಹ ವೇಷಭೂಷಣಗಳು ಕಂಡುಬರುವುದಿಲ್ಲ. ದಿನನಿತ್ಯ ಧರಿಸುವಂತಹ ಬಟ್ಟೆಗಳನ್ನೇ ತಮ್ಮ ಕಾರ್ಯಕ್ರಮಗಳಲ್ಲಿ ಧರಿಸುತ್ತಾರೆ. ಇವರ ಮೇಳದಲ್ಲಿ ಇಬ್ಬರು, ಮೂವರು, ನಾಲ್ಕು ಅಥವಾ ಐದು



ಜನ ಕಲಾವಿದರಿದ್ದರು ಸಹ ವೇಷಭೂಷಣಗಳಲ್ಲಿ ವ್ಯತ್ಯಾಸಗಳೇನು ಕಂಡುಬರುವುದಿಲ್ಲ. ಬಿಳಿಪಂಚೆ, ಬಿಳಿ ಅಂಗಿ, ಹೆಗಲಮೇಲೆ ಬಣ್ಣ ಬಣ್ಣದ ಶಾಲುಗಳು, ಕೊರಳೊಳಗೆ ಒಂದು ಅಥವಾ ಎರಡು

ಮುತ್ತಿನ ಸರಗಳು, ಹಣೆಯಲ್ಲಿ ವಿಭೂತಿ ಹಾಗೂ ಕುಂಕುಮ ಹಚ್ಚಿಕೊಳ್ಳುತ್ತಾರೆ. ಕೈಯಲ್ಲಿ ಬಣ್ಣ ಬಣ್ಣದಿಂದ ಕೂಡಿದ ಏಕತಾರಿ ವಾದ್ಯ ಇವುಗಳೇ ಇವರ ವೇಷಭೂಷಣಗಳು.

**೫.೫. ಗೋಂಧಳಿ ಸಮುದಾಯದ ಹಾಡುಗಾರಿಕೆ**

ಹೈದ್ರಾಬಾದ್-ಕರ್ನಾಟಕದಲ್ಲಿ ಕಂಡುಬರುವ ಹಲವಾರು ವೃತ್ತಿ ಸಂಗೀತ ಸಮುದಾಯಗಳಲ್ಲಿ ಗೊಂದಳಿ ಸಮುದಾಯವು ಒಂದು. ಇವರು ಕಿನ್ನರಿ ಜೋಗಿಗಳಂತೆ ಹಲವಾರು ಲೌಖಿಕ ಕಥನಗಳನ್ನು ಹಾಡಿದರು ಕೂಡ ಕಿನ್ನರಿ ಜೋಗಿಗಳಿಗೂ ಮತ್ತು ಗೊಂದಳಿಯವರಿಗೂ ಹಾಡುವುದರಲ್ಲಿ, ಹಾಡಿನ ನಡುವೆ ಬಿಡಿ ಬಿಡಿಯಾಗಿ ಕಥೆ ಹೇಳುವುದರಲ್ಲಿ ಮತ್ತು ವಾದ್ಯಗಳಲ್ಲಿ ವ್ಯತ್ಯಾಸಗಳು ಕಂಡುಬರುತ್ತವೆ. ಕಿನ್ನರಿ ಜೋಗಿಗಳು ಹಾಡುವ ಹಾಡಿನಲ್ಲಿ ಸಾಹಿತ್ಯ ಸ್ಪಷ್ಟತೆಯಿಂದ ಇರುವುದಿಲ್ಲ. ಶ್ರುತಿಯಲ್ಲಿ ಸ್ವರದಲ್ಲಿ ಹಾಡುವುದಿಲ್ಲ. ತಾಳ-ಲಯಕ್ಕಾಗಿ ಕೇವಲ ಕಿನ್ನರಿ ವಾದ್ಯವನ್ನು ಬಳಸುತ್ತಾರೆ. ಆದರೆ ಗೊಂದಳಿ ಸಮುದಾಯದ ಕಲಾವಿದರು ಹಾಡುವ ಹಾಡಿನಲ್ಲಿ ಸ್ಪಷ್ಟತೆ ಇರುತ್ತದೆ.

ಗೊಂದಳ ಸಮುದಾಯದವರ ಮುಖ್ಯ ವೃತ್ತಿ ಎಂದರೆ ಗೊಂದಲ ಹಾಡುವುದು ಇದೊಂದು ಆರಾಧನ ಕ್ರಮವಾಗಿದೆ.

ಗೊಂದಳ ಎನ್ನುವ ಆಚರಣೆಯಿಂದ 'ಗೊಂದಲಿಗ' ಎನ್ನುವ ಪದ ಈ ಸಮುದಾಯಕ್ಕೆ ಬಂದಿರಬಹುದು ಎಂದು ತಿಳಿದುಬರುತ್ತದೆ. ಗೊಂದಲ ಹಾಕುವ ಆಚರಣೆಯು ಕ್ರಿ.ಶ. ೬ ಮತ್ತು ೭ನೇ ಶತಮಾನದಲ್ಲಿ ಇತ್ತು ಎಂಬುದರ ಬಗ್ಗೆ ಮಾಹಿತಿ ದೊರೆಯುತ್ತದೆ. ಆಗಿನ ಅರಸರಾದ ಕದಂಬರು ಗೊಂದಲ ಹಾರಿಸುತ್ತಿದ್ದರೆಂಬ ಬಗ್ಗೆ ಉಲ್ಲೇಖಗಳಿವೆ. ಕದಂಬ ಅರಸರು ತುಳಜಾಪುರದ ಅಂಬಾಭವಾನಿಯ ಭಕ್ತರಾಗಿದ್ದರು. ಈ ದೇವತೆಯ ಉತ್ಸವದಲ್ಲಿ ಅವರು ಗೊಂದಲ ಹಾಕಿಸುವುದು ಎಂದು ತಿಳಿದುಬರುತ್ತದೆ.

ಈ ಗೊಂದಲ ಪೂಜೆಯನ್ನು ಅಂಬಾಭವಾನಿಯ ಮತ್ತು ಯಲ್ಲಮ್ಮ ಭಕ್ತರಾದವರು ಮಾಡುತ್ತಾರೆ. ಗೊಂದಲಿ ಕಲಾವಿದರು. ಆಮಂತ್ರಿಸಿದವರ ಮನೆಗೆ ಹೋಗಿ ಅಥವಾ ಭಿಕ್ಷಾವೃತ್ತಿಯ ಸಂದರ್ಭದಲ್ಲಿ ಭಕ್ತರ ಆಮಂತ್ರಣದ ಮೇರೆಗೆ ಈ ಗೊಂದಲ ಹಾಕುತ್ತಾರೆ. ಮದುವೆ, ಮುಂಜಿ, ನವರಾತ್ರಿ, ದೀಪಾವಳಿ ಇನ್ನು ಮುಂತಾದ ಕಾರ್ಯಕ್ರಮಗಳಂದು ಆಮಂತ್ರಿತ ಗೊಂದಳಿ ಕಲಾವಿದರಿಂದ ಗೊಂದಳಿ ಪೂಜೆ ನಡೆಸುತ್ತಾರೆ. ಗೊಂದಲಿ ಪೂಜೆಯ ದಿನದಂದು ಅವರು ತಮ್ಮ ಪದ್ದತಿಯಂತೆ ದೇವಿಯ ಪೂಜೆಯ ಮಾಡಿ ಆರಂಭದಲ್ಲಿ ದೇವಿಯ ಹಾಡನ್ನು ಹಾಡಿದ ನಂತರ ತಮಗೆ ಬರುವ ಹಲವಾರು ಲೌಕಿಕ ಕಥೆಗಳಾದ ೧) ಶೀಲಾವತಿ ೨) ಲೋಹಿತ ಕುಮಾರ ೩) ಅರಣ್ಯಕುಮಾರ ೪) ಕುಮಾರರಾಮ ೫) ರಾಜವೀರ ಪರಾಕ್ರಮ ೬) ವಿಷ್ಣಾವತಿ ೭) ಸತಿ ಶಿವಲೋಚನ ೮) ಲಕ್ಷಾಪತಿ ಮಹಾರಾಜ ೯) ಸೋಮಶೇಖರ-ಚಿತ್ರಶೇಖರ ೧೦) ರೇಣುಕಾ ಯಲ್ಲಮ್ಮ ಕಥೆ ಬಾಳ ಭಿಕ್ಷುಕನ ಕಥೆ ೧೨) ಗುಣಸಾಗರಿಯ ಕಥೆ ೧೩) ಜಯರಾಣಿ ಕಥೆ ೧೪) ಜಯರಾಣಿ ಕಥೆ ೧೫) ಶಿವ ಶಂಕರನ ಕಥೆ ೧೬) ಬಾಳ ಪಡಿಯ ಕಥೆ ೧೭) ಚೂಡಾಮಣಿ ಕಥೆ ೧೮) ನ-ನೀಳರ ಕಥೆ ೧೯) ಚಂದ್ರ ಚೂಡಾಮಣಿ ಕಥೆ ೨೦) ಬಂಗಾರುಗಿರಿ ಭಾವನ ಕಥೆ ೨೧) ಚೂಡಾಮಣಿ ಕಥೆ ೨೨) ಬಸವಕುಮಾರನ

ಕಥೆ ೨೩) ಏಳುಕೊಳದ ರಾಕ್ಷಸರ ಕಥೆ ೨೩) ತಾತಕುಮಾರನ ಕಥೆ ೨೪) ಬಲವಂತ್ ಬಸವಂತರ ಕಥೆ ೨೫) ಪಾಂಡು ದತ್ತಾಜಿಯ ಕಥೆ ೨೬) ಶ್ರವಣಕುಮಾರನ ಕಥೆ ೨೭) ರಾಜಾ ಹರಿಶ್ಚಂದ್ರನ ಕಥೆ ೨೮) ಸಿರಿಯಾಳನ ಕಥೆ ೨೯) ಶುಕಿನಿ ಕುಮಾರನ ಕಥೆ ಸತಿ ಅನಸೂಯಾ ಕಥೆ, ಪ್ರೇಕ್ಷಕರಿಗೆ ಇವುಗಳಲ್ಲಿ ನಿಮಗೆ ಯಾವ ಕಥೆ ಇಷ್ಟ ಎಂದು ಕೇಳುತ್ತಾರೆ. ನಂತರ ಪ್ರೇಕ್ಷಕರು ಬಯಸಿದ ಕಥೆಗಳನ್ನು ಸುಶ್ರಾವ್ಯವಾಗಿ ಸುಮಧುರ ಕಂಠದಲ್ಲಿ ಹಾಡುತ್ತಾರೆ. ಒಂದೊಂದು ಕಥೆಗಳು ಸುಮಾರು ಒಂದೊಂದು ಹಿಡಿ ರಾತ್ರಿವರೆಗೆ ಹಾಡುತ್ತಾರೆ. ಒಂದೊಂದು ಕಥೆಗಳು ಸುಮಾರು ಒಂದೊಂದು ರಾತ್ರಿವರೆಗೆ ಹಾಡಿದರೆ ೩೦ ಕಥೆಗಳಿಗೆ ಸುಮಾರು ಮೂವತ್ತು ರಾತ್ರಿ ಬೇಕಾಗುತ್ತದೆ. ಏನು ಅಕ್ಷರ ಜ್ಞಾನವಿರದೆ ಅನಕ್ಷರಸ್ತರಾದ ಇವರು ಮೂವತ್ತು ರಾತ್ರಿಯವರೆಗೆ ಯಾವ ಪುಸ್ತಕವಿರದೆ ಕಂಠಪಾಠ ಹಾಡುತ್ತಾರೆಂದರೆ ಅದು ಸಾಮಾನ್ಯ ಮಾತಲ್ಲ. ಅವರು ದೇವಿಯ ಆರಾಧಕರಾಗಿರುವುದರಿಂದ ಸರಸ್ವತಿಯ ವರಪುತ್ರರೆ ಹೌದು. ಈ ಕಲಾವಿದರು ಹಿಡಿ ರಾತ್ರಿವರೆಗೆ ಕಥೆಗಳನ್ನು ಹಾಡೋದ್ರಿಂದ ಪ್ರೇಕ್ಷಕರಿಗೆ ಬೇಜಾರಾಗಿ ನಿದ್ದೆಗೆ ಜಾರಬಾರದೆಂದು ಹಲವಾರು ಉಪಕಥೆಗಳನ್ನು ಅಂದರೆ ಹಾಸ್ಯ ಕಥೆಗಳನ್ನು ಹಾಡುತ್ತಾರೆ ಇವು ಹೀಗಿವೆ.

೧) ಜಗಳಗಂಟಿ ಜಕ್ಕವ್ವ

೨) ಸಂತ ದಂಪತಿಗಳು

೩) ದುರಾಸೆಯ ಭಕ್ತ

೪) ಬಡವನ ಹಾಸ್ಯಕಥೆ

೫) ಜಂಗಮ ಸ್ವಾಮಿ ಕಥೆ

೬) ದಾಸಯ್ಯ ಜಂಗಮ ಕಥೆ ಮತ್ತು ಗಿಡ್ಡ ಬಾಳು ಕಥೆ ಇನ್ನು ಮುಂತಾದ ಕಥೆಗಳು

ಈ ಕಲಾವಿದರು ಗುರುಮುಖೇನ ಕಲಾವಿದರಿಂದ ಕೇಳುತ್ತ ಕೇಳುತ್ತ ಕಲಿಯುವುದೆ ಹೆಚ್ಚಾಗಿ ಕಂಡುಬರುತ್ತದೆ ಎಂದು ಹೇಳುತ್ತಾರೆ. (ಶಂಕ್ರಪ್ಪ ಗೊಂದಲಿ ಸಂಡೂರು)

ಗೊಂದಲಿ ಗಾಯಕರು ಒಂದು ರಾಗದಲ್ಲಿ ಕಥೆಯನ್ನು ಹಾಡಿನ ಮುಖಾಂತರ ಪ್ರಾರಂಭ ಮಾಡಿ ತಮ್ಮ ಧ್ವನಿಯ ಏರಿಳಿತದಲ್ಲೆ ಒಂಬತ್ತು ರಸಗಳನ್ನು ಉಪಯೋಗ ಮಾಡಿಕೊಂಡು ಹಾಡುತ್ತಾರೆ. ಈ ರೀತಿ ಹಾಡುವುದು ವಿಶೇಷ ಎಂತಲೂ ಹೇಳಬಹುದು. ಇವರು ಹಲವಾರು ಲೌಕಿಕ ಕಥೆಗಳು, ಹಾಸ್ಯಕಥೆಗಳು ಹಾಡುವುದರ ಜೊತೆಗೆ ಶಿಶುನಾಳ, ಕಡಕೋಳ ಮಡಿವಾಳಪ್ಪನವರ ತತ್ವಪದಗಳು, ಪುರಂದರ ದಾಸ, ಕನಕದಾಸರ ಪದಗಳು ಹಾಡುವುದು ಕಂಡುಬರುತ್ತದೆ.

ದೇವಿಯ ಹೆಸರಿನೊಂದಿಗೆ ಆಲಾಪನೆ ಶುರುಮಾಡಿ ನಂತರ ನಡುನಡುವೆ ಕಥೆಗಳನ್ನು ಹೇಳುವುದನ್ನು ಶುರುಮಾಡಿದರೆಂದರೆ ಗುಡುಗು–ಸಿಡಿಲಿನ ನಡುವೆ ತಂಪಾದ ಮಳೆ ಬಂದಂತೆ ಎನಿಸುತ್ತದೆ. ಅಂತ ಅದ್ಭುತ ಸಂಗೀತ ಗೊಂದಲಿಗರ ಸಂಗೀತ ಎಂದು ಹೇಳಬಹುದು. ಇವರು ಹೆಚ್ಚಾಗಿ ತಮ್ಮ ಸಂಗೀತದಲ್ಲಿ ಹಾಡುವಂತ ರಾಗಗಳು ಭೈರಾಗಿ, ಭೈರವ, ಪಟದೀಪ ಭೈರವ ರಾಗ, ಭೀಮ್‌ಪಲಾಸಿ, ಭೂಪ ಮತ್ತು ದುರ್ಗ ರಾಗ, ಭೈರವ ರಾಗಗಳು, ಕಾಫಿ ಇನ್ನೂ ಹಲವಾರು ರಾಗಗಳಲ್ಲಿ ಹಾಡುವುದು

ಕಂಡುಬಂದಿದೆ. ಅದೇ ರೀತಿಯಾಗಿ ದೀಪಚಂದಿ, ಕೆಹರವಾ ಮತ್ತು ದಾದ್ರ ತಾಳದಲ್ಲಿ ಹಾಡುವುದು ಕಂಡುಬರುತ್ತದೆ.

ಆದರೆ ಗೊಂದಳಿ ಸಮುದಾಯದ ಕಲಾವಿದರು ಯಾವುದೆ ಹಾರ್ಮೋನಿಯಂ ಸಹಾಯವಿಲ್ಲದೆ ಸರಿಯಾಗಿ ತಮ್ಮ ಧ್ವನಿಯ ಗುಣಧರ್ಮಕ್ಕನುಗುಣವಾಗಿ ಚೌಡಿಕೆ ಶ್ರುತಿಗೊಳಿಸಿ ಹಾಡುವುದು ಕಂಡುಬರುತ್ತದೆ. ನಾನು ಕ್ಷೇತ್ರಕಾರ್ಯಕ್ಕೆ ಹೋದ ಸಂದರ್ಭದಲ್ಲಿ ಗೊಂದಲಿಗರ ಶಂಕ್ರಪ್ಪ ಎಂಬ ಕಲಾವಿದ ಚೌಡಿಕೆ ವಾದ್ಯ ಶ್ರುತಿಗೊಳಿಸುತ್ತಿದ್ದ ಆ ಸಂದರ್ಭದಲ್ಲಿ ನಾನು ಕೇಳಿದೆ. ನೀವು ಅಷ್ಟೊಂದು ಸರಿಯಾಗಿ ಶ್ರುತಿಯ ಸಹಾಯವಿಲ್ಲದೆ ಹೇಗೆ ಚೌಡಿಕೆ ಶ್ರುತಿಗೊಳಿಸುತ್ತೀರಾ ಅಂತ ಕೇಳಿದೆ. ಅದಕ ಆ ಕಲಾವಿದ ಹೇಳಿದ, ನಾವು ಚೌಡಿಕೆ ಶ್ರುತಿ ಮಾಡ್ತವ್ರಿ ಒಂದೊಂದು ಸಲ ಸರಿಯಾಗಿ ಚೌಡಿಕೆ ಶ್ರುತಿಯಾಗಿರುತ್ತದೆ. ಒಂದೊಂದು ಸಲ ಆ ಚೌಡಕಿ ಶ್ರುತಿ ಎಲ್ಲಿರುತ್ತೋ ಅದೇ ಶ್ರುತಿಯಿಂದ ನಾವು ಹಾಡು ಪ್ರಾರಂಭ ಮಾಡ್ತಿವಿ ಅಂತ ಹೇಳಿದ. ನಾವು ನಮ್ಮ ಪಟ್ಟಿ ಬಿಟ್ಟು ಇನ್ನೊಂದು ಪಟ್ಟಿಗೆ ಹಾಡಿದರೆ ಧ್ವನಿ ಹಾಳಾಗುತ್ತೆ ಅಂತ ಯೋಚನೆ ಮಾಡ್ತಿನಿ. ಆದರೆ ಗೊಂದಳಿ ಸಮುದಾಯದ ಕಲಾವಿದರು ಆ ಚೌಡಿಕೆ ಶ್ರುತಿ ಎಲ್ಲಿರುತ್ತೊ ಅಲ್ಲಿಂದ ಹಾಡು ಪ್ರಾರಂಭ ಮಾಡುತ್ತಾರೆ ಎಂದರೆ ಅದು ಸಾಮಾನ್ಯ ಮಾತಲ್ಲ. ಅವರು ನಿಜವಾದ ಕಂಚಿನ ಕಂಠದ ಗಾಯಕರು ಎಂದರೆ ತಪ್ಪಾಗಲಾರದು.

**ಮೇಳ** : ಗೊಂದಲಿಗರ ಮೇಳದಲ್ಲಿ ಸಾಮಾನ್ಯವಾಗಿ ಮೂರು ಜನ ಕಲಾವಿದರು ಕಂಡುಬರುತ್ತಾರೆ. ಅದರಲ್ಲಿ ಒಬ್ಬ ಮುಖ್ಯ ಗಾಯಕ, ಇಬ್ಬರು ಸಹ ಗಾಯಕರು ಕಂಡುಬರುತ್ತಾರೆ. ಮುಖ್ಯಗಾಯಕನ ಕೈಯಲ್ಲಿ ಸಂಬಾಳ ವಾದ್ಯ ಹಿಡಿದುಕೊಂಡಿದ್ದು ಕಂಡುಬರುತ್ತದೆ. ಇನ್ನಿಬ್ಬರಲ್ಲಿ ಒಬ್ಬ ಚೌಡಿಕೆ ವಾದ್ಯ ಇನ್ನೋರ್ವ ಕಲಾವಿದ ತಾಳವನ್ನು ಹಿಡಿದುಕೊಂಡಿದ್ದು ಕಂಡುಬರುತ್ತದೆ. ಒಂದೊಂದು ವೇದಿಕೆಗಳಲ್ಲಿ ೫, ೬, ೭, ೮ ಜನ ಕಲಾವಿದರು ಇದ್ದದ್ದು ಕಂಡುಬರುತ್ತದೆ. ವೇದಿಕೆಗಳಿಗನುಗುಣವಾಗಿ ಹೆಚ್ಚು ಕಡಿಮೆ ಜನ ಕಂಡುಬರುತ್ತಾರೆ. ಉದಾ: ನವರಾತ್ರಿ, ದೀಪಾವಳಿ, ಮದುವೆ ಮುಂಜಿಯ ಗೊಂದಲ ಹಾಕುವ ಕಾರ್ಯಕ್ರಮಗಳಲ್ಲಿ ಮತ್ತು ಹಲವಾರು ಸಂಘಸಂಸ್ಥೆಯವರು ನಡೆಸುವ ಕಾರ್ಯಕ್ರಮಗಳಲ್ಲಿ ಮೂರು ಜನ ಕಲಾವಿದರು ಕಂಡುಬರುತ್ತಾರೆ. ನಮ್ಮ ನಾಡಿನ ಹೆಮ್ಮೆಯ ಉತ್ಸವಗಳಾದ ಹಂಪಿ ಉತ್ಸವ, ಮೈಸೂರು ದಸರದಂತಹ ವೇದಿಕೆಗಳು ದೊಡ್ಡದಾಗಿರುವುದರಿಂದ ಅಲ್ಲಿ ಎಂಟೆಂಟು ಜನ ಕಲಾವಿದರು ಕಂಡುಬರುತ್ತಾರೆ. ಮೂರು ಮೂರು ಸಂಬಾಳ ಎರಡು ಚೌಡಿಕೆ ಮತ್ತು ತಾಳ ಬಾರಿಸುವ ಕಲಾವಿದರು ಕಂಡುಬರುತ್ತಾರೆ. ಈ ಮೇಳದವರು ಗೊಂದಲ ಹಾಕುವ ಪದ್ಧತಿ ಕುರಿತು ಮತ್ತು ಮೇಳದಲ್ಲಿರುವ ಜನಸಂಖ್ಯೆ ಕುರಿತು (ಬೋರಲಿಂಗಯ್ಯ ಹಿ.ಚಿ. ಅವರು ಬರೆದಿರುವ ಕರ್ನಾಟಕ ಜನಪದ ಕಲೆಗಳ ಕೋಶದಲ್ಲಿ ಪು.೮೫ರಲ್ಲಿ ಹೀಗೆ ಹೇಳಲಾಗಿದೆ.) "ಕವಡೆಗಳ ಮಾಲೆಯನ್ನು ಹಾಕಿಕೊಂಡು ದೀವಟಿಗೆ ಹಿಡಿದು ಗೊಂದಳ ಹಾಕಬೇಕು. ಎಲ್ಲಿ ಗೊಂದಳ ಹಾಕಬೇಕೋ ಆ ಸ್ಥಳದಲ್ಲಿರುವ ಎಲ್ಲರನ್ನು ಆಮಂತ್ರಿಸಬೇಕು. ಗೊಂದಳಕ್ಕೆ ದೀವಟಿಗೆ, ಕವಡೆಗಳ ಮಾಲೆ, ಮಾತೃವಾದ್ಯ, ತಾಳ, ಶಂಖ, ಮೃದಂಗ, ಚಪ್ಪಟೆ, ವೀಣೆ ಚಂಡೆ, ಮರಬ ಇತ್ಯಾದಿ ವಾದ್ಯಗಳಿರಬೇಕು. ಗೊಂದಲೀ ವಾದ್ಯದಲ್ಲಿ ಉತ್ತಮ, ಮಧ್ಯಮ ಹಾಗೂ ಕನಿಷ್ಠ ಹೀಗೆ ಮೂರು ಬೇಧಗಳಿವೆ. ಉತ್ತಮ ವೃಂದದಲ್ಲಿ

ಒಟ್ಟು ೩೨ ಮಂದಿ ಇರುತ್ತಾರೆ. ಮಧ್ಯಮ ವೃಂದದಲ್ಲಿ ಒಟ್ಟು ೧೬ ಮಂದಿ ಹಾಗೂ ಕನಿಷ್ಠ ವೃಂದದಲ್ಲಿ ೪ ಮಂದಿ ಇರುತ್ತಾರೆ. ಹೀಗೆ ವ್ಯಕ್ತಿಗಳ ಸಂಖ್ಯೆ ನಿರ್ದಿಷ್ಟವಿರುತ್ತದೆ. ನೃತ್ಯ ಹೇಗೆ ಮಾಡಬೇಕು ವಾದ್ಯಗಳನ್ನು ಯಾರು ಬಾರಿಸಬೇಕು ಇತ್ಯಾದಿಗಳ ಖಚಿತ ವಿವರಣೆಗಳು ಅಲ್ಲಿದೆ.

ಈ ಮೇಲಿನ ಹೇಳಿಕೆಗಳನ್ನು ಗಮನಿಸಿದಾಗ ಮತ್ತು ಪ್ರಸ್ತುತ ಕಾಲದಲ್ಲಿ ಗೊಂದಲಿಗರ ಗೊಂದಲ ಹಾಕುವ ಪದ್ಧತಿಯನ್ನು ಗಮನಿಸಿದಾಗ ಕವಡೆಗಳ ಮಾಲೆ ಹಾಕುವುದು, ದೀವಟಿಗೆ ಹಿಡಿಯುವುದು, ಎಲ್ಲಿ ಗೊಂದಳ ಹಾಕಬೇಕೋ ಆ ಸ್ಥಳದಲ್ಲಿರುವ ಎಲ್ಲ ಜನರನ್ನು ಕರೆಸಿ ಗೊಂದಲ ಹಾಕುವುದು ಈಗಲು ಕಂಡುಬರುತ್ತದೆ. ಆದರೆ ಕೆಲವು ವಾದ್ಯಗಳಾದ ಮೃದಂಗ ವಾದ್ಯ, ವೀಣೆ, ಚಂಡಿಕೆ, ತ್ರಿವಳಿ ಮುರಜ ವಾದ್ಯಗಳು ಕಂಡುಬರುವುದಿಲ್ಲ. ಅವುಗಳ ಬದಲಾಗಿ ಸಂಬಾಳ, ಚೌಡಿಕೆ ಮತ್ತು ತಾಳ ವಾದ್ಯಗಳು ಕಂಡುಬರುತ್ತವೆ. ಗೊಂದಲಿಗರ ಮೇಳದ ಹಾಡುಗಾರಿಕೆಯಲ್ಲಿ (ಉತ್ತಮ ವಾದ್ಯದಲ್ಲಿ ೩೨ ಜನ, ಮಧ್ಯಮದಲ್ಲಿ ೧೬ ಜನ ಕಂಡುಬರುವುದಿಲ್ಲ. ಕೇವಲ ಮೂರು ಜನ ಅಥವಾ ೭-೮ ಜಲ ಕಲಾವಿದರು ಮಾತ್ರ ಕಂಡುಬರುತ್ತಾರೆ.) ಬರುವ ಸಂಗೀತದ ಎಲ್ಲ ಅಂಶಗಳು ಕಂಡುಬರುತ್ತವೆ. ಧಾಟಿ, ವಾದ್ಯ ಸಂಗೀತ, ನೃತ್ಯ ಮತ್ತು ಕಥೆಯ ನಿರೂಪಣಾ ಶೈಲಿ ಕಂಡುಬರುತ್ತವೆ. ಈ ಮೇಳದಲ್ಲಿ ಮುಖ್ಯ ಹಾಡುಗಾರನ ಪಾತ್ರ ಬಹಳ ಮುಖ್ಯವಾಗಿರುತ್ತದೆ. ಅದೇ ತೆರನಾಗಿ ಹಿಮ್ಮೇಳ ಗಾಯಕನ ಪಾತ್ರ ಬಹಳ ಮುಖ್ಯವೆನಿಸುತ್ತದೆ. ಗೊಂದಲಿಗರ ಸಂಗೀತ/ಆಟ ಮುಮ್ಮೇಳಗಾಯಕ ಮತ್ತು ಹಿಮ್ಮೇಳ ಗಾಯಕನ ಮುಖಾಂತರ ಸಾಗುತ್ತದೆ. ಮುಮ್ಮೇಳ ಹಿಮ್ಮೇಳ ಗಾಯಕ ಒಂದು ರಾಗದಲ್ಲಿ ಬರುವ ವಾದಿ-ಸಂವಾದಿಗಳಿದ್ದಂತೆ. ಮುಮ್ಮೇಳ ಗಾಯಕವಾದಿಯಾದರೆ, ಹಿಮ್ಮೇಳ ಗಾಯಕ ಸಂವಾದಿ ಸ್ವರ ಇದ್ದಂತೆ. ವಿಶೇಷವೆಂದರೆ ಇಬ್ಬರೆ ಎಲ್ಲ ಪಾತ್ರಗಳನ್ನು ನಿಭಾಯಿಸುವುದು. ಆದರು ಕೂಡನು ಗೊಂದಲಿಗರ ಮೇಳದಲ್ಲಿ ಮುಖ್ಯ ಗಾಯಕ/ಕಥೆಗಾರನೇ ಪ್ರಮುಖವಾದ ವ್ಯಕ್ತಿ. ಆತ ಗಾಯಕ, ನಟ, ನಿರೂಪಕ, ವಾದಕ, ನರ್ತಕ, ಸೂತ್ರಧಾರ ಎಲ್ಲವು ಆಗಿರುತ್ತಾರೆ. ಆಗಂತ ಹಿಮ್ಮೇಳಗಾರನ ಪಾತ್ರ ಮುಖ್ಯವಲ್ಲವಂತಲ್ಲ. ಆತ ಚೌಡಿಕೆ ವಾದ್ಯವನ್ನು ನುಡಿಸುತ್ತ ಕೊನೆವರೆಗೂ ಮುಮ್ಮೇಳ ಗಾಯಕನಿಗೆ ಧ್ವನಿಯಾಗಿ ಇರುತ್ತಾನೆ. ಇವರ ಮೇಳದಲ್ಲಿ ಪ್ರಮುಖ ವಾದ್ಯಗಳೆಂದರೆ ಸಂಬಾಳ, ಚೌಡಿಕೆ ಮತ್ತು ತಾಳ ವಾದ್ಯ.

ಸಂಗೀತ ಕಛೇರಿ ಪ್ರಾರಂಭ ಮಾಡುವ ಮುಂಚೆ ಚೌಡಿಕೆ ವಾದ್ಯವನ್ನು ತಮ್ಮ ಧ್ವನಿಗನುಗುಣವಾಗಿ ಶ್ರುತಿಗೊಳಿಸಿ ನಂತರ ಚೌಡಿಕೆ ವಾದ್ಯದ ಶ್ರುತಿಗೆ ಸಂಬಾಳ ವಾದ್ಯವನ್ನು ಶ್ರುತಿಗೊಳಿಸಿ ಮುಖ್ಯ ಹಾಡುಗಾರ ದೇವಿಯ ನಾಮವನ್ನು ತೆಗೆದು ಶಾಂಬಾವಿsss ಅಂತ ಆಲಾಪನೆ ಮಾಡುತ್ತಾನೆ. ನಂತರ ಹಿಮ್ಮೇಳ ಗಾಯಕನು ಕೂಡ ಅಂಬಾsss ಎಂದು ಮುಖ್ಯಗಾಯಕನ ಆಲಾಪನೆಗೆ ಧ್ವನಿಗೂಡಿಸುವ ಕೆಲಸ ಮಾಡುತ್ತಾನೆ.

ಯಾವುದೇ ಕಾರ್ಯಕ್ರಮಕ್ಕೆ ಹೋದರು ಕೂಡನು ದೇವಿಯ ಸ್ತೋತ್ರದ ಮೂಲಕ ದೇವಿಯ ಹಾಡಿನೊಂದಿಗೆ ಪ್ರಾರಂಭ ಮಾಡಿ ನಂತರ ಹಲವಾರು ಕಥೆಗಳನ್ನು ಹಾಡುತ್ತಾರೆ. ಮುಖ್ಯಹಾಡುಗಾರ ಸ್ವತ ತಾನೆ ಸಂಬಾಳ ವಾದ್ಯವನ್ನು ನುಡಿಸುತ್ತ ಹಾಡುವುದು ವಿಶೇಷವಾಗಿ ಕಂಡುಬರುತ್ತದೆ. ಹಿಮ್ಮೇಳ ಗಾಯಕ ಚೌಡಿಕೆ ವಾದ್ಯವನ್ನು ನುಡಿಸುತ್ತ ಮುಖ್ಯ ಗಾಯಕನ ಹಾಡಿಗೆ ಧ್ವನಿಗೂಡಿಸುವ ಕೆಲಸ ಮಾಡುತ್ತಾನೆ.

## ಒಂದು ದೇವಿಯ ಹಾಡು

ರಾಗ: ಜೀವನ ಪುರಿ ತಾಳ: ಕೆಹರವಾ

ಮು.ಗಾ: ಮೊರೆ ಇಡುವೆ ಪಾದದಲ್ಲಿ ಅಂಬಾ ಭವಾನಿ

ಹಿ.ಗಾ : ಮೊರೆ ಇಡುವೆ ಪಾದದಲ್ಲಿ ಅಂಬಾ ಭವಾನಿ

ಮು.ಗಾ: ತಪ್ಪು ಒಪ್ಪುಗಳೆಲ್ಲವ ಮಹಾತಾಯಿ ನಿನ್ನ ಮಡಿಲಾಗ ಹಾಕಿಕೊಳ್ಳವ್ವ

ಹಿ.ಗಾ : ತಪ್ಪು ಒಪ್ಪುಗಳೆಲ್ಲವ ಮಹಾತಾಯಿ ನಿನ್ನ ಮಡಿಲಾಗ ಹಾಕಿಕೊಳ್ಳವ್ವ ೨ ಸಲ ಮಾತು ಯಾಕಂದ್ರೆ ಈ ನವರಾತ್ರಿ ಹಬ್ಬದೊಳಗೆ ಎಂಗೈತಿ ದೇವಿ ಚರಿತ್ರೆ ಅಂತ ಕೇಳಿದ್ರ ದೇವಿ ಪುರಾಣ ಓದಬೇಕೆನ್ನುವುದು ಶಾಸ್ತ್ರದ ನಿಯಮ

ಮು.ಗಾ: ಹಾಲು ಕೊಟ್ಟರು ನೀನೆ ನೀರು ಕೊಟ್ಟರು ನೀನೆ

ಹಿ.ಗಾ : ಹಾಲು ಕೊಟ್ಟರು ನೀನೆ ನೀರು ಕೊಟ್ಟರು ನೀನೆ

ಮು.ಗಾ: ಹೇ ನಿನ್ನ ಪ್ರಸಾದ ಎನ್ನುವೆ/ಮಹಾತಾಯಿ ನಿನ್ನ ಮಹಿಮೆಯ ನಾನು ಹಾಡುವೆ

ಹಿ.ಗಾ. : ಹೇ ನಿನ್ನ ಪ್ರಸಾದ ಎನ್ನುವೆ/ಮಹಾತಾಯಿ ನಿನ್ನ ಮಹಿಮೆಯ ನಾನು ಹಾಡುವೆ/೨

ಮು.ಗಾ: ಹೆ ಮೋರೆ ಹಿಡುವ ಪಾದದಲ್ಲಿ (ಹಿ.ಗಾ.) ಅಂಬಾಭವಾನಿ

ಹಿ.ಗಾ. : ಹೆ ಮೊರೆ ಪಾದದಲ್ಲಿ (ಹಿ.ಗಾ.) ತುಳಜಾಭವಾನಿ

ಮು.ಗಾ.: ತಪ್ಪು ವಪ್ಪುಗಳೆಲ್ಲವ ಮಹಾತಾಯಿ ನಿನ್ನ ಮಡಿಲಾಗ ಹಾಕಿಕೊಳ್ಳವ್ವ

ಹಿ.ಗಾ. : ತಪ್ಪು ವಪ್ಪುಗಳೆಲ್ಲವ ಮಹಾತಾಯಿ ನಿನ್ನ ಮಡಿಲಾಗ ಹಾಕಿಕೊಳ್ಳವ್ವ

ಮು.ಗಾ.: ನಿನ್ನ ಹೊರತು ನಮಗೆ ಅನ್ಯರ ಗೊಡವೆ ಇಲ್ಲ

ಹಿ.ಗಾ. : ನಿನ್ನ ಹೊರತು ನಮಗೆ ಅನ್ಯರ ಗೊಡವೆ ಇಲ್ಲ

ಮು.ಗಾ.: ಹೆ ಇಂದು ನಿನ್ನಲ್ಲಿ ಕೇಳುವೆ ಮಹಾತಾಯಿ ನಿನ್ನ ಮಡಿಲ ಕಂದಮ್ಮನಲ್ಲವೆ

ಹಿ.ಗಾ. : ಹೆ ಇಂದು ನಿನ್ನಲ್ಲಿ ಕೇಳುವೆ ಮಹಾತಾಯಿ ನಿನ್ನ ಮಡಿಲ ಕಂದಮ್ಮನಲ್ಲವೆ

ಮು.ಗಾ.: ನಾವುಣ್ಣೊ ಗಂಜಿ ಅಂಬಲಿ ನೈವೇದ್ಯ ತರುವೆವು ತಾಯಿ

ಹಿ.ಗಾ. : ನಾವುಣ್ಣೊ ಗಂಜಿ ಅಂಬಲಿ ನೈವೇದ್ಯ ತರುವೆವು ತಾಯಿ

ಮು.ಗಾ.: ಹೆ ಸ್ವಿಕರಿಸಿ ಹರಸೆ ನಮ್ಮವ ನಾವು ತಿನ್ನೊ ತುತ್ತು ನಿನ್ನ ಕರುಣೆಯ ಕಣವ್ವ

ಹಿ.ಗಾ. : ಹೆ ಸ್ವಿಕರಿ ಹರಸೆ ನಮ್ಮವ ನಾವು ತಿನ್ನೊ ತುತ್ತು ನಿನ್ನ ಕರುಣೆಯ ಕಣವ

ಈ ಮೇಲಿರುವ ದೇವಿಯ ಕುರಿತು ಹಾಡು ಜೀವನಪೂರಿ ರಾಗದಲ್ಲಿದ್ದು ಭಜನ ತಾಳವಾಗಿರುತ್ತದೆ. ಸಂಗೀತ ಕಲಿಯದಿದ್ದರು ಬಹಳ ಅದ್ಭುತವಾಗಿ ಸ್ಪಷ್ಟವಾಗಿ ಸಾಮಾನ್ಯ ಜನರಿಗೂ ತಿಳಿಯುವಂತೆ ಹಾಡಿದ್ದಾರೆ. ಹಾಡಿನ ಪ್ರಾರಂಭದಲ್ಲಿ ಮುಖ್ಯ ಗಾಯಕ ಹಾಡುತ್ತಾನೆ. ಅನಂತರ ಅದೆ ಸಾಲನ್ನು ಹಿಮ್ಮೇಳಗಾಯಕ ಬಹಳ ಸುಶ್ರಾವ್ಯವಾಗಿ ಹಾಡುತ್ತಾನೆ. ಮುಮ್ಮೇಳ ಮತ್ತು ಹಿಮ್ಮೇಳ ಗಾಯಕರು ಹಾಡುವುದನ್ನು ನೋಡಿದರೆ ಹಳ್ಳಿಯಲ್ಲಿ ಭಜನೆ ಸಂಗೀತ, ಡೊಳ್ಳಿನ ಪದಗಳು, ಸೋಬಾನ ಪದಗಳು, ಕಿನ್ನರಿ ಹಾಡುಗಳು ಮತ್ತು ದೊಡ್ಡಾಟ ಹಾಡುಗಳನ್ನು ಹೋಲುತ್ತವೆ. ಶಾಸ್ತ್ರೀಯ ಸಂಗೀತ ಮತ್ತು ಸುಗಮ ಸಂಗೀತದಲ್ಲಿ ಹಾಡುವವರು ಬೇರೆ ವಾದ್ಯಗಳು, ತಂಬೂರಿಗಳು ನುಡಿಸುವ ಬೇರೆ ಬೇರೆಯಾಗಿ ಕಲಾವಿದರು ಕಂಡುಬರುತ್ತಾರೆ. ವಾದ್ಯಗಳನ್ನು ನುಡಿಸಿಕೊಂಡು ಹಾಡುವುದು ತುಂಬ ಕಷ್ಟಕರವಾದಂತ ವಿಷಯವಾಗಿದೆ. ಅದರಲ್ಲಿ ಗೊಂದಲಿಗ ಸಮುದಾಯದ ಕಲಾವಿದರು ಸಂಬಾಳ ವಾದ್ಯವನ್ನು ನುಡಿಸುತ್ತ ಅದರಲ್ಲಿ ವಿಶೇಷವಾಗಿ ತಾಳದಲ್ಲಿ ಲಯಕಾರಿ ಮಾಡುತ್ತ ಹಾಡುವುದೆಂದರೆ ಅದು ಸಾಮಾನ್ಯ ಮಾತಲ್ಲ ಈ ರೀತಿ ವಾದ್ಯವನ್ನು ನುಡಿಸುತ್ತ ಹಾಡುವ ಗೊಂದಲಿ ಕಲಾವಿದರು ನಿಜವಾದ ಜ್ಞಾನಿಗಳು ಪಂಡಿತರೆ ಹೌದು.

**ದೇವಿ ಹಾಡು**

**ರಾಗ:** ಬೈರವಿ **ತಾಳ:** ಭಜನೆ

ಮು.ಗಾ.: ಕಾಳಿಕಾದೇವಿ ಕೂಳ ದೈತರ ಸೀಳಿ ಶೌರ್ಯವ ತಾಳದಿ

ಹಿ.ಗಾ. : ಕಾಳಿಕಾದೇವಿ ಕೂಳ ದೈತರ ಸೀಳಿ ಶೌರ್ಯವ ತಾಳದಿ

ಮು.ಗಾ.: ಸೀಳಿ ಶೌರ್ಯವ ತಾಳದಿsss

ಹಿ.ಗಾ. : ಅಂಬಾsssss

ಮು.ಗಾ.: ಕುಳ ಅಸುರರ ಬಿಂಕವ ಮುರದೆ

ಮು.ಹಿ.ಗಾ. : ಕಾಳೀಕಾದೇವಿ ಕುಳ ದೈತರ

ಮು.ಗಾ.: ರಕ್ತ ಬೀಜನ ಶಿರವನು ಅರದ್ದೆ

ಹಿ.ಗಾ. : ರಕ್ತ ಬೀಜನ ಶಿರವನು ಅರದ್ದೆ

ಮು.ಗಾ.: ಆsssss (ಹಿ.ಗಾ.) ಶಾಂಬವಿssss ಅಂಬಾ

ಮು.ಗಾ.: ಶಕ್ತಿನಾಮವೆ, ನಿ ಪಡದೆss

ಹಿ.ಗಾ. : ಕೀರ್ತಿಲಿಂದ ರಕಸ ರಾಶಿಯ ಜಗದಿ ಮೆರೆಯುತ ನೀ ಮೇರೆದೆ

ಮು.ಗಾ.: ಚಂಡ ಮುಂಡರ ರುಂಡವು ಕಡದ್ಯೆ (ತೆರದೆ)

ಮು.ಗಾ.: ಶಾಂಬವಿss ನರನಾರಯಣಿ ಆದಿಶಕ್ತಿ ಅಂಬಾಭವಾನಿಯ

ಮು.ಗಾ.: ಚಂಡ ಮುಂಡರ ರುಂಡವು ತೆರದೈ ಚಂದಿ ನಾಮ ನೀ ಪಡದೆ

ಮು.ಗಾ.: ಚಂಡಿ ಚಾಮುಂಡಿ ಮಂಡಳೇಶ್ವರಿ
ಬಂಡ ಅಸುರರ ಬಿಂಕ ಮುರದೆ ಅಂಬಾ

ಹಿ.ಗಾ. : ಕಾಳಿಕಾದೇವಿ ಕುಳ ದೈತರ

ಈ ಮೇಲಿರುವ ದೇವಿಯ ಹಾಡು ರಾಗ ಬೈರವಿಯಲ್ಲಿದ್ದು ತಾಳ ಭಜನ ತಾಳದಲ್ಲಿ ಹಾಡಲಾಗುತ್ತದೆ. ಶಾಸ್ತ್ರೀಯ ಸಂಗೀತದಲ್ಲಿ ಬಯೊಲ ಎಂದರೆ ಕಲ್ಪನೆ ಎಂದು ಕರೆಯುತ್ತೇವೆ ಶಾಸ್ತ್ರೀಯ ಸಂಗೀತ ಗಾಯಕ ಶಾಸ್ತ್ರೀಯವಾಗಿ ಹಾಡುತ್ತ ಅದೆ ರಾಗದಲ್ಲಿ ವಿವಿಧ ಆಲಾಪನೆಯಲ್ಲಿ ವಿಸ್ತಾರ ಮಾಡುವುದು ಕಂಡುಬರುತ್ತದೆ. ಕಲಿತವರು ವಿಸ್ತಾರ ಮಾಡಿ ಹಾಡುವುದರಲ್ಲಿ ಏನು ವಿಶೇಷತೆ ಕಂಡುಬರುವುದಿಲ್ಲ. ಇವರಿಗೆ ನಾವು ಪಂಡಿತರಂತೇಳಿ ಬಿರುದನ್ನು ಕೊಡುತ್ತೇವೆ. ಆದರೆ ಯಾವುದೆ ಶಾಸ್ತ್ರೀಯ ಸಂಗೀತ ಅಭ್ಯಾಸ ಮಾಡದೇನೆ ಆ ಪರಿಶುದ್ಧ ರಾಗದಲ್ಲಿ ಒಂದು ಸಾಹಿತ್ಯವನ್ನು ತೆಗೆದು ಎಲ್ಲವೂ ಅಪಶ್ರುತಿಯಾಗದಂತೆ ವಿವಿಧ ರೀತಿಯಲ್ಲಿ ಬದಲಾವಣೆ ಮಾಡಿ ಹಾಡುತ್ತಾರೆಂದರೆ ಇವರು ನಿಜವಾದ ಸರಸ್ವತಿಯ ಪುತ್ರರು ಮತ್ತು ಪಂಡಿತರು ಕೂಡ ಹೌದು. ಹೀಗೆ ಪ್ರಾರಂಭದಲ್ಲಿ ಗೊಂದಲ ಪೂಜೆ ಮುಗಿದ ನಂತರ ಈ ರೀತಿಯಾಗಿ ದೇವಿಯ ಸ್ತೋತ್ರ ಹಾಡುಗಳನ್ನು ಹಾಡಿ ನಂತರ ಹಲವಾರು ಲೌಕಿಕ ಕಥೆಗಳನ್ನು ಹಾಡುತ್ತಾರೆ.

**ದೇವಿಯ ಕುರಿತು ಹಾಡು ಮತ್ತು ಕಥೆಯ ಒಂದು ಸನ್ನಿವೇಶ**

**ರಾಗ:** ಭೈರವ **ತಾಳ:** ದೀಪಚಂದಿ

ಮು.ಗಾ. : ಜಗದ ಕರ್ತನ ರಾಣಿ ಜಗದಂಬ
ಜಗ ಉಳಿಯಲಿಕೆ ಇಡಸಿ ಬಂದಾಳೋ ಬಿದರಿನ ಕೊಂಬ

ಹಿ.ಗಾ. : ಜಗದ ಕರ್ತನ ರಾಣಿ ಜಗದಂಬಾ ಬಂದಾಳೋ ಬಿದರಿನ ಕೊಂಬ
ಬಗ ಉಳಿಯಲಿಕೆ ಇಡಸಿ ಬಂದಳು ಬಿದರಿನಾ ಕೊಂಬ

ಮು.ಗಾ. : ಆ ಜಗದ ಕರ್ತನ ಜಗದ ಕರ್ತನ ರಾಣಿ ಜಗದಂಬಾ
ಜಗ ಉಳಿಯಲಿಕೆ ಇಡಸಿ ಬಂದಾಳೊ ಬಿದರಿನ ಕೊಂಬ

ಹಿ.ಗಾ. : ಜಗ ಉಳಿಯಲಿಕೆ ಇಡಸಿ ಬಂದಾಳೊ ಬಿದರಿನ ಕೊಂಬ

**ಕಥೆ**

ಮುಮ್ಮೇಳ : ಆದಿಶಕ್ತಿ ಜಗನ್ಮಾತೆ ಜಗದಂಬಾ, ಆ ತಾಯಿ ಬರುವಾಗ ಆ ದಿನ ಏನಾಗುತ್ತಿತ್ತು.

ಹಿಮ್ಮೇಳ : ಏನಾಗುತ್ತಿತ್ತು ಎಪ್ಪು

ಹಾಡು

ಮು.ಗಾ.ಹಾ. : ಆ ಗುಡಗ ಸಿಡಿಲಿನ ಹೆಚ್ಚಿನರ್ಭಟ (೨)
ನೀ ಬರುವಾಗ ಅಳತೆ ಮೀರಿತು ಜಗದ ಬೊಂಬಾಟ

ಹಿ.ಗಾ.ಹಾ. : ಏ ಗುಡಗ ಸಿಡಿಲಿನ ಹೆಚ್ಚಿನರ್ಭಟ
ನೀ ಬರುವಾಗ ಅಳತೆ ಮೀರಿತು ಜಗದ ಬೊಂಬಾಟ

ಮು.ಗಾ.ಹಾ. : ಏ ಸತ್ಯವೆಂಬುದು ಒಂದೆ ಉಳಸಿsss
ಆ ಸತ್ಯವೆಂಬುದು ಒಂದೆ ಉಳಸಿss
ಭುವನವೆ ಕೈಲಾಸ ಅನಸಿ

ಹಿ.ಗಾ.ಹಾ. : ಜಗದ ಕರ್ತನ ರಾಣಿ ಜಗದಂಬಾ ಜಗ ಉರಿಯಲಿಕೆ ಬನಸಿ ಬಂದಳು ಬಿದಿರಿನ ಕೊಂಬ (೨ ಸಲ)

ಮು.ಗಾ.ಹಾ. : ಆ ಏಳು ಮಂದಿ ಅಕ್ಕತಂಗೆರಾ

ಹಿ.ಗಾ. ಮಾತು: ಆ ಏಳುಮಂದಿ ಅಕ್ಕತಂಗೆರು ಯಾರ್‍ಯಾರಪಾ?

ಮು.ಗಾ.ಕಥೆ : ಈ ಜಗದಮ್ಮನ ಶಕ್ತಿ ವಿಚಾರ ಇವತ್ತಿನ ದಿವಸ ನಾವು ನೀವು ಮಾಡಿದ್ದಾ ಆದ್ರ (ಹಿ.ಗಾ.) ಹಾದ್ರೆಪಾ

ಮು.ಗಾ.ಕಥೆ : ಜಗದ ಮನೋವರ್ಣನೆ ನೋಡಿದ್ರಾ ಕಣ್ಣಿಗೆ ಕಾಣ್ತಾಳ ಇಕೆ ಹೆಣ್ಣಾದಳಂತೇಳಿ

ಹಿ.ಗಾ. : ಹೌದ್ರೆಪ್ಪಾ

ಮು.ಗಾ.ಕಥೆ : ಆದ್ರೆ ಆದಿ ಜಗದಂಬಾನ ಮೇಲೆ ಇರುವಂತ ಶಕ್ತಿ ವಿಚಾರ ಮಾಡಿದ್ರೆ

ಹಿ.ಗಾ. : ಹಾ. ಹಾ.

ಮು.ಗಾ.ಕ. : ಗಂಡಾಗಿ ನಿಂದ್ರತಾಳೊ, ಹೌದಲ್ಲ ?

ಹಿ.ಗಾ. : ಹೌದ್ರೆಪಾ

ಮು.ಗಾ.ಕಥೆ : ಹರ ಹರಿ ಬ್ರಹ್ಮಾದಿಗಳಿಗೂ ಮಿರಿದಂತಾಗಿ ಆ ಶಕ್ತಿ ಅವತಾರದಕಿ ಆ ಜಗದಂಬಾ

ಹಿ.ಗಾ. : ಹೌದು

ಮು.ಗಾ.ಕಥೆ : ಆ ಏಳು ಮಂದಿ ಅಕ್ಕ ತಂಗಿ ಯಾರ್‍ಯಾರು ?

ಹಿ.ಗಾ. : ಅಪ್ಪಾ ಯಾರ್‍ಯಾರು

ಮು.ಗಾ.ಕ : ಕಾಲಜ್ಞಾನದಲ್ಲಿ ಇರುವಂತ ನುಡಿಗಳು ಇವೆಲ್ಲ

ಹಿ.ಗಾ. : ಹೌದ್ರಿ

ಮು.ಗಾ.ಹಾ. : ಅದಕ ಆ ಏಳು ಮಂದಿ ಅಕ್ಕ ತಂಗೇರಾ ಅವರ ಹೆಸರಾ ಸಾರಿ ಹೇಳುತೇವ್ರಿ ಕೇಳಿ ಬಲ್ಲವರಾ

ಹಿ.ಗಾ.ಹಾ. : ಹೆ. ಏಳು ಮಂದಿ ಅಕ್ಕ ತಂಗೆರಾ ಅವರವರ ಹೆಸರಾ ಸಾರಿ ಹೇಳತೇನ್ರಿ ಕೇಳ್ರಿ ಬಲ್ಲವರಾ

ಮು.ಗಾ.ಹಾ. : ಹೆ. ಕವಡಿ ಚಂಡಿ ಮಾರುತಿಯವರ ಕಾಳಲಸುವಿ ಭಾರತೀಯರ

ಹಿ.ಗಾ.ಹಾ. : ಹೆ ಕವಡಿ ಚಂಡಿ ಮಾರುತಿಯವರ ಕಾಳಲಸುವಿ ಭಾರತೀಯರ

ಮು.ಗಾ.ಹಾ. : ಹೆ ಮಿರಿತಾ ದುರಗಮ್ಮನವರ

ಮು.ಗಾ.ಕಥೆ : ಆ ದುರ್ಗದೇವಿ ಬಿಟ್ರೆ ಮತ್ತೊಬ್ರು ಯಾರು ಇಲ್ಲ
ಆರನೆ ಅಷ್ಟು ಮಂದಿ ಅವರಲಾರದರೆ ತುಳಜಾಭವಾನಿ

ಮು.ಗಾ.ಹಾ : ಆsss ಮೀರಿಲಾ ದುರುಗಮ್ಮನವರಾss
ಏಳ ಮಂದಿಗೆ ಏಳ ಹೆಸರಾ

ಹಿ.ಗಾ.ಹಾ. : ಜಗದ ಕರ್ತಾನ ರಾಣಿ ಜಗದಂಬಾ ಜಗ ಉಳಿಯಲಿರೆ ಇಡಿಸಿ ಬಂದಳು ಬಿದರಿನಾ ಕೊಂಬ

ಮು.ಗಾ.ಹಾ. : ಏ ಕಾಲಜ್ಞಾನದ ಕಡಿಯ ಆಟಕ್ಕೆ ಕಾಳಮ್ಮ ತಾಯಿ ಜಂಟಳನ್ನ ಕರ್ಮ ಸುಡುವುದಕೆ

ಈ ಮೇಲಿನ ದೇವಿಯ ಕುರಿತು ಇರುವ ಕಥೆ ಹಾಡು ಭೈರವ ರಾಗದಲ್ಲಿದ್ದು, ದೀಪಚಂದಿ ತಾಳದಲ್ಲಿದೆ.

ಪ್ರಾರಂಭದಲ್ಲಿದ್ದು ಹಾಡು ನಂತರ ಮುಮ್ಮೇಳ ಮತ್ತು ಹಿಮ್ಮೇಳ ಗಾಯನ ನಡುವಿನ ದೇವಿಯ ಕಥೆಯ ಸಂಭಾಷಣೆ ನೋಡಿದರೆ ಕರ್ನಾಟಕದ ರಂಗಭೂಮಿಯ ಕಲೆಗಳಾದ ದೊಡ್ಡಾಟ ಸಣ್ಣಾಟಗಳನ್ನು ಹೋಲುವಂತಿದ್ದು ಸ್ವಲ್ಪ ವ್ಯತ್ಯಾಸ ಕಂಡುಬರುತ್ತದೆ. ದೊಡ್ಡಾಟದಲ್ಲಿ ಒಂದೊಂದು ಪಾತ್ರಕ್ಕೆ ಒಬ್ಬೊಬ್ಬ ಕಲಾವಿದನಿರುತ್ತಾನೆ. ಮತ್ತು ಸಂಗೀತ ಬಳಗದಲ್ಲಿಯೂ ಕೂಡ ಹಾಡುಗಾರ ಬೇರೆ, ವಾದ್ಯ ನುಡಿಸುವ ಕಲಾವಿದರೆಂದರೆ ಮತ್ತು ತಾಳ ನುಡಿಸುವ ಕಲಾವಿದರು ಬೇರೆ ಬೇರೆ ಕಂಡುಬರುತ್ತಾರೆ. ಆದರೆ ಗೊಂದಲಿಗ ಸಂಗೀತ ಮೇಳ ಅಥವಾ ಆಟದಲ್ಲಿ ಮುಖ್ಯ ಗಾಯಕ ಒಬ್ಬನೆ ಎಲ್ಲ ಪಾತ್ರಗಳನ್ನು ಮಾಡುವುದಲ್ಲದೆ ಹಾಡುಗಾರಿಕೆ, ವಾದ್ಯ ನುಡಿಸುವುದು ಮತ್ತು ನಟನೆ ಮಾಡುವುದು ಕಂಡುಬರುತ್ತದೆ. ಆದಕಾರಣ ಗೊಂದಲಿಗರು ಪ್ರಸ್ತುತಪಡಿಸುವ ಎಲ್ಲ ಕಥೆಗಳಿಗೆ ಗೊಂದಲಿಗರ ಆಟಗಳೆಂದೆ ಹೆಸರಿಸಿದ್ದಾರೆ.

ಗೊಂದಲಿಗರು ಹಾಡುವ ಹಾಡುಗಾರಿಕೆಯ ಸಾಹಿತ್ಯ ಕಾವ್ಯಾತ್ಮಕವಾದಲ್ಲ. ಛಂದಸ್ಸುಗಳ ಗಂಧವಿರುವುದಿಲ್ಲ. ತುಂಬ ಸರಳ ರಚನೆಗಳಾಗಿರುವುದರಿಂದ ಸಾಮಾನ್ಯ ಜನರಿಗೆ ಇವರ ಹಾಡು ಕಥೆಯ ಸಂಭಾಷಣೆ ಅರ್ಥವಾಗುತ್ತದೆ. ಇವರ ಹಾಡುಗಾರಿಕೆ ಮತ್ತು ಕಥೆಯಲ್ಲಿ ಚೌಡಿಕೆ ವಾದ್ಯದ

ಶ್ರುತಿ ಬಹಳ ಮುಖ್ಯವಾಗಿರುತ್ತದೆ. ಕಥೆಯ ಪ್ರಾರಂಭದಿಂದ ಹಿಡಿದು ಕೊನೆಯವರೆಗೂ ಮುಖ್ಯ ಹಾಡುಗಾರ ಆ ಚೌಡಿಕೆಯ ನಾದದ ಹಾದಿಯಲ್ಲೆ ತನ್ನ ಹಾಡು ಕಥೆಗಳೆಲ್ಲ ನಡೆಯುತ್ತದೆ. ಚೌಡಿಕೆ ಮತ್ತು ತಾಳ ವಾದ್ಯದಗಳ ಪಾತ್ರ ಮುಖ್ಯವಾಗಿದ್ದರೂ ಕೂಡ, ಮುಖ್ಯಗಾಯಕ ಹಾಡುವಾಗ ಮಾತ್ರ ಸಂಬಾಳ ವಾದ್ಯವನ್ನು ನುಡಿಸುತ್ತಾರೆ. ನಂತರ ಕಥೆ ಹೇಳುವಾಗ ಸಂಬಾಳ ವಾದ್ಯ ನುಡಿಸುವುದು ನಿಲ್ಲಿಸುತ್ತಾರೆ. ಬಹುಶಃ ಈ ರೀತಿ ಕಥೆ ಹೇಳುವಾಗ ಸಂಭಾಳ ವಾದ್ಯವನ್ನು ನುಡಿಸುವುದನ್ನು ನಿಲಿಸಲ್ಲಿಕ್ಕೆ ಒಂದು ಕಾರಣವಿದೆ. ತಾವು ಹೇಳುವ ಹಲವಾರು ಕಥೆಯ ಸಾರಂಶ ಜನರಿಗೆ ತಲುಪಲಿ ಎಂದು ನಿಲ್ಲಿಸಿ ಮತ್ತೆ ಹಾಡು ಪ್ರಾರಂಭ ಮಾಡಿದ ಮೇಲೆ ಸಂಬಾಳ ನುಡಿಸಲು ಪ್ರಾರಂಭ ಮಾಡುತ್ತಾರೆ.

**ಅಣ್ಣ ಭರಮರೆಡ್ಡಿ ತಮ್ಮ ತಿಮ್ಮರೆಡ್ಡಿ (ಕಥಾ ಪ್ರಸಂಗ)**

**ರಾಗ:** ಭೀಮಪಾಲಸಿ ಮಿಶ್ರ **ತಾಳ:** ಕೆಹರವಾ

ಈ ಕಥೆ ಹಾಡುವಂತದರಿ ಅಣ್ಣ-ತಮ್ಮಂದಿರು ಭರಮರೆಡ್ಡಿ-ತಿಮ್ಮರೆಡ್ಡಿ

ಮುಮ್ಮೇಳ : ಈ ಕಥೆ ಆಗಬೇಕೆಂದರೆ ಹೆಂಗ
ಹಿಮ್ಮೇಳ : ಹೆಂಗಾ?
ಮುಮ್ಮೇಳ : ಸಣ್ಣವನಾದ ತಿಮ್ಮರೆಡ್ಡಿ ಹೆಂಡತಿಯವರಿಂದ ಈ ಕಥೆ ಆಗಿರೋದೀರಿ
ಹಿಮ್ಮೇಳ : ಹಾ.. ಹಾ...
ಮುಮ್ಮೇಳ : ಅಂದರೆ ತಮ್ಮ ಕೈಯಿಂದ ಅಣ್ಣನ ಕೋಲೆ

**ಹಾಡು**

ಮು.ಗಾ. : ಬೆಳೆಂಬ ಪಟ್ಟಣದೊಳಗೆ
ಹಿ.ಗಾ. : ಎನ್ನ ದೇವಾಕಿsss
ಮು.ಗಾ. : ಏ ಇದ್ದರು ಜೋಡಿ ಅಣ್ಣ-ತಮ್ಮರು ಅವರು
ಹಿ.ಗಾ. : ಅಣ್ಣನ ಹೆಸರು ಭರಮರೆಡ್ಡಿ
ಮು.ಗಾ. : ಅಣ್ಣನ ಹೆಸರು ಭರಮರೆಡ್ಡಿ
ಹಿ.ಗಾ. : ಎನ್ನ ದೇವಾಕಿsss
ಮು.ಗಾ. : ತಮ್ಮ ಹೆಸರು ತಿಮ್ಮರೆಡ್ಡಿ
ಹಿ.ಗಾ. : ಎನ್ನ ದೇವಾಕಿsss
ಮು.ಗಾ. : ಆಡಿನ ಮರಿಯ ಇದ್ದಾಂಗ ಅವರು
ಹಿ.ಗಾ. : ಅರಣ್ಯ ಯನ್ನದೇವಾಕಿsss
ಮು.ಗಾ. : ಬಸವನ ಕೋಡು ಇದ್ದಾಂಗ ಅವರು
ಹಿ.ಗಾ. : ಅರಣ್ಯ ಯನ್ನದೇವಾಕಿsss

ಮು.ಗಾ. : ಅವರಿಗೆ ಭೇದ ಬಂದಿದ್ದಿಲ್ಲ

ಹಿ.ಗಾ. : ಅರಣ್ಯ ಯನ್ನದೇವಾಕಿsss

ಮು.ಗಾ. : ಬೆಳ್ಳೆಂಬ ಪಟ್ಟಣದೊಳಗೆ
ಅವರು ಜೋಡಿಲೆ ಅಣ್ಣತಮ್ಮರು

ಹಿ.ಗಾ. : ಎನ್ನ ದೇವಾಕಿsss

ಮು.ಗಾ. : ಹರಹರ ಮಹಾದೇವ

**ಕಥೆ**

ಮುಮ್ಮೇಳ : ಬೆಳ್ಳೆಂಬ ಪಟ್ಟಣದಲ್ಲಿ ಇದ್ದರಿ
ಜೋಡಿಲೆ ಮನಿ ಇದ್ದಂತೆ ಅಣ್ಣತಮ್ಮರು

ಹಿಮ್ಮೇಳ : ಆಹಾ

ಮುಮ್ಮೇಳ : ಒಂದು ಬಸವನ ಕೋಡು ಬೆಳದಂತೆ
ಬೆಳದಿದ್ದರಿ ಇಬ್ಬರು ಅಣ್ಣತಮ್ಮಂದಿರು

ಹಿಮ್ಮೇಳ : ಹೌದು

ಮುಮ್ಮೇಳ : ತಂದೆ ತಾಯಿ ಸತ್ತು ಹೋಗಿದ್ರು
ಅವರು ಹುಟ್ಟಿದ ಊರು ಬೆಳ್ಳೆಂಬ ಪಟ್ಟಣ ರೀ

ಹಿಮ್ಮೇಳ : ಆಹಾ

ಮುಮ್ಮೇಳ : ಈ ಬೆಳ್ಳೆಂಬ ಪಟ್ಟಣದಲ್ಲಿ ತಂದೆ ತಾಯಿ ಸಾಕಷ್ಟು
ಗಳಿಸಿಟ್ಟು ಹೋಗಿದ್ದರಿ ಇಬ್ಬರ ಮಕ್ಕಳ ಸುತ್ತು

ಹಿಮ್ಮೇಳ : ಆಹಾ

ಮುಮ್ಮೇಳ : ಸಣ್ಣವ ಇದ್ದ ತಮ್ಮ ತಿಮ್ಮರೆಡ್ಡಿ ಅನ್ನವ

ಹಿಮ್ಮೇಳ : ಆಹಾ

ಮುಮ್ಮೇಳ : ಅಣ್ಣನ ಕೈಯಾಗ ಅಧಿಕಾರ ನಡಿತಿತ್ತು ಭರಮರೆಡ್ಡಿ ಕೈಯಾಗ

ಹಿಮ್ಮೇಳ : ಹೌದು

ಮುಮ್ಮೇಳ : ಯಾಕ ತಮ್ಮ ನೋಡಬೇಕಾದರ ವಿದ್ಯ ಸಾಲಿವನ್ನು ಕಲಿತು

ಹಿಮ್ಮೇಳ : ಆಹಾ

ಮುಮ್ಮೇಳ : ದೊಡ್ಡವನು ಮಾಡಿದ ಅಣ್ಣಕುಂತು ತಮ್ಮಾಗ

ಹಿಮ್ಮೇಳ : ಆಹಾ

ಮುಮ್ಮೇಳ : ಅಣ್ಣ ಕುಂತು ತಮ್ಮನ ದೊಡ್ಡನವ ಮಾಡಿ

ಹಿಮ್ಮೇಳ : ಆಹಾ

ಮುಮ್ಮೇಳ : ಅವನಗಿ ಸಾಕಿ ಸಲುಹಿ ಜೋಪಾನ ಮಾಡಿ ವಿದ್ಯಾವಂತನನ್ನಾಗಿ ಮಾಡಿ

ಹಿಮ್ಮೇಳ : ಆಹಾ

ಮುಮ್ಮೇಳ : ಎಷ್ಟು ಅವರಿಗಿ ವಿದ್ಯಾ ಕಲಿಸಿದ್ದನು
ಅವರೇನು ದೇವರ ದಿಷ್ಟದಿಂದ

ಹಿಮ್ಮೇಳ : ಆಹಾ

ಮುಮ್ಮೇಳ : ಅವರ ಹಣೆಬರನೆ ಕೆಟ್ಟದಿತ್ತು

ಹಿಮ್ಮೇಳ : ಆಹಾ

ಮುಮ್ಮೇಳ : ಏನು ವಿದ್ಯಾದಲಿ ನೋಡಬೇಕಾದ್ರ ಬಲದಲ್ಲಿ
ಲಾಭ ಆಗಿಲ್ಲ ಅವರಿಗೆ

ಹಿಮ್ಮೇಳ : ಆಹಾ

ಮುಮ್ಮೇಳ : ಲಾಷ್ಟ ಅಣ್ಣನೆ ಕುರಿತು ತಮ್ಮ ಈ ವಿದ್ಯಾದಲ್ಲಿ ಏನು ಲಾಭವಿಲ್ಲ

ಹಿಮ್ಮೇಳ : ಆಹಾ

ಮುಮ್ಮೇಳ : ತಂದೆ ತಾಯಿ ಗಳಿಸಿಟ್ಟು ಹೋಗಿರುವ ರೊಕ್ಕ ರೂಪಾಯಿ

ಹಿಮ್ಮೇಳ : ಆಹಾ

ಮುಮ್ಮೇಳ : ತಂದೆ ಕಳಿಸಿಟ್ಟು ಹೋಗ್ಯಾರ ತಮ್ಮ ರೋಕ್ಕ ರೂಪಾಯಿ ಆಸ್ತಿ

ಹಿಮ್ಮೇಳ : ಆಹಾ

ಮುಮ್ಮೇಳ : ತಂದೆ ತಾಯಿ ಗಳಿಸಿಟ್ಟು ಹೋಗ್ಯಾರ ತಮ್ಮ ನೋಡಬೇಕಾದ್ರೆ ಆಸ್ತಿ

ಹಿಮ್ಮೇಳ : ಆಹಾ

ಮುಮ್ಮೇಳ : ೨೫ ಕುರಿಗಿ ಆಸ್ತಿ ಆದ ತಮ್ಮ
ಒಕ್ಕಲುತನ ಮಾಡಂತೇಳಿ

ಹಿಮ್ಮೇಳ : ಆಹಾ

ಮುಮ್ಮೇಳ : ಅಣ್ಣ ಕುಂತ ನೋಡಬೇಕಾದ್ರ ಎರಡೆತ್ತ
ತಮ್ಮನ ಸಲುವಾಗಿ ಹಾಲುಹೈನ ಸಲುವಾಗಿ
ಒಂದು ಎಮ್ಮಿನ ತಂದಿಟ್ಟ

ಹಿಮ್ಮೇಳ : ಆಹಾ

ಮುಮ್ಮೇಳ : ಆದೇ ತಮ್ಮ ಹಿರಿಯವ

ಮುಮ್ಮೇಳ : ಆಕಳದಂತ ಮನುಷ್ಯ ಬಸವನ ಕೋಡು ಇದ್ದಂತೆ
ಹಿರಿಯವ ಅಣ್ಣ ಭರಮರೆಡ್ಡಿ ನಾಲ್ಕು ಮಂದಿ ಬಳಗ
ಕುಂದ್ರೆದು ನಿಂದ್ರದು
ನಾಲ್ಕುಮಂದಿ ಬಳಗ ಏನ್ ನ್ಯಾಯ, ಸಾಲ, ಸಮದ
ಕೊಡುದು ತೊಗಲೋದು ಇತ್ತು ಅವನ ಕೈಯಾಗ

ಹಿಮ್ಮೇಳ : ಆಹಾ

ಮುಮ್ಮೇಳ : ಸಣ್ಣವ ತಿಮ್ಮರೆಡ್ಡಿ ಅನ್ನವ

ಹಿಮ್ಮೇಳ : ಆಹಾ

ಮುಮ್ಮೇಳ : ಒಕ್ಕಲುತನ ಆಯಿತು ಏನಾಯಿತು

ಹಿಮ್ಮೇಳ : ಹೌದು

ಮುಮ್ಮೇಳ : ಎರಡೆತ್ತು ತಗೋಬೇಕು ಬಾರಕೋಲು
ಹೆಗಲಿಗೆ ಹಾಕೋಬೇಕು ರಾತ್ರಿ ಹಗಲು ತಾಯಿ
ನೋಡಬೇಕಾದ್ರ ಭೂಮಿತಾಯಿನ ದುಡಿಬೇಕು ಯಾರು?
ಯಾರು?
ತಮ್ಮ ಸಣ್ಣವ ತಿಮ್ಮರೆಡ್ಡಿ

ಹಿಮ್ಮೇಳ : ಆಹಾ

ಮುಮ್ಮೇಳ : ಯಾರ ಹಗೆತನ ನೋಡಬೇಕಂದ್ರೆ
ಮಾಡ್ತಾ ಮಾಡ್ತನೆ ಅಣ್ಣ ಅಂತಾನೆ ಪರಮಾತ್ಮ
ಇದು ನೋಡಬೇಕಂದ್ರ ತಮ್ಮ ಈಗ ಕೈಯಿಗ ಬಂದನ

ಹಿಮ್ಮೇಳ : ಆಹಾ

ಮುಮ್ಮೇಳ : ತಮ್ಮಗ ಲಗ್ನ ಮಾಡ್ಬೇಕಂತೇಳಿ

ಹಿಮ್ಮೇಳ : ಆಹಾ

ಮುಮ್ಮೇಳ : ಒಂದು ನೋಡಬೇಕಾದ್ರ ಲಿಂಬರಗೇರಿ ಪಟ್ನದಲ್ಲಿ ಹೋಗಿ

ಹಿಮ್ಮೇಳ : ಹೋಗಿ

ಮುಮ್ಮೇಳ : ಒಂದು ಕನ್ಯಾದಾನ ತಗೇದ

ಹಿಮ್ಮೇಳ : ಹೌದು

ಮುಮ್ಮೇಳ : ತಮ್ಮಗ ಲಗ್ನವೇನು ಮಾಡಿದ

**ಹಾಡು**

ಮು.ಗಾ. : ಸಂಸಾರ ಇಬ್ಬರು ಅಣ್ಣತಮ್ಮಂದಿರದ
ಎಲೆ ಜೋರ ನಡೆದಾದೇ ದೈವ

ಹಿ.ಗಾ. : ಆ.. ಆ.. ಆ...sss

ಮು.ಗಾ. : ಇದ ಬೆಳ್ಳೆಂಬ ಪಟ್ಟಣದೊಳಗ
ಸಂಸಾರ ಚಂದಾಗಿ ನಡೆದರರಿ ದೈವ

ಹಿ.ಗಾ. : ಆ.. ಆ.. ಆ...sss

ಕಥೆ

ಮುಮ್ಮೇಳ : ಸಂಸಾರ ಚಂದ ಹಾಲುಹುಕ್ಕೈತೆ ಅರದಾಂಗ
ಎರತ್ತಿತ್ತು ಅವರ ಸಂಸಾರ

ಹಿಮ್ಮೇಳ : ಹೌದು

ಮುಮ್ಮೇಳ : ಹಳ್ಳದಲ್ಲಿ ನೀರು ಯಾವ ಪ್ರಕಾರ ಹರಿತದ
ಆ ಪ್ರಕಾರ ಸಂಸಾರ ಅನುವ ಸಾಗರ
ಚಂದವಾಗಿ ನಡೆದಿತ್ತು

ಹಿಮ್ಮೇಳ : ನಡೆದಿತ್ತು

ಮುಮ್ಮೇಳ : ಬೆಳ್ಳೆಂಬ ಪಟ್ಟಣದಲ್ಲಿ ನಾಕು ಮಂದಿ
ಬಡವರು ಕುಂದುರದು ನಿಂದರದು ಹೇಳೋದು

ಹಿಮ್ಮೇಳ : ಆ.. ಆ.. ಆ...

ಮುಮ್ಮೇಳ : ಅಣ್ಣ ಭರಮರೆಡ್ಡಿ ಎಲ್ಲಿ ಕುಂದ್ರುತಿದ್ರೂ
ನಿಂದ್ರುತಿದ್ರು ಹೋಗುತ್ತಿದ್ದರು

ಹಿಮ್ಮೇಳ : ಆ.. ಆ.. ಆ...

ಮುಮ್ಮೇಳ : ಅವನ ಕೈಮೇಲೆ ನ್ಯಾಯ, ನೀತಿ ಕೊಡೊದು
ತಗೊಳೋದು ಸಾಲ ಸಮರ ಕೊಡೊದು
ತಗೊಳೂರು ಇದ್ರೆ ಅಣ್ಣನ ಕೈಮೇಲೆ
ಕೊಡುತ್ತಿದ್ದ ಮತ್ತು ಅಣ್ಣ ಕೈಮೇಲೆ ವಾಪಸ
ಇಸ್ಕೊತ್ತಿದ್ದ

ಹಿಮ್ಮೇಳ : ಆ.. ಆ.. ಆ...

ಮುಮ್ಮೇಳ : ತಮ್ಮ ತಿಮ್ಮ
ಇವ ಸಣ್ಣವ ಇದ್ದ ತಮ್ಮ
ತನ್ನ ಒಕ್ಕಲುತನ ಆಯಿತು
ತನ್ನ ಸಂಸಾರ ಆಯಿತು
ತಾನೇ ಮಾಡ್ಕೊಂಡು ಕೂಡುತ್ತಿದ್ದ
ಹೀಗೆ ಇಬ್ಬರ ಸಂಸಾರ ಚಂದ ನಡೆದಾಗ
ಈ ಕತಿ ಮುಂದ
ಈ ಸಂಸಾರ ವಡಕ ಆಗ್ಬೇಕಾದ್ರ

ಹಿಮ್ಮೇಳ : ಆ.. ಆ.. ಆ...

ಮುಮ್ಮೇಳ : ತಮ್ಮನ ಹೆಂಡತಿ ಇದ್ದಕಿ ಸಾಧ್ವಿ
ಒಂದಾನು ಒಂದು ದಿವಸದಲ್ಲಿ

ಮನಸ್ಸಿನಲ್ಲಿ ಕಪಾಟ ಹುಟ್ಟಿ ಬಿಟ್ಟಿತು

ಹಿಮ್ಮೇಳ : ಹೌದು

ಮುಮ್ಮೇಳ : ಕಪಟ ದುರ್ಬದ್ಧಿಯನ್ನು ಹುಟ್ಟಿದಾಗ

ಹಿಮ್ಮೇಳ : ಹೌದು

ಮುಮ್ಮೇಳ : ಪರಮಾತ್ಮ

ಯಾಕಿವತ್ತೂ ನಮ್ಮ ಮಾವನಾದ ಭರಮರೆಡ್ಡಿ

ಮಾವನ ಹೆಂಡ್ತಿಯಾದ ಅಕ್ಕ ಮಹಾದೇವಿ

ಯಾಕ ಅವರು ರಾಣಿಯರಾಗಿ ಕುಂದ್ರತರ

ನಮ್ಮ ಮಾವನರು ರಾಜರಾಗಿ ಕುಂದ್ರತರ

ಮನೆಯಲ್ಲಿ

ಹಿಮ್ಮೇಳ : ಆ

ಮುಮ್ಮೇಳ : ಸಾಲ, ಸಮದ ಅದು ಏನೆ ಇದ್ರು ಕೊಡೊದು

ನಮ್ಮ ಮಾವನ ಕೈಯಲ್ಲಿ

ಕತ್ತೆಂಗ ನಾನು ದುಡಿಬೇಕಾ

ಹಿಮ್ಮೇಳ : ಆ

ಮುಮ್ಮೇಳ : ಕತ್ತೆಂಗ ಹೊಲದಾಗ ನನ್ನ ಗಂಡ ದುಡಿಬೇಕು

ಹಿಮ್ಮೇಳ : ಆ

ಮುಮ್ಮೇಳ : ಇವತ್ತು ನನ್ನ ಗಂಡ ತಿಮ್ಮರೆಡ್ಡಿ

ಹೊಲದಿಂದ ಬರೊತ್ತಿಗೆ ಇವತು

ಏನನ್ ಮಾಡಿ

**ಹಾಡು**

ಮು.ಗಾ. : ಗಂಡ ಹೆಂಡತಿ ಬ್ಯಾರೆ ಆಗಬೇಕಾ ನಾವು

ಹಿ.ಗಾ. : ಶಿವ ರಾಯ ಲೈವಿಯವsss

ಮು.ಗಾ. : ನಾವು ಬ್ಯಾರೆ ಆಗಲೇಬೇಕಾ

ಹಿ.ಗಾ. : ಶಿವ ರಾಯ ಲೈವಿಯವsss

ಮು.ಗಾ. : ಅಯಯ ಬರಿ ತಿಮ್ಮಾರೆಡ್ಡಿ

ಹಿ.ಗಾ. : ಶಿವ ರಾಯ ಲೈವಿಯವsss

**ಕಥೆ**

ಮುಮ್ಮೇಳ : ಗಂಡ ತನ್ನ ಹೊಲದಿಂದ ಬಂದಾಗ ತಿಮ್ಮರೆಡ್ಡಿ

ಹಿಮ್ಮೇಳ : ಆ

ಮುಮ್ಮೇಳ : ಯಾಕ ತಮ್ಮನ ಹೆಂಡತಿ ಸುದೇವಿ
ತನ್ನ ಮಂಚಕ ತಲೆಕೊಟ್ಟು ಮಕ್ಕೊಂಡು ಬಿಟ್ಟಿದ್ದು
ಹಿಮ್ಮೇಳ : ಆ
ಮುಮ್ಮೇಳ : ಎರಡು ಎತ್ತು ಕಟ್ಟಿದ
ಎತ್ತುಗಳಿಗೆ ಮೇವಾಕಿ
ನೀರನ್ನು ಕುಡಿಸಿ
ಹಿಮ್ಮೇಳ : ಹೌದು
ಮುಮ್ಮೇಳ : ಸಾದ್ವಿ ಅಂತ ಕುಗುತಾನ
ಹಿಮ್ಮೇಳ : ಆ
ಮುಮ್ಮೇಳ : ಮಂಚಕ್ಕೆ ತಲೆಕೊಟ್ಟು ಮಕ್ಕೊಂಡಾಗ
ಪರಮಾತ್ಮ ಏನಾಯಿತು ಏನಿಲ್ಲ ಇವಳಿಗೆ ಜೇಡ್ಡಾದೆ
ಆರಾಮಿಲ್ಲ ಹೋಗಿ ಕೇಳಬೇಕಂತೇಳಿ
ತಿಮ್ಮರೆಡ್ಡಿ ತನ್ನ ಹೆಂಡತಿ ಬಳಿ ಬಂದು
ಸುದೇವಿ ಯಾಕಲೇ ಏನು ಮೈಯಾಗ ಆರಾಮಿಲ್ಲೆನಂತನ
ಹಿಮ್ಮೇಳ : ಆ
ಮುಮ್ಮೇಳ : ಅಯ್ಯೋ ತಿಮ್ಮರೆಡ್ಡಿ ಏನು ಇವತ್ತು ನೋಡ್ಬೇಕಂದ್ರ
ಹಿಮ್ಮೇಳ : ಆ
ಮುಮ್ಮೇಳ : ಹೇಳದಕೇನಂದ್ರ ನನ್ನ ಕೈಮೇಲೆ ಕೈ ವಚನ
ಕೊಟ್ರ ನಿಮಗೆ ಹೇಳ್ತಿನಂದ್ಳು
ಹಿಮ್ಮೇಳ : ಆ
ಮುಮ್ಮೇಳ : ಆಗ್ಲಿ ಸುದೇವಿ ಯಾಕ ನಿನಗ ವಚನ ಕೊಡ್ತಿನಿ
ಹೆಳಲ್ಲೆ ಅಸಲಿಕತ್ತನ
ಹಿಮ್ಮೇಳ : ಆ
ಮುಮ್ಮೇಳ : ಅಲ್ಲರಿ ತಿಮ್ಮರೆಡ್ಡಿ ಲಗ್ನ ಮಾಡ್ಕೊಂಡು ಸುಖ
ಕತ್ತೆಂಗ ನಾನು ದುಡೆಕತ್ತಿನ್ನಿ ಮನಿಯಾಗ
ಹಿಮ್ಮೇಳ : ಹೌದು
ಮುಮ್ಮೇಳ : ಕತ್ತೆಂಗ ಹಗಲು ರಾತ್ರಿ ನೀವು ದುಡೆಕತ್ತೀರಿ ಹೊಲದಾಗ
ಹಿಮ್ಮೇಳ : ಆ
ಮುಮ್ಮೇಳ : ಅಲ್ರಿ ನಿಮ್ಮಣ್ಣ ರಾಜರೆ ಮಾಡಕತ್ತನ
ನಿಮ್ಮಣ್ಣನ ಹೆಂಡತಿ ಮಹಾರಾಣಿತರ
ಕುಂದ್ರುಕತ್ತಾಳೆ

**ಹಾಡು**

ಮು.ಗಾ. : ಇವತ್ತು ನಾವು ಬ್ಯಾರೆ ಆದ್ರೆ
ರಾಜರೆ ಮಾಡಬಹುದಾ ನಾವ

ಹಿ.ಗಾ. : ಇವ ರಾಯ ಲೈವಿಯವsss

ಮು.ಗಾ. : ನಾವು ರಾಜರೆ ಮಾಡಬಹುದ ನಾವ

ಹಿ.ಗಾ. : ಇವ ರಾಯ ಲೈವಿಯವsss

**ಕಥೆ**

ಮುಮ್ಮೇಳ : ಅಷ್ಟು ಕೇಳಿದ ತನ್ನ ಮಡದಿ ಮಾತು
ತಮ್ಮ ತಿಮ್ಮರೆಡ್ಡಿ

ಹಿಮ್ಮೇಳ : ಆ ಹೌದು..

ಮುಮ್ಮೇಳ : ಮಂಚಾಕಿ ಮುತ್ತಿನ ಜಮಖಾನ ಹೊದುಕೊಂಡು

**ಹಾಡು**

ಮು.ಗಾ. : ಎಲ್ಲಿ ನಿದ್ದಿ ಮಾಡುತಾನ

ಹಿ.ಗಾ. : ಶಿವರಾಯ ಲೈವಿಯವsss

ಮು.ಗಾ. : ಎಲ್ಲಿ ನಿದ್ದಿ ಮಾಡುತಾನ

ಹಿ.ಗಾ. : ಶಿವರಾಯ ಲೈವಿಯವsss

ಮು.ಗಾ. : ಅಣ್ಣ ಭರಮರೆಡ್ಡಿ ಬರುತಾನ

ಹಿ.ಗಾ. : ಶಿವರಾಯ ಲೈವಿಯವsss

ಮು.ಗಾ. : ಎತ್ತಿನ ಗೊಡ್ಲೆಗ ನೋಡ್ತಾನರಿ

ಹಿ.ಗಾ. : ಶಿವರಾಯ ಲೈವಿಯವsss

ಮು.ಗಾ. : ಎತ್ತಿನ ಗೊಡ್ಲೇಗ ಮೇವಿಲ್ಲ

ಹಿ.ಗಾ. : ಶಿವರಾಯ ಲೈವಿಯವsss

ಮು.ಗಾ. : ಏನಾಯಿತಲೆ ತಮ್ಮ ತಿಮ್ಮರೆಡ್ಡಿ ನಿನಗ

ಹಿ.ಗಾ. : ಶಿವರಾಯ ಲೈವಿಯವsss

**ಕಥೆ**

ಮುಮ್ಮೇಳ : ತಮ್ಮ ತಿಮ್ಮರೆಡ್ಡಿ ಬಾರೇ ತಮ್ಮ ಎತ್ತಿನ ಗೊಡ್ಲೇಗ
ನೋಡಿದ್ರ ದನಗಳಿಗೆ ಸೊಪ್ಪಿಲ್ಲ ತಮ್ಮ

ಹಿಮ್ಮೇಳ : ಹೌದು

ಮುಮ್ಮೇಳ : ಎಂಥ ಕಷ್ಟಬಂತು ತಮ್ಮ ನಿನಗ ಆರಾಮಿಲ್ಲೇನು

ಅಂತ ಕೇಳಿ ತಮ್ಮ ತಲೆಗುಂಟು ಕುಂತು
ಕೇಳಾಕತ್ತಾನೆ

ಹಿಮ್ಮೇಳ : ಆ

ಮುಮ್ಮೇಳ : ಆ ಮಾತಿಗೆ ತಮ್ಮ ತಿಮ್ಮರೆಡ್ಡಿ ಅಂತನ ಅಣ್ಣ

ಮುಮ್ಮೇಳ : ಬಾ ಅಣ್ಣ ನನಗೇನು ಅರಾಮಿಲ್ಲೇನು ಅಂತ
ತಿಳುಕೋ ಬೇಡ ಅರಾಮಿದ್ದೀನಣ್ಣ

ಹಿಮ್ಮೇಳ : ಹೌದು

ಮುಮ್ಮೇಳ : ನನ್ನ ಮಾತು ಪಾಲಿಸುತ್ತೇನಣ್ಣ

ಹಿಮ್ಮೇಳ : ಏನದು

ಮುಮ್ಮೇಳ : ಅಗ್ಗನಂಗ ಸಾವಿರ ವರ್ಷ ಇದ್ರು
ಸಾವು ತಪ್ಪೊದಿಲ್ಲ ಅಣ್ಣ
ನೂರು ವರ್ಷ ಇದ್ರು ಬ್ಯಾರೆ ಆಗೋದು ತಪ್ಪೊದಿಲ್ಲ

ಹಿಮ್ಮೇಳ : ಆ

**ಹಾಡು**

ಮು.ಗಾ. : ಅಣ್ಣ ಭರಮರೆಡ್ಡಿ ನನಗ ಬ್ಯಾರೆ ಮಾಡಿ ಕೊಡಪ್ಪೊ ಎಣ್ಣ

ಹಿ.ಗಾ. : ಶಿವರಾಯ ಲೈವಿಯವsss

ಮು.ಗಾ. : ನನಗ ಬ್ಯಾರ ಮಾಡಿ ಕೊಡಪ್ಪೊ ಎಣ್ಣ

ಹಿ.ಗಾ. : ಶಿವರಾಯ ಲೈವಿಯವsss

ಮು.ಗಾ. : ಹೇಳತಾನ ಭರಮರೆಡ್ಡಿ

ಹಿ.ಗಾ. : ಶಿವರಾಯ ಲೈವಿಯವsss

ಮು.ಗಾ. : ತಮ್ಮ ಅಂಥಬುದ್ಧಿ ಎಲ್ಲಿ ಬಂತಾಲೇ ನಿನಗ

ಹಿ.ಗಾ. : ಶಿವರಾಯ ಲೈವಿಯವsss

ಮು.ಗಾ. : ಅಂಥವ್ರ ಯಾರೇ ಹೇಳಿದ್ರಪ್ಪೊ ತಮ್ಮ

ಹಿ.ಗಾ. : ಶಿವರಾಯ ಲೈವಿಯವsss

ಮು.ಗಾ. : ತಂದೆ–ತಾಯಿ ಹೋಗ್ಯಾರೊ ತಮ್ಮ

ಹಿ.ಗಾ. : ಶಿವರಾಯ ಲೈವಿಯವsss

**ಕಥೆ**

ಮುಮ್ಮೇಳ : ತಿಮ್ಮರೆಡ್ಡಿ ಬಾ ತಮ್ಮ ಇವತ್ತ ಅಂಥ ಬುದ್ಧಿ ನಿನ್ನಬಳಿ
ಎಲ್ಲಿಂದ ಬಂತು ತಮ್ಮ

ಹಿಮ್ಮೇಳ : ಆಹಾ...

ಮುಮ್ಮೇಳ : ತಂದೆ-ತಾಯಿ ಗಳಿಸಿದ ರೊಕ್ಕರೂಪಾಯಿ ತಮ್ಮ

ಹಿಮ್ಮೇಳ : ಆಹಾ...

ಮುಮ್ಮೇಳ : ತಂದೆ-ತಾಯಿ ಗಳಿಸಿದ ಭೂಮಿ ರೊಕ್ಕ ತಮ್ಮ

ಹಿಮ್ಮೇಳ : ಆಹಾ...

ಮುಮ್ಮೇಳ : ನಾನು ನೀನು ಗಳಿಸಿದ್ದು ರೊಕ್ಕ ರೂಪಾಯಿ ಅಲ್ಲ

ಹಿಮ್ಮೇಳ : ಆಹಾ...

ಮುಮ್ಮೇಳ : ನಾನು ಗಳಿಸಿದ್ದು ಇದು ಭೂಮಿಯಲ್ಲ ತಮ್ಮ

ಹಿಮ್ಮೇಳ : ಆಹಾ...

ಮುಮ್ಮೇಳ : ತಂದೆ-ತಾಯಿ ಹೌದಾಗಿ ಹೋಗ್ಯಾರ

ಹಿಮ್ಮೇಳ : ಆಹಾ...

ಮುಮ್ಮೇಳ : ನಾನು ನೀನು ಇರೋತನಕ ಊರಾಗ ಹೌದಾಗಿ ಹೋಗೋಣ
ತಮ್ಮ ಬ್ಯಾರ್ಯಾಗ್ಹೋದು ಬ್ಯಾಡಲೇ ಹೇಳ್ತನ

ಹಿಮ್ಮೇಳ : ಹೌದು...

ಮುಮ್ಮೇಳ : ಅಣ್ಣ ಇವತ್ತು ಎಷ್ಟೋವ್ತಿದ್ರು ಬ್ಯಾರೆಮಾಡಿ ಕೊಡು
ಅಂತ ಕೇಳಿದಾಗ

ಹಿಮ್ಮೇಳ : ಆಹಾ...

ಮುಮ್ಮೇಳ : ಆಗ ಅಣ್ಣ ಹೇಳ್ತಾನೆ ಆಗ್ಲಿ ತಮ್ಮ ತಿಮ್ಮರೆಡ್ಡಿ
ಬ್ಯಾರೆ ಮಾಡಿಕೊಡೊದು ಕೊಡ್ತಿನಪ್ಪ

ಹಿಮ್ಮೇಳ : ಆಹಾ...

ಮುಮ್ಮೇಳ : ಬ್ಯಾರೆ ಕೊಡೊದು ಕೊಡ್ತೀನಿ ನಾನು ಒಲ್ಲೆ ಅಂತಾ
ಹೇಳೊದಿಲ್ಲ ಬ್ಯಾರೆ ಮಾಡಿ ಕೊಡ್ತೀನಿ ನಿನಗ

**ಹಾಡು**

ಮು.ಗಾ. : ನನ್ನ ಮಾತು ಪಾಲಿಸುತ್ತೀನಿ ಅಂದ್ರೆ
ಮೂರ ಸಂಗ ಮಾಡೊಬ್ಯಾಡೊ ತಮ್ಮ

ಹಿ.ಗಾ. : ಶಿವರಾಯ ಲೈವಿಯವsss

ಮು.ಗಾ. : ಬ್ಯಾರೆ ಮಾಡಿ ಕೊಡ್ತೇನೆ ನಿನಗ

ಹಿ.ಗಾ. : ಶಿವರಾಯ ಲೈವಿಯವsss

ಮು.ಗಾ. : ಮೂರ ಸಂಗ ಬೀಡಬೇಕೊ ತಮ್ಮ

ಹಿ.ಗಾ. : ಶಿವರಾಯ ಲೈವಿಯವsss

ಮು.ಗಾ. : ಯಾವ ಹೇಳಪ್ಪಾ ಅದ ಸಂಘ

ಹಿ.ಗಾ. : ಶಿವರಾಯ ಲೈವಿಯವsss

**ಕಥೆ**

ಮುಮ್ಮೇಳ : ಅಣ್ಣ ಮೂರು ಸಂಗಂತ ಹೇಳಿ
ಯಾವುದು ಸಂಗ ಹೇಳೆಂದ

ಹಿಮ್ಮೇಳ : ಆಹಾ

ಮುಮ್ಮೇಳ : ತಮ್ಮ ತಿಮ್ಮರೆಡ್ಡಿ ಮೂರು ಸಂಗ ಅಂದ್ರ
ಏನ್ ತಮ್ಮ ಬ್ಯಾರ ಮಾಡಿಕೊಡಂದ್ರು ಕೋಡ್ತೀನಿ
ಆ ಮೂರು ಸಂಗ ಅಂದ್ರ

**ಹಾಡು**

ಮು.ಗಾ. : ಕುಡುಕರ ಸಂಗ ಕಟ್ಟಬ್ಯಾಡೊ ತಮ್ಮ

ಹಿ.ಗಾ. : ಶಿವರಾಯ ಲೈವಿಯವsss

ಮು.ಗಾ. : ರಂಡಿ ಬಾಜಿ ಸಂಗ ಕಲಿ ಬ್ಯಾಡೊ ತಮ್ಮ

ಹಿ.ಗಾ. : ಶಿವರಾಯ ಲೈವಿಯವsss

ಮು.ಗಾ. : ಇಸ್ಪೇಟ್ ಸಂಗ ಆಡ್ಬೇಡ ತಮ್ಮ

ಹಿ.ಗಾ. : ಶಿವರಾಯ ಲೈವಿಯವsss

ಮು.ಗಾ. : ಮೂರು ಸಂಗ ಕೈಯ ಹಾಕಬೇಡ

ಹಿ.ಗಾ. : ಶಿವರಾಯ ಲೈವಿಯವsss

ಮು.ಗಾ. : ತಂದೆ-ತಾಯಿ ಹೌದಾಗಿ ಹೋಗ್ಯಾರೊ ತಮ್ಮ

ಹಿ.ಗಾ. : ಶಿವರಾಯ ಲೈವಿಯವsss

ಮು.ಗಾ. : ತಂದೆ-ತಾಯಿ ಹೆಸರು ತರಬೇಕು ತಮ್ಮ

ಹಿ.ಗಾ. : ಶಿವರಾಯ ಲೈವಿಯವsss

ಮು.ಗಾ. : ಊರಿಗಿ ದೊಡ್ಡ ಮನಿತನ

ಹಿ.ಗಾ. : ಶಿವರಾಯ ಲೈವಿಯವsss

ಹೀಗೆ ಕಾವ್ಯ ಮುಂದುವರಿಯುತ್ತಾ ತಮ್ಮ ತಿಮ್ಮರೆಡ್ಡಿ ಅಣ್ಣನ ಹತ್ತಿರ ಆಸ್ತಿಯ ಪಾಲು ಕೇಳಿದಾಗ ಅಣ್ಣನು ತಂದೆ ತಾಯಿ ಗಳಿಸಿಟ್ಟ ರೊಕ್ಕ-ರೂಪಾಯಿ, ಬೆಳ್ಳಿ-ಬಂಗಾರವನ್ನು ಸಮನಾಗಿ ಹಂಚಿಕೆ ಮಾಡಿದನು. ತಂದೆ-ತಾಯಿ ಬಾಳಿದ ಮನೆಯನ್ನು ಭಾಗ ಮಾಡುವುದು ಬೇಡವೆಂದು ತಾನು ಇಟ್ಟುಕೊಂಡು ತಮ್ಮನಿಗಾಗಿ ಹೊಸ ಮನೆಯನ್ನು ಕಟ್ಟಿಸಿಕೊಡುತ್ತಾನೆ. ಈ ರೀತಿಯಾಗಿ ಆಸ್ತಿ ಹಂಚಿಕೆಯಾಗುವ ಸಂದರ್ಭದಲ್ಲಿ ತಮ್ಮನಿಗೆ ಮನಸ್ಸಿನ ದಾರಿ ತಪ್ಪಿಸುವ ಅಡ್ಡದಾರಿ ಹಿಡಿದು ಬದುಕನ್ನು ಕೇಡಿಸಿಕೊಳ್ಳದೇ ಇರುವುದಕ್ಕೆ ಎಚ್ಚರಿಕೆಯ ಮೂರು ಬುದ್ಧಿ ಮಾತುಗಳನ್ನು ಹೇಳುತ್ತಾನೆ. ತಮ್ಮ ಎಂದಿಗೂ ಕುಡುಕರ ಸಂಘ, ರಂಡಿಬಾಜಿ ಸಹವಾಸ ಮತ್ತು ಜೂಜಟಾ ಆಡುವವರ ಸಂಘ ಮಾಡಬೇಡವೆಂದು ತಿಳಿಸಿ ಜೀವನ ಸುಖಕರವಾಗಿ ಇರಲ್ಲೆಂದು ಹಾರೈಸಿ ಅವನ ಪಾಲಿನ ಎಲ್ಲ ಆಸ್ತಿಯನ್ನು ನೀಡುತ್ತಾನೆ.

ತಮ್ಮ ತಿಮ್ಮರೆಡ್ಡಿ ಆಸ್ತಿಯ ಪಾಲನ್ನು ತೆಗೆದುಕೊಂಡು ಜೀವನ ಸಾಗಿಸುತ್ತಿದ್ದಾಗ ಅಣ್ಣನು ಹೇಳಿದ ಎಚ್ಚರಿಕೆ ಬುದ್ಧಿಮಾತುಗಳು ಅವನನ್ನು ಕಾಡುತ್ತಿದ್ದವು. ಬುದ್ಧಿಮಾತಿಗೆ ಬೆಲೆ ಕೊಡದೆ ಕುಡುಕರ ಸಂಘ, ರಂಡಿಬಾಜಿ ಸಹವಾಸ ಮತ್ತು ಜೂಜಟಾದ ಸಂಘದಿಂದ ತನ್ನ ಪಾಲಿನ ಎಲ್ಲಾ ಆಸ್ತಿಯನ್ನು ಕಳೆದುಕೊಂಡು ಜೀವನ ಬೀದಿಗೆ ಬಂದು ಬಿತ್ತು.

ಅಣ್ಣ ಭರಮರೆಡ್ಡಿಯ ಜೀವನ ತುಂಬಾ ಚೆನ್ನಾಗಿ ನಡೆದಿತು. ಇದನ್ನು ನೋಡಿ ಸಹಿಸದ ತಮ್ಮನ ಹೆಂಡತಿ ಗಂಡನಿಗೆ ಕರೆದು ನಿಮ್ಮಣ್ಣನು ಆಸ್ತಿ ಪಾಲು ನೀಡುವಾಗ ಸಮನಾಗಿ ಹಂಚಿಕೆ ಮಾಡಿಲ್ಲ. ಮೊದಲೇ ಅರ್ಧ ಆಸ್ತಿಯನ್ನು ಗಂಟುಮಾಡಿ, ಇರುವ ಅರ್ಧ ಆಸ್ತಿಯಲ್ಲೇ ಮತ್ತೇ ತನಗೆ ನಿಮಗೆ ಪಾಲು ಹಂಚಿಕೆ ಮಾಡಿದ್ದಾನೆ. ನಿಮ್ಮಣ್ಣನ ಆಸ್ತಿ ಎಲ್ಲಾ ನಮಗೆ ಬರಬೇಕೆಂದರೆ ಅವನ ಜೀವವನ್ನು ತೆಗೆದುಬಿಡು ಎಂದು ತಿಳಿಸುತ್ತಾಳೆ. ಹೀಗೆ ರಕ್ತಸಂಬಂಧಕ್ಕೆ ಬೆಲೆಕೊಡದೆ ತಮ್ಮ ತನ್ನ ಹೆಂಡತಿಯ ಮಾತುಕೇಳಿ ಅಣ್ಣ ಭರಮರೆಡ್ಡಿಯ ಬಳಿಬಂದು ನನ್ನ ಪಾಲಿನ ಆಸ್ತಿಯಲ್ಲ ಕಳೆದುಕೊಂಡಿದ್ದೇನೆ. ನನಗೆ ಮತ್ತಾವ ಆಸ್ತಿಯು ಬೇಡ. ನೀನು ನನಗೆ ಹೊಲ ಉಳ್ಳಲು ಎರಡು ಎತ್ತುಗಳನ್ನು ಕೊಡಿಸು ಸಾಕು ನಾನು ಹೊಲದ ಕೆಲಸ ಮಾಡ್ತೀನಿ ಎಂದು ಸುಳ್ಳು ಹೇಳಿ ಎತ್ತುಗಳನ್ನು ಖರೀದಿಸುವ ನೆಪದಲ್ಲಿ ಅಣ್ಣನನ್ನು ಅರಣ್ಯದಲ್ಲಿ ಕರೆದುಕೊಂಡು ಹೋಗಿ ಭರಮರೆಡ್ಡಿಯನ್ನು ಹೊಡೆದು ಅವನ ಕಣ್ಣುಗಳಿಗೆ ಬಾರೆಮುಳ್ಳು ಹೊಡೆದನು. ಒಂದು ದೊಡ್ಡ ಮಾವಿನ ಮರದ ಕೆಳಗೆ ಹಾಕಿ ಅವನ ಮೇಲೆ ಬಾರಿಮುಳ್ಳಿನ ಕಂಠಿಯನ್ನು ಹಾಕುತ್ತಾನೆ. ಆಗ ಅಣ್ಣ ನೋವಿನಿಂದ ಹೇಳುತ್ತಾನೆ "ತಮ್ಮ ಮೋಸದ ಜಲುಮ ಹೋಡಿಬ್ಯಾಡೊ ತಮ್ಮ ಹೆಂಡಿರು ಸಾವಿರಮಂದಿ ಸಿಗ್ತಾರೊ ತಮ್ಮ ಆದರೆ ಒಡಹುಟ್ಟಿದವರು ಸಿಗೊದಿಲ್ಲ" ಎಂದು ಗೋಗೆರೆಯುತ್ತಾನೆ. ತಮ್ಮ ತಿಮ್ಮರೆಡ್ಡಿಗೆ ಕನಿಕರ ಬಾರದೆ ಅಣ್ಣನನ್ನು ಅರಣ್ಯದಲ್ಲೇ ಬಿಟ್ಟು ಬರುತ್ತಾನೆ. ಆದರೆ ಭರಮರೆಡ್ಡಿಗೆ ತಮ್ಮನ ಮೇಲಿನ ಪ್ರೀತಿ ಇನ್ನು ಕಡಿಮೆಯಾಗದೆ ತಮ್ಮ ತಮ್ಮನೆಂದು ಕೂಗುತ್ತಲೇ ಇರ್ತ್ತಾನೆ.

ತಿಮ್ಮರೆಡ್ಡಿ ಊರಿಗೆ ಬಂದು ಅಣ್ಣನ ಹೆಂಡತಿ ಮತ್ತು ಮಕ್ಕಳನ್ನು ಮನೆಯಿಂದ ಹೊರಹಾಕುತ್ತಾನೆ. ಅಣ್ಣನ ಆಸ್ತಿಗೆಲ್ಲಾ ತಾನೆ ಒಡೆಯನಾಗುತ್ತಾನೆ. ಮತ್ತೇ ಆದೇ ಹಾಳದ ಕುಡುಕರ ಸಂಘ, ರಂಡಿಬಾಜಿ ಸಹವಾಸ ಮತ್ತು ಜೂಜಟಾದ ಸಂಘದಿಂದ ಈ ಆಸ್ತಿಯನ್ನು ಹಾಳುಮಾಡಿ ಎಲ್ಲಾ ಕಳೆದುಕೊಳ್ಳುತ್ತಾನೆ. ಇತ್ತ ಅರಣ್ಯದಲ್ಲಿ ಅಣ್ಣ ಭರಮರೆಡ್ಡಿ ತಮ್ಮ ತಮ್ಮ ಎನ್ನುತ್ತ ಗಿಡದ ಕೆಳಗೆ ನರಳಾಟದಿಂದ ಮಲಗಿದ್ದ ಅಣ್ಣನ ಧರ್ಮಕ್ಕೆ ಮೆಚ್ಚಿ ಒಂದು ದೊಡ್ಡ ಗಾಳಿ ಬಿಸಿ ಅಣ್ಣನ ಮೇಲಿದ್ದ ಬಾರೆಮುಳ್ಳೆಲ್ಲವೂ ಗಾಳಿಯ ರಭಸಕ್ಕೆ ಹಾರಿಹೊದವು. ಆಗ ಭರಮರೆಡ್ಡಿ ತಮ್ಮ ತಮ್ಮನೆಂದೇ ಕನವರಿಸುತ್ತಾ ಎದ್ದು ಕುಳಿತು ಕಣ್ಣುಗಳು ಮುಳ್ಳಿನ ಹೊಡೆತಕ್ಕೆ ಕುರುಡಾಗಿದ್ದವು ಇದನ್ನು ಕಂಡ ಪರಮಾತ್ಮ ಪಾರ್ವತಿ ಇವನ ಧರ್ಮಕ್ಕೆ ಮೆಚ್ಚಿ ಎರಡು ಪಕ್ಷಿಗಳಾಗಿ ಭೂಮಿಗೆ ಬಂದು ಈ ಮಾವಿನ ಎಲೆಯ ರಸವನ್ನು ಹಿಂಡಿಕೊ ನಿನ್ನ ಕಣ್ಣುಗಳು ಬರುತ್ತವೆ ಎಂದು ಹೇಳಿ ಮಾಯವಾಗಿ ದೇವಲೋಕಕ್ಕೆ ಹೋದರು. ಆ ದೇವರ ವಾಣಿಯಂತೆ ರಸವನ್ನು ಕಣ್ಣುಗಳಿಗೆ ಹಿಂಡಿಕೊಂಡನು. ಆಗ ಕಣ್ಣುಗಳು ಹೂವುಗಳು ಚಿಗುರಿದಂತೆ ಮೂಡಿಬಂದವು. ಅಣ್ಣ ಭರಮರೆಡ್ಡಿ ಎದ್ದು ಯೋಚನೆ ಮಾಡುತ್ತಾನೆ ನಾನು ಮತ್ತೇ ಊರಿಗೆ ಹೋದರೆ ಆಸ್ತಿಗಾಗಿ ನನ್ನ ತಮ್ಮ ನನ್ನ ಜೀವವನ್ನೇ ತೆಗೆಯುತ್ತಾನೆ. ಅದಕ್ಕೆ ನಾನು ಊರಿಗೆ ಹೋಗಬಾರದೆಂದು ಬೇರೆ ಊರಿನ ಕಡೆಗೆ ಪ್ರಯಾಣ ಮಾಡುತ್ತಾನೆ.

ಪ್ರಯಾಣ ಮಾಡುವ ಸಂದರ್ಭದಲ್ಲಿ ನಿಂಬಳಗೇರಿ ಎಂಬ ಪಟ್ಟಣದಲ್ಲಿ ನಿಂಬುಳಿ ಮಹಾರಾಜನಿದ್ದು, ಅವನ ಆಸ್ತಿಪಾಸ್ತಿ, ರೊಕ್ಕ-ರೂಪಾಯಿ, ಬೆಳ್ಳಿ-ಬಂಗಾರಕ್ಕೆ ಏನು ಕೊರತೆ ಇರಲಿಲ್ಲ. ಆದರೆ ಅವನಿಗೆ ಗಂಡುಮಕ್ಕಳಿರಲಿಲ್ಲ. ಒಬ್ಬಳೇ ಮಗಳು ಅವಳಿಗೆ ಕೂಡ ಕಣ್ಣಿರಲಿಲ್ಲ. ಇದಕ್ಕಾಗಿ ಊರ ಹೊರಗೆ ಒಂದು ಸೂಚನಾ ಫಲಕವನ್ನು ಹಾಕಿಸಿದ ಏನೆಂದರೆ, ನನ್ನ ಮಗಳಿಗೆ ಯಾರು ಕಣ್ಣು ಬರುವಂತೆ ಮಾಡುತ್ತಾರೊ ಅವರಿಗೆ ನನ್ನ ಮಗಳನ್ನು ಕೊಟ್ಟು ನನ್ನ ಅರಮನೆಗೆ ರಾಜನನ್ನಾಗಿ ಮಾಡುತ್ತೇನೆಂದು ಬರಹದಲ್ಲಿತ್ತು. ಇದನ್ನು ಓದಿದ ಭರಮರೆಡ್ಡಿ ರಾಜನ ಅರಮನೆಗೆ ಹೋಗಿ ಮಗಳ ಕಣ್ಣಲ್ಲಿ ಆ ಮಾವಿನ ಎಲೆಯ ರಸವನ್ನು ಹಿಂಡಿ ಅವಳಿಗೆ ಕಣ್ಣುಬರುವಂತೆ ಮಾಡಿದ. ಮಗಳಿಗೆ ಕಣ್ಣುಬಂದಿದ್ದನ್ನು ಕಂಡು ರಾಜ ಖುಷಿಯಿಂದ ಭರಮರೆಡ್ಡಿಯನ್ನು ಅರಮನೆಯ ರಾಜನನ್ನಾಗಿ ಮಾಡಿದ. ಇದರಿಂದ ಕಥೆಯ ಸಾರಂಶ ಧರ್ಮಕ್ಕೆ ಧರ್ಮ, ಕರ್ಮಕ್ಕೆ ಕರ್ಮ. ತಮ್ಮ ತಿಮ್ಮರೆಡ್ಡಿ ಎಷ್ಟೇ ಮೋಸ ಮಾಡಿ ಆಸ್ತಿಯನ್ನು ಪಡೆದುಕೊಂಡರು ಅವನ ಹತ್ತಿರ ಉಳಿಯಲಿಲ್ಲ. ಧರ್ಮದಿಂದ ನಡೆದ ಅಣ್ಣ ರಾಜನೆ ಆದ. ತಮ್ಮ ಕೊನೆಗೆ ಬೀದಿ ಭಿಕ್ಷುಕನೇ ಆದ. ಒಳ್ಳೆಯದಕ್ಕೆ ಒಳ್ಳೆದು ಕೆಟ್ಟದಕ್ಕೆ ಕೆಟ್ಟದು.

ಒಂದು ಕಡೆ ಅಣ್ಣ ರಾಜನಾದ. ಇಲ್ಲಿ ತಮ್ಮ ಮತ್ತೇ ಆದೆ ಕೆಟ್ಟ ಸಹವಾಸಗಳಿಂದ ಆಸ್ತಿಯಲ್ಲ ಕಳೆದುಕೊಂಡು ಬೀದಿಗೆ ಬಿದ್ದು, ಗಂಡ-ಹೆಂಡತಿ ಸೇರಿ ಕಟ್ಟಿಗೆ ಮಾರಿ ಜೀವನ ಸಾಗಿಸುವಂತಾಯಿತು. ಹೀಗೆ ಒಂದು ದಿನ ಕಟ್ಟಿಗೆ ತೆಗೆದುಕೊಂಡು ನಿಂಬಳಗೇರಿ ಪಟ್ಟಣಕ್ಕೆ ಬರುತ್ತಾನೆ. ಗಡ್ಡವನ್ನು ಬಿಟ್ಟು ಸಾಧುವಿನಂತೆ ಆಗಿದ್ದ ತಿಮ್ಮರೆಡ್ಡಿ. ತಮ್ಮನ ಧ್ವನಿ ಕೇಳಿ ಮತ್ತೇ ಅಣ್ಣನ ಕರಳು ಕಿತ್ತುಬಂತು. ತಮ್ಮ ತಿಮ್ಮರೆಡ್ಡಿ ಎಂತಹ ಪರಿಸ್ಥಿತಿ ಬಂತು ನಿನಗೆ ಎಂದು ಅಣ್ಣ ಭರಮರೆಡ್ಡಿ ಕಣ್ಣೀರು ಹಾಕುತ್ತಾನೆ. ತಮ್ಮ ನನಗೆ ರಾಜಮಾರ್ಯದೆ ಬೇಡ ತಮ್ಮ ನೀನೇ ಈ ಸ್ಥಾನಕ್ಕೆ ಬಾ ರಾಜನಾಗು ಎಂದು ಹೇಳುತ್ತಾನೆ. ತಮ್ಮ ತಿಮ್ಮರೆಡ್ಡಿಗೆ ತನ್ನ ತಪ್ಪುಗಳ ಅರಿವಾಗಿ ಅಣ್ಣನ ಕಾಲಿಗೆ ಬಿದ್ದು ಕ್ಷಮೆಯಾಚಿಸುತ್ತಾನೆ.

ಅಣ್ಣ ಭರಮರೆಡ್ಡಿಯು ತಮ್ಮನಿಗೆ ನಮ್ಮ ಜೀವನದ ಬದುಕು ಹಾಲು ಉಕ್ಕುವಂತಿದ್ದ ನಮ್ಮ ಸಂಸಾರವನ್ನು ಹಾಳು ಮಾಡಿದ್ದು ಈ ಒಂದು ಹೆಣ್ಣು. ಅಂತಹ ಹೆಣ್ಣು ಈ ಭೂಮಿಯ ಮೇಲಿರಬಾರದು. ತಮ್ಮ ತಿಮ್ಮರೆಡ್ಡಿ ಅಣ್ಣನ ಮಾತನ್ನು ಕೇಳುತ್ತಲೇ ಅವನ ಹೆಂಡತಿಯ ಕತ್ತನ್ನು ಕತ್ತರಿಸುತ್ತಾನೆ. ತಮ್ಮನಿಗೆ ಮತ್ತೊಂದು ಮದುವಿ ಮಾಡಿ ತಮ್ಮ ತಿಮ್ಮರೆಡ್ಡಿ ನಮಗೆ ಈ ರಾಜ-ಗಿಜ ಇದು ಏನು ಬೇಡ ಮೊದಲಿನಂತೆ ನಾವು ಒಕ್ಕಲುತನ ಮಾಡೋಣ ಎಂದು ಅಣ್ಣ ಭರಮರೆಡ್ಡಿ ಹೇಳಿದ. ನಿಂಬಲಗೇರಿ ಪಟ್ಟಣವನ್ನು ಬಿಟ್ಟು ಬೆಳ್ಳಂಬ ಪಟ್ಟಣಕ್ಕೆ ಬಂದು ಮತ್ತೇ ಮೊದಲಿನಂತೆ ಜೀವನ ಪ್ರಾರಂಭ ಮಾಡಿದರು. ಬೆಳ್ಳಂಬ ಪಟ್ಟಣದೊಳಗೆ ಅಣ್ಣ-ತಮ್ಮನ ಸಂಸಾರ ಜೋರಾಗಿ ನಡೆಯಿತು. ಒಟ್ಟಾರೆ ಕಥೆಯ ಸಾರಂಶ ಒಂದು ತುಂಬಿದ ಸಂಸಾರ ಒಡೆಯುವುದಕ್ಕೆ ಆಸ್ತಿ-ಪಾಸ್ತಿ, ಬಂಗಾರ-ಬೆಳ್ಳಿ, ರೊಕ್ಕ-ರೂಪಾಯಿ ಮತ್ತು ಒಂದು ಹೆಣ್ಣು ಕಾರಣ. ತಮ್ಮ ತಿಮ್ಮರೆಡ್ಡಿ ಹೆಂಡತಿಯ ದುರಾಸೆಯಿಂದ ಅವಳ ಮಾತು ಕೇಳಿ ಆಸ್ತಿ-ಅಂತಸ್ತು ಸಲುವಾಗಿ ಕರ್ಮದ ದಾರಿ ಹಿಡಿದರು ಕೂಡಾ ಅಣ್ಣ ಭರಮರೆಡ್ಡಿ ಎಷ್ಟೇ ಕಷ್ಟ ಬಂದರೂ ತನ್ನ ಧರ್ಮವನ್ನು ಬಿಡಲಿಲ್ಲ. ಕೊನೆಗೆ ಈ ಕಥೆಯಿಂದ ತಿಳಿಯುವುದು ಧರ್ಮಕ್ಕೆ ಧರ್ಮವೇ ಕಾಪಾಡುತ್ತದೆ ಎಂಬುವುದು. ಒಟ್ಟಾರೆ ಈ ಕಥೆಯು ಭೀಮಪಲಾಸಿ ಮಿಶ್ರ ರಾಗದಲ್ಲಿದ್ದು, ಹೆಚ್ಚಾಗಿ ಈ ಕಥೆಯಲ್ಲಿ ಬರುವ ಹಾಡುಗಳು ಕೆಹರವಾ ತಾಳದಲ್ಲಿರುವುದು ಕಂಡುಬರುತ್ತದೆ. (ಗೊಂಧಳಿ ದೊಡ್ಡಮಲ್ಲಪ್ಪ, ಸಣ್ಣಮಲ್ಲಪ್ಪ ಮತ್ತು ಸಂಗಡಿಗರು, ಹುಣಸಗಿ, ಸುರುಪುರ ತಾ. ಯಾದಗಿರಿ ಜಿಲ್ಲೆ)

**ಚಿದಾನಂದ ಅವದೂತರ ತತ್ವಪದ**

**ರಾಗ:** ಬಿಲಾವಲ್ **ತಾಳ:** ಕೆಹರವಾ

ಮು.ಗಾ. : ಸದ್ಗುರುವಿನ ಪಾದ ಹಿಡಿಬೇಕವ್ವ ತಂಗಿ
ಹುಡಗತನದ ಬುದ್ದಿ ಸಾಕವ್ವ

ಹಿ.ಗಾ. : ಒಡಗುರುವಿನ ಪಾದ ಹಿಡಿಬೇಕವ್ವ ತಂಗಿ
ಹುಡಗತನದ ಬುದ್ಧಿ ಸಾಕವ್ವ

**ಅಂತರ**

ಮು.ಗಾ. : ಬಿಡದ ಗಂಡಗಂಜಿ ನಡಿರವ್ವss ತಂಗಿ

ಹಿ.ಗಾ. : ಹೆ ಬಿಡದೆ ಗಂಡಂಜಿ ನಡಿರವ್ವ ತಂಗಿ

ಹಿ.ಗಾ : ಅಮ್ಮಾssssss
ಭವದೊಳಗೆ ಇರಬೇಕವ್ವಾ

ಮು.ಗಾ. : ಹ ಬಿಡದೆ ಗಂಡಗಂಜಿ ನಡಿರವ್ವ ಮುಕ್ತಿ ಪಡದು ಭವದೊಳು ನಡಿರವ್ವ

ಹಿ.ಗಾ.ಮು.ಗಾ.: ನಡಗುರುವಿನ ಪಾದ ಹಿಡಿಬೇಕವ್ವ ತಂಗಿ
ಉಡಗತನದ ಬುದ್ದಿ ಸಾಕವ್ವ

ಮು.ಗಾ. : ಏನು ಹಿಂದಿನ ಮನ್ಮ ನಿಂದವ್ವ/ ಈ ಮಾನವ ಜನ್ಮಕ್ಕೆ ಬಂದ್ದೆವು

ಹಿ.ಗಾ. : ಏನು ಹಿಂದಿನ ಮನ್ಮ ನಿಂದವ್ವ/ ಈ ಮಾನವ ಜನ್ಮಕ್ಕೆ ಬಂದ್ದೆವು

ಮು.ಗಾ. : ಹಿನಗುಣದಿಂದ್ದರ ಕುಂದವ್ವ
ತಂಗಿ ಬಂಧನವಾಗುವುದು ಬಯಲವ್ವ

ಮು.ಹಿ.ಗಾ. : ನಡಗುರುವಿನ ಪಾದ ಹಿಡಿಬೇಕವ್ವ ತಂಗಿ
ಹುಡಗತನದ ಬುದ್ದಿ ಸಾಕವ್ವ

ಮು.ಗಾ. : ಕೆಟ್ಟ ಮಾತಿಗೇನು ಫಲವವ್ವ ತಂಗಿ
ನಿಷ್ಠವಂತರ ಗುಣ ಕಲಿರವ್ವ

ಹಿ.ಗಾ. : ನಿಷ್ಟವಂತರ ಗುಣ ಕಲಿರವ್ವ

ಮು.ಗಾ. : ದುಷ್ಟಗುಣಗಳೆಲ್ಲ ಅಳಿರವ್ವ ತಂಗಿ

ಹಿ.ಗಾ. : ಆsss

ಮು.ಗಾ. : ದುಷ್ಟಗುಣಗಳೆಲ್ಲ ಅಳಿರವ್ವ
ನಿಜ ನಿಷ್ಠೆ ಹಿಡಿದು ಭವ ಗೆಲಿರವ್ವ

ಮು.ಹಿ.ಗಾ. : ನಡಗುರುವಿನ ಪಾದ

ಮು.ಗಾ. : ದುಡದಿದ್ದೆಲ್ಲ ಬಾರದವ್ವ ನಿನ್ನ ಒಡಲೋಳು ನಿನೆ ತಿಳಿಯವ್ವ

ಹಿ.ಗಾ. : ಬಿಡದೆ ಬಜಿಸು ಗುರುಪಾದವ್ವ ತಂಗಿss

ಮು.ಗಾ. : ಬಿಡದೆ ಬಜಿಸು ಗುರುಪಾದವ್ವ ತಂಗಿss

ಹಿ.ಗಾ. : ಬಿಡದೆ ಬಜಿಸು ಗುರುಪಾದವ್ವ ತಂಗಿss

ಮು.ಗಾ. : ಗುರು ಚಿದಾನಂದನ ಪಾದ ಹಿಡಿಯವ್ವssss

ಕಂಪ್ಯೂಟರ್‌ನ ಯುಗದಲ್ಲಿ ಸಿನಿಮಾ ಸಂಗೀತಗಳ ಹಾವಳಿಯಿಂದಾಗಿ ಗೊಂದಳಿ ಸಂಗೀತ ಇನ್ನು ತನ್ನ ತನವನ್ನು ಉಳಿಸಿಕೊಂಡು ಬಂದಿದೆ ಎಂದರೆ ಅದು ಸುಮ್ಮನೆ ಮಾತಲ್ಲ. ಅವರಲ್ಲಿರುವ ಕಲೆಯೇ ಅವರನ್ನು ಉಳಿಸಿಕೊಂಡು ಬಂದಿದೆ ಎಂದರೆ ತಪ್ಪಾಗಲಾರದು.

**ಗೊಂದಲಿಗರ ವಾದ್ಯಗಳು**

ಕೆಲವರು ಹಾಡುವುದೇ ಶ್ರೇಷ್ಠ ಸಂಗೀತವೆಂದು ತಿಳಿದಿದ್ದಾರೆ. ಅದು ಅಷ್ಟೊಂದು ಸಮಂಜಸವಲ್ಲ. ಕಾರಣ ಹಾಡುವುದು ಹೇಗೆ ಶ್ರೇಷ್ಠವೋ ಹಾಗೆ ವಾದ್ಯಗಳನ್ನು ನುಡಿಸುವುದು ಶ್ರೇಷ್ಠವಾಗಿದೆ. ಯಾವ ಹಾಡು ಧ್ವನಿಯಿಂದ ಹುಟ್ಟುತ್ತದೆಯೋ ಆ ಹಾಡು ವಾದ್ಯದಿಂದಲೂ ಹುಟ್ಟುತ್ತದೆ.

ಈ ಮೇಲಿನ ಹೇಳಿಕೆಗಳಂತೆ ಗೊಂದಲಿಗರ ಸಂಗೀತದಲ್ಲಿ ಕೂಡ ಹಾಡುಗಾರಿಕೆಗೆ ಎಷ್ಟು ಮಹತ್ವ ವಿದೆಯೇ ಅದೇ ತರಹ ವಾದ್ಯಗಳಿಗೂ ಅಷ್ಟೆ ಮಹತ್ವವಿದ್ದದ್ದು ಕಂಡುಬರುತ್ತದೆ.

ಗೊಂದಳಿ ಸಮುದಾಯದ ಕಲಾವಿದರು ಬಳಸುವ ವಾದ್ಯಗಳು

೧) ಸಂಬಾಳ ೨) ಚೌಡಿಕೆ

೩) ತಾಳ ೪) ಶಂಖ

**ಸಂಬಾಳ ವಾದ್ಯ :** ಸಂಬಾಳ ವಾದ್ಯ ಗೊಂದಲಿಗರ ಮೇಳದಲ್ಲಿ ಬರುವ ಜೋಡಿ ಏಕಮುಖ ವಾದ್ಯ ಈ ಸಂಬಾಳ ವಾದ್ಯವಾಗಿದೆ. ಇದೊಂದು ಚರ್ಮ ವಾದ್ಯ. ಕಬ್ಬಿಣದಿಂದ ತಯಾರಿಸಲಾದ ಗುಂಡಾಕಾರದ ಗಾಲಿಗೆ ಕುರಿ ಅಥವಾ ಆಡಿನ ಚರ್ಮದಿಂದ ಬಿಗಿದು ಸುತ್ತಲು ದಾರದಿಂದ ಬಿಗಿದು ಅದೊಂದು ಮುಚ್ಚಳದ ರೀತಿಯಲ್ಲಿ ಮಾಡಿರುತ್ತಾರೆ. ನಂತರ ಹಗ್ಗದಿಂದ ಎಳೆದು ಕಟ್ಟಲು ಆ ಮುಚ್ಚಳದ ನಡುವೆ ಜೇನು ಮೇಣದಿಂದ ಮೆತ್ತಿರುತ್ತಾರೆ. ಇದನ್ನು ನಾವು ಕರಣಿ ಎಂದು ಕರೆಯುತ್ತಾರೆ. ಇದಾದ ನಂತರ ಕಬ್ಬಿಣ ಅಥವಾ ಮಣ್ಣಿನಿಂದ ತಯಾರಿಸಲಾದ ಗುಂಡಾಕಾರದ ಪಡಗಕ್ಕೆ ಚರ್ಮದಿಂದ ತಯಾರಿಸಲಾದ ಮುಚ್ಚಳವನ್ನು



ಕರಣಿ ಹಚ್ಚಿದ ಭಾಗವನ್ನು ಒಳಗೆ ಮಾಡಿ ಮುಚ್ಚಲಾಗಿರುತ್ತದೆ. ಈ ಮುಚ್ಚಳ ಪಡಗದ ಮೇಲೆ ಬಿಗಿಯಾಗಿ ಕುಡಿಸಲು ಆ ಪಡಗದ ಕೆಳಭಾಗದಲ್ಲಿ ಕಬ್ಬಿಣದ ರಾಡಿನಿಂದ ತಯಾರಿಸಲಾದ ಗುಂಡಾಕಾರದ ಚಕ್ರಕ್ಕೆ ಹಗ್ಗ ಹಾಕಿ ಎಳೆಯಲು ಪಡಗ ಮತ್ತು ಗಾಲಿಯ ನಡುವೆ ಜಾಗ ಬಿಟ್ಟಿರುತ್ತಾರೆ. ಬಿಟ್ಟ ಜಾಗದಲ್ಲಿ ಕಟ್ಟಿಗೆಯಿಂದ ತಯಾರಿಸಲಾದ ೩ ಕುದುರೆಗಳನ್ನು ಇಟ್ಟಿರುತ್ತಾರೆ. ನಂತರ ಮೇಲಿನ ಚರ್ಮದ ಮುಚ್ಚಳಿಗೆ ಹಾಗೂ ಪಡಗದ ಕೆಳಗಿನ ಗಾಲಿಗೆ ಹಗ್ಗ ಹಾಕಿ ಎಳೆದು ಆ ಮುಚ್ಚಳಿಕೆಯನ್ನು

ಬಿಗಿಗೊಳಿಸಿ ಸುಮಧುರವಾಗಿ ನಾದ ಹೊರ ಹೊಮ್ಮುವಂತೆ ಮಾಡುತ್ತಾರೆ. ಚೌಡಿಕೆ ನಾದಕ್ಕೆ ತಕ್ಕಂತೆ ಈ ಸಂಬಾಳ ಶ್ರುತಿಗೊಳಿಸಲು, ಸಂಬಾಳದ ನಡುವೆ ಎರಡೆರಡು ಸುತ್ತು ಹಗ್ಗದಿಂದ ಸರಪಳಿ ತರ ಹೆಣೆದಿರುತ್ತಾರೆ. ಇದನ್ನು ಮೇಲೆ ಕೆಳಗೆ ಸರಿಸುವುದರಿಂದ ನಾದದ ಗುಣಧರ್ಮ ಹೆಚ್ಚು ಕಡಿಮೆಯಾಗುತ್ತದೆ. ಬಿಡಿಬಿಡಿಯಾಗಿರುವ ಎರಡು ವಾದ್ಯಗಳನ್ನು ಒಂದೆ ರೀತಿಯಲ್ಲಿ ತಯಾರಿಸಿ ಈ ಸಂಬಾಳದ ಮಧ್ಯೆ ಲೋಹದಿಂದ ತಯಾರಿಸಲಾದ ಒಂದು ತಾಳವನ್ನು ಕಟ್ಟಿರುತ್ತಾರೆ.

ಸಾಮಾನ್ಯ ಮನುಷ್ಯರಿಂದ ಹಿಡಿದು ಪಂಡಿತ-ಪಾಮರರು ಈ ಸಂಬಾಳ ನಾದವನ್ನು ಕೇಳಿದರೆ ಸಾಕು ವ್ಹಾವ್ ಎಂಥ ಸುಮಧುರವಾದಂತ ನಾದ ಎಂದು ಈ ಸಂಬಾಳ ವಾದ್ಯದ ನಾದದ ಬಗೆಗೆ ವರ್ಣನೆ ಮಾಡದೆ ಇರಲಾರದು. ಅಂತ ಅದ್ಭುತ ನಾದ ಈ ಸಂಬಾಳ ವಾದ್ಯದ ನಾದ.

ಗೊಂದಲಿಗರ ಮೇಳದಲ್ಲಿ ಮುಖ್ಯಗಾಯಕನೆ ಸಂಬಾಳ ವಾದ್ಯವನ್ನು ಸೊಂಟಕ್ಕೆ ಕಟ್ಟಿಕೊಂಡು, ಎರಡು ಮುಖ ಇರುವ ಈ ಸಂಬಾಳ ವಾದ್ಯದ ಮಧ್ಯೆ ಒಂದು ತಾಳವನ್ನು ಕಟ್ಟಿರುತ್ತಾರೆ. ಎಡಗೈಯಲ್ಲಿ ಒಂದು ತಾಳವನ್ನು ಹಿಡಿದುಕೊಂಡು, ಎಡಗಡೆ ವಾದ್ಯವನ್ನು ನುಡಿಸುವುದರ ಜೊತೆಗೆ ಆ ತಾಳವನ್ನು ತಟ್ಟುತ್ತಾನೆ. ಬಲಗೈನ ಹಸ್ತ ಮತ್ತು ಬೆರಳುಗಳಿಂದ ಬಲಗಡೆ ಇರುವ ಸಂಬಾಳ ವಾದ್ಯವನ್ನು ನುಡಿಸುವುದರಿಂದ ವಿವಿಧ ಪ್ರಕಾರದ ನಾದ ಹೊರಹೊಮ್ಮುತ್ತದೆ. ಎಡಗೈಯಲ್ಲಿ ವಾದ್ಯದ ನಾದದ ಬದಲಾಗಿ ತಾಳದ ನಾದವೆ ಹೆಚ್ಚು ಕೇಳಿಬರುತ್ತದೆ.

ಒಂದೊಂದು ಸಲ ಈ ಸಂಬಾಳ ವಾದ್ಯವನ್ನು ಬಿದಿರಿನ ಕೋಲುಗಳಿಂದ ನುಡಿಸುವುದು ಕಂಡುಬರುತ್ತದೆ. ನವರಾತ್ರಿ, ದೀಪಾವಳಿ ದೇವಿಯ ಸನ್ನಿದಾನದಲ್ಲಿ ಗೊಂದಳ ಹಾಕುವ ಸಂದರ್ಭದಲ್ಲಿ ಕೈಗಳಿಂದ ನುಡಿಸಬಾರದೆಂದು ಶಾಸ್ತ್ರ ಇರುವುದರಿಂದ, ಆ ಸಂದರ್ಭದಲ್ಲಿ ಮಾತ್ರ ಕೋಲುಗಳಿಂದ ನುಡಿಸಿ ನಂತರ ಕೈಗಳಿಂದ ನುಡಿಸುತ್ತಾರೆ ಎಂದು ತಿಳಿದು ಬರುತ್ತದೆ. ಕೈಗಳಿಂದ ನುಡಿಸಿದಾಗ ಬರುವಂತ ಸಂಬಾಳದ ನಾದ ಕೋಲುಗಳಿಂದ ನುಡಿಸಿದಾಗ ಬರೋದಿಲ್ಲ.

ಗೊಂದಲಿಗರು ತಮ್ಮ ಸಂಗೀತ ಕಚೇರಿ ಪ್ರಾರಂಭವಾಗುವ ಮುಂಚೆ ಸಂಬಾಳ ವಾದ್ಯವನ್ನು ಶ್ರುತಿಗೊಳಿಸಿ ಚೌಡಿಕೆ ನಾದದ ಜೊತಗೆ ಉಠಾನ್ (ತಿಹಾಯಯುಕ್ತ ಬೋಲ್‌ಗಳನ್ನು ಮೂರು ಸಲ ನುಡಿಸಿ ಸಮ್ಮಿನ ಮೇಲೆ ಬರುವುದು) ಬಾರಿಸಿ ನಂತರ ಹಾಡುಗಳು ಪ್ರಾರಂಭ ಮಾಡುತ್ತಾರೆ. ಆ ಹಾಡು ಯಾವ ತಾಳದಲ್ಲಿತ್ತೊ ಆ ತಾಳದ ಜೊತೆಗೆ ಆ ತಾಳದ ಬದಲು ಠಿಖಾ ನುಡಿಸುವುದು ಕಂಡುಬರುತ್ತದೆ. ಆ ತಾಳದ ನಡುವೆ ಮಧ್ಯ ದೃತ್ ಲಯಕಾರಿ ಮಾಡುತ್ತಾರೆ. ಈ ಸಂಬಾಳ ವಾದ್ಯವನ್ನು ತಮ್ಮ ತೊಡೆಯ ಸಂಧಿಯಲ್ಲಿ ಇಟ್ಟುಕೊಂಡು, ಆ ತೊಡೆಗಳಿಂದ ಆ ಸಂಬಾಳ ವಾದ್ಯದ ಹಗ್ಗಗಳು ಎತ್ತುವುದರಿಂದ ವಿವಿಧ ರೀತಿಯಲ್ಲಿ ನಾದ ಹೊರಹೊಮ್ಮುವಂತೆ ಮಾಡುತ್ತಾರೆ.

ಇವರ ಸಂಬಾಳ ವಾದ್ಯದಲ್ಲಿ ನುಡಿಸುವ ತಾಳಗಳು ಈ ರೀತಿ ಕಂಡುಬರುತ್ತದೆ.

೧) ಕೆಹರವಾ ೨) ಭಜನ್

೩) ದೀಪಚಂದಿ ೪) ದಾದ್ರ ತಾಳಗಳು

